ಏಕನಾದದೊಂದಿಗೆ ಜೋತಿಷ್ಯ ನುಡಿಯುತ್ತಿದ್ದರು. ಇವರು ಹಾಕುವ ವೇಷ ಜನರನ್ನು ಧಾರ್ಮಿಕವಾಗಿ ಪ್ರಚೋದಿಸುತ್ತಿತ್ತು. ತಲೆಗೂದಲಿನ ಜಡೆಯನ್ನು ಗಂಟುಹಾಕಿ ಸಾದು ಸನ್ಯಾಸಿಗಳಂತೆ ಮಾತನಾಡುತ್ತಿದ್ದರು. ಇವರಲ್ಲಿ ಒಬ್ಬ ಹಿರಿಯನಿಗೆ ೭೦ ವರ್ಷ ವಯಸ್ಸು ಆತನು ಖಾದಿ ಜುಬ್ಬ ಧರಿಸಿದ್ದ ಅದು ಮೊಳಕಾಲನ್ನು ದಾಟಿತ್ತು. ಹಣೆಗೆ ಮಧ್ಯ ಕುಂಕುಮವನ್ನಿಟ್ಟುಕೊಂಡು ಕಿವಿ, ಗಂಟಲಿಗೆ ಕುಂಕುಮ ಮತ್ತು ವಿಭೂತಿ ಇಟ್ಟು ಛತ್ರಿಯನ್ನು ಹಿಡಿದು ನಡೆಯುತ್ತಿದ್ದ. ಕೈಯಲ್ಲಿ ಬಿದಿರಿನ ಉರುಗೋಲಿರುವುದು.

ಇನ್ನೊಬ್ಬ ೨೨ ವರ್ಷದ ಅವಿವಾಹಿತ. ಅವನು ಜೋಳಿಗೆಯನ್ನು ಕೆಳಗೆ ಇಟ್ಟು ತಲೆ ಗಂಟು ಹಾಕಿ ಕುಂಕುಮವನ್ನು ಹಚ್ಚಿಕೊಳ್ಳುತ್ತಿದ್ದ. ಹುಲಿ ಅಥವಾ ಜಿಂಕೆಯ ಚರ್ಮವನ್ನು ಹೆಗಲಿಗೆ ಹಾಕಿಕೊಂಡಿದ್ದ. ಕಿವಿಗೆ ಓಲೆಯನ್ನು ಹಾಕಿಕೊಂಡಿದ್ದು ಒಂದು ಪುಟ್ಟ ಲುಂಗಿ ಕಟ್ಟಿಕೊಂಡಿದ್ದು ನೋಡುತ್ತಿದ್ದಂತೆ ಇವರಿಬ್ಬರೂ ತಾಳೆಗರಿಗಳ ಪಸ್ತಕ ಹಾಗೂ ತಂಬೂರಿಯನ್ನು ಹಿಡಿದು ಭಿಕ್ಷೆಗಾಗಿ ನಡೆಯುತ್ತಿದ್ದರು. ಇವರಲ್ಲಿ ೧೫ ವರ್ಷದ ಹುಡುಗನೂ ಸಹ ಜ್ಯೋತಿಷ್ಯ ಹೇಳುವುದರಲ್ಲಿ ನಿಪುಣ. ಜಾತಕ, ಪಂಚಾಂಗವನ್ನು ಓದುವುದು, ೫೦ ಪೈಸೆ, ೨೫ ಪೈಸೆಗಾಗಿ ದಕ್ಷಿಣೆಗೆ ಜ್ಯೋತಿಷ್ಯ ಹೇಳುವರು.

ಇವರು ಕುಳಿತ ಕಡೆ ರಾಗಿ ದವಸ ಧಾನ್ಯ ತಂದು ನೀಡಲಾಗುತ್ತಿತ್ತು. ಈ ಹಳ್ಳಿಯಲ್ಲಿ ಕೆಲವರಿಗೆ ಜಮೀನಿದ್ದು ರಾಗಿಯನ್ನು ಬೆಳೆಯುತ್ತಿದ್ದು, ದನಕರುಗಳಿದ್ದವು ಎಂದು ಹೇಳಿದರು. ಇವರಿಗೆ ಒಬ್ಬ ಗುರು ಇದ್ದು ಅವನು ಗುರುವಿಗೆ ವರ್ಷಕ್ಕೆ ಮೂಲದವರು ಎಂದು ಹೇಳಿದ್ದರು. ಇವರು ತಮ್ಮ ಗುರುವಿಗೆ ವರ್ಷಕ್ಕೆ ೩೦ ಪೈಸೆಯಂತೆ ಗುರುಕಾಣಿಕೆಯನ್ನು ಕೊಟ್ಟು ಗುರುವಿಗೆ ಅರ್ಪಿಸುವರು.

**ವಾಸಸ್ಥಳದ ಚಲನೆ**

ಅಲೆಮಾರಿ ಮಲಕೆಜಂಗಮರು ವರ್ಷದ ಒಂಬತ್ತು ತಿಂಗಳು ಅಲೆದಾಡುತ್ತಾರೆ ಮೇ ಜೂನ್ ತಿಂಗಳನ್ನು ಬಿಟ್ಟು ಅಂದರೆ ಜುಲೈಯಿಂದ ಸೆಪ್ಟಂಬರ್‌ರದವರಿಗೆ ಮಳೆಗಾಲದಲ್ಲಿ ಮನೆಗಳಲ್ಲಿ ಇರುವರು. ಈ ಸಂದರ್ಭದಲ್ಲಿ ಮದುವೆ ಮಾತುಕತೆಗಳನ್ನು ನಡೆಸುವರು.

ಬೆಂಗಳೂರು ಮತ್ತು ಮೈಸೂರು ಜಿಲ್ಲೆಯಲ್ಲಿ ಇವರು ವಾಸವಾಗಿರುವರು. ಇವರು ಟಿಕೆಟ್ ಇಲ್ಲದೆ ರೈಲಿನಲ್ಲಿ ಪ್ರಯಾಣಿಸುತ್ತಿದ್ದರು. ರೈಲ್ವೇ ನಿಲ್ದಾಣದ ಬಳಿ ನೆಲೆಸುತ್ತಾ ಚನ್ನಪಟ್ಟಣ, ಮದ್ದೂರು, ಮಂಡ್ಯ, ಮೈಸೂರು, ನಂಜನಗೂಡು ಇಲ್ಲಿ ಮರಗಳ ಕೆಳಗೆ ಪಾಳು ಮಂಟಪದ ಕೆಳಗೆ ಬದುಕುತ್ತಿದ್ದರು. ಕೆಲವರು ಇಲ್ಲಿಂದ ಚಿಕ್ಕಮಗಳೂರು, ಶಿವಮೊಗ್ಗ, ಊಟಿಯ ಕಡೆ ಪ್ರಯಾಣ ಮಾಡುವರು. ಇವರು ನೆಲೆ ನಿಲ್ಲುವ ಅವಧಿ ಕನಿಷ್ಠ ೩ ದಿನದಿಂದ ೧೫ ದಿವಸದವರೆಗೂ ಇರುವುದು.

ಮದುವೆ ಮತ್ತು ಕುಟುಂಬ : ಬುಡುಗ ಜಂಗಮರು ಹೇಳುವಂತೆ ಸಮಬೆಡಗುಗಳಲ್ಲಿ ವಿವಾಹ ನಿಷಿದ್ಧ. ಇವರಲ್ಲಿ ಅನೇಕ ಬೆಡಗುಗಳಿವೆ.

ಉದಾ: ವಿಭೂತಿ, ಪಾನಗಂಟಿ, ನ್ಯಾರಗಂಟಿ, ಹಂದಿ (ಅಂದಿ), ಶಂಕು, ಕಲ್ಯಾಣಮೊರು,

ಅವಧೂತಿ, ಇವರು ಈ ಬೆಡಗುಗಳ ಮೂಲದ ಬಗ್ಗೆ ವಿವರಿಸಲಿಲ್ಲ. ಕಾರಣ ಅಕ್ಷರವಿಲ್ಲದ ಅಲೆಮಾರಿಗಳನ್ನು ಕೇಳಿದರೆ ಅವೆಲ್ಲಾ ದೇವರಿಗೆ ಗೊತ್ತು ಸ್ವಾಮಿ ಎಂದು ಹೇಳಿದರು.

ಇಲ್ಲಿಯವರಿಗೆ ಕುಲ ಪಂಚಾಯ್ತಿಯೇ ಅಂತಿಮ. ಈ ಜಂಗಮರಲ್ಲಿ ಮದುವೆ ವಯಸ್ಸು ಹುಡುಗನಿಗೆ ೩೦ ಹಾಗೂ ಹುಡುಗಿಗೆ ೧೪ ವರ್ಷ, ಇತ್ತೀಚೆಗೆ ೨೫ವರ್ಷದ ಹುಡುಗ ೧೦ ವರ್ಷದ ಹುಡುಗಿ ಜೊತೆಗೆ ಮದುವೆಯಾಗಿದೆ. ಹೊಸದೊಡ್ಡಿಯ ಜಂಗಮರು ತಮ್ಮ ಮದುವೆ ಸಂಬಂಧಗಳ ೫ ಪ್ರದೇಶಗಳಿಗೆ ಮಾತ್ರ ಗುರುತಿಸಿಕೊಂಡಿದ್ದಾರೆ.

೧. ಹೊಸ ದೊಡ್ಡಿ, ರಾಮನಗರ ತಾ.ಬೆಂಗಳೂರು ೧೦೦ ಕುಟುಂಬ

೨. ಕೊರಡಿಗೆರೆ, ರಾಮನಗರ ತಾ. ಬೆಂಗಳೂರು ೩೦ ಕುಟುಂಬ

೩. ಅಯ್ಯನಗುಡಿ, ಚನ್ನಪಟ್ಟಣ, ಬೆಂಗಳೂರು ೩೦ ಕುಟುಂಬ

೪. ಶಿವರಾಂಪುರ ಕುಣಿಗಲ್, ತುಮಕೂರು ೩೦ ಕುಟುಂಬ

೫. ಮುಳುಬಾಗಿಲು ಕೋಲಾರ ೭೫ ಕುಟುಂಬ

೬. ಸಿಂಗರಹಳ್ಳಿ, ದೇವನಹಳ್ಳಿ,ಬೆಂಗಳೂರು ೧೦೦ ಕುಟುಂಬ

ಸೋಧರ ಮಾವನ ಜೊತೆಯಲ್ಲಿ ಮದುವೆಗಳು ನಡೆಯುತ್ತಿದ್ದವು. ಇವರಲ್ಲಿ ಹುಡುಗಿಯ ತಂದೆ ತಾಯಿಗಳಿಗೆ ವೀಳೆದೆಲೆ ಕೊಟ್ಟು ಹೆಣ್ಣು ಕೇಳುತ್ತಿದ್ದರು. ಮದುವೆಗೆ ಮೊದಲೇ ಹುಡುಗ ಹುಡುಗಿ ಭೇಟಿಯಾಗುವಂತಿರಲಿಲ್ಲ. ಮದುವೆಗೆ ಮೊದಲು ಸಮ್ಮತಿಯನ್ನು ಪಡೆಯಲು ವೀಳ್ಯಶಾಸ್ತ್ರವನ್ನು ಮಾಡಲಾಗುತ್ತಿತ್ತು.

ಹೆಣ್ಣು ಋತುಮತಿಯಾದ ಮೊದಲೇ ಮದುವೆ ನಡೆಯುತ್ತಿತ್ತು ಮದುವೆಯ ನಂತರ ಅವಳು ಋತುಮತಿಯಾಗುವ ತನಕ ಅವಳು ತಂದೆಯ ಮನೆಯಲ್ಲೇ ಇರುವರು. ಅವಳು ಋತುಮತಿಯಾದಾಗ ಶೋಭನ ನೆರವೇರಿಸಲಾಗುತ್ತಿತ್ತು. ಹೆಣ್ಣು ಮತ್ತು ಗಂಡಿನ ಕಡೆಯವರೆಲ್ಲಾ ಸೇರಿ ಮಾಂಸದ ಊಟ ಹಾಕುತ್ತಿದ್ದರು. ಹೆಣ್ಣು ಗಂಡನ್ನು ಕುಳ್ಳರಿಸಿ ಅವರಿಗೆ ಮುಯ್ಯ (ಹಣ) ಕೊಡಲಾಗುವುದು. ಈ ಜಂಗಮರಲ್ಲಿ ಹಿರಿಯರನ್ನು ಊಟಕ್ಕೆ ತೆಂಗಿನಕಾಯಿಗಳನ್ನು ತೆಗೆದು ಕೊಂಡು ಪಕ್ಕದ ಆಂಜನೇಯ ದೇವಸ್ಥಾನದ ಬಳಿ ಪೂಜೆ ಮಾಡಿಸುತ್ತಿದ್ದರು. ಮದುವೆಯ ನಂತರ ತನ್ನ ತವರಿನ ಸಂಬಂಧ ಕಮ್ಮಿಯಾಗುತ್ತಿತ್ತು. ಇಲ್ಲಿ ವರದಕ್ಷಿಣೆ ಇರಲಿಲ್ಲ. ಮದುವೆಯ ದಿನ ಹುಡುಗನ ಕಡೆಯವರು ಹುಡುಗಿಗ ಮದುವೆ ಸೀರೆಯನ್ನು ಕೊಡುತ್ತಿದ್ದರು. ಇತ್ತೀಚೆಗೆ ತಿಳಿದಂತೆ ಒಂದು ಮದುವೆಯಲ್ಲಿ ಮದುವೆಯ ಹುಡುಗನಿಗೆ ೨೦೦ ರೂ. ವರದಕ್ಷಿಣೆ ಕೊಡಲಾಗುತ್ತಿತ್ತು. ಇದಕ್ಕೆ ಕಾರಣ ಒಬ್ಬ ಹೈಸ್ಕೂಲು ಓದಿದ ಹುಡುಗ ಒಬ್ಬ ಬಸ್ ಕಂಡಕ್ಟರ್ ಆಗಿದ್ದ. ವಿವಾಹ ವಿಚ್ಛೇದನ ಬಹಳ ಸುಲಭವಾದದ್ದು ಇವರು ಎಲ್ಲಾ ಹಿಂದೂ ದೇವತೆಗಳ ಪೂಜಿಸುತ್ತಾರೆ. ಅತ್ಯಂತ ಅಲೆಮಾರಿಗಳಾಗಿ ಬದುಕುವ ಇವರಿಗೆ ಸರ್ಕಾರ ಏನೂ ನೀಡಿಲ್ಲ. ಇವರಲ್ಲಿ ಅನೇಕ ಭಾಷೆಗಳನ್ನು ಮಾತನಾಡಬಲ್ಲವರಾಗಿದ್ದಾರೆ. ನಾವು ಕೇಳಿದಂತೆ ತೆಲುಗು, ಹಿಂದಿ, ಮಲೆಯಾಳಂ, ತಮಿಳು ಭಾಷೆಗಳನ್ನು ಮಾತನಾಡಬಲ್ಲರು (ಮಿಶ್ರಾ, ಪಿ ಕೆ :೧೯೭೧ ೪೧-೪೭).

ಆಂಧ್ರ ಪ್ರದೇಶದ ಲೇಖಕ ಡಾ ಎನ್ ಆರ್ ವೆಂಕಟೇಶಂ ಅವರು ಬುಡ್ಗಜಂಗಮರ ಕುರಿತಾದ ಅಧ್ಯಯನದಲ್ಲಿ ಸ್ಪಷ್ಟವಾಗಿ ಆಚಾರ ವಿಚಾರ ಕುಲ ಬೆಡಗುಗಳನ್ನು ದಾಖಲೆಗೊಳಿಸಿದ್ದಾರೆ. ಕರ್ನಾಟಕದಲ್ಲಿ ಡಾ ಕೆ ಎಂ ಮೇತ್ರಿ ಅವರು ಸಂಪಾದಿಸಿದ ಕರ್ನಾಟಕದ ಬುಡ್ಗಜಂಗಮರು ಎಂಬ ಪುಸ್ತಕ ಹಾಗೂ ಅಧ್ಯಯನಕಾರರಾದ ಧಾರವಾಡ ವಿಶ್ವವಿದ್ಯಾಲಯ ಡಾ ಬಿ ಎಂ ಹೊಸಮನಿ, ಹಂಪಿ ವಿಶ್ವವಿದ್ಯಾಲಯದ ಡಾ ಯಂಕನಗೌಡ್ರ ಮತ್ತು ಪ್ರೊ ಬರುಗೂರು ರಾಮಚಂದ್ರಪ್ಪ ಅವರ ಸಂಪಾದನೆಯಲ್ಲಿ ಲೇಖಕ ಯಳನಾಡು ಅಂಜನಪ್ಪ ಬರೆದ ಹಗಲು ವೇಷದವರ ಸಂಸ್ಕೃತಿ ಪುಸ್ತಕದಲ್ಲಿ ವಿವರ ಮತ್ತು ಮಾಹಿತಿಗಳು ದಾಖಲಾಗಿವೆ.

ಬುಡ್ಗ ಜಂಗಮರ ಆಚಾರ ವಿಚಾರ ಬೆಡಗು ಮತ್ತು ವೇಷಗಳ ಕುರಿತಾಗಿ ಎಡ್ಗರ್ ಥರ್ಸ್ಟನ್ ದಾಖಲಿಸಿದ್ದು ಬಿಟ್ಟರೆ ಇನ್ನುಳಿದ ವಿದ್ವಾಂಸರು ಲೇಖಕರು ಮೇಲ್ನೋಟಕ್ಕೆ ಕಾಣುವ ಸಂಗತಿಗಳು ಸತ್ಯಸಂಗತಿ ಎಂದು ಸಾಂಸ್ಕೃತಿಕವಾಗಿ ದಾಖಲಿಸಿರುವುದು ಕಾಣಬಹುದು.

ಮೂಲ ಕಾಡಾಡಿಗಳಾದ ಬುಡ್ಗಜಂಗಮರು ನಾಡಿನತ್ತ ಹೊರಟಾಗ ಸಾಂಸ್ಕೃತಿಕ ಕಲೆಗಳಾದ ಕಥೆ, ಶಾಸ್ತ್ರ, ಹಗಲು ವೇಷಗಾರಿಕೆ ಕೈಚಳಕ, ಡಿಮ್ಮಿಹಾಡು ಇವುಗಳ ಮೂಲಕ ಪ್ರದರ್ಶನ ಮಾಡಿ ಭಿಕ್ಷೆಬೇಡಿ ಹೊಟ್ಟೆತುಂಬಿಕೊಳ್ಳುವುದಾದರೆ, ಸಂಜೆಯಾದೊಡನೆ ಮಾಂಸದ ಊಟಕ್ಕಾಗಿ ಬೇಟೆಯು ಅತ್ಯವಶ್ಯಕವಾಗಿರುತ್ತಿತ್ತು. ಊರ ಹೊರವಲಗಳಲ್ಲಿ ಡೇರೆಗಳನ್ನು ಹಾಕಿ ಜೀವಿಸುವ ಇವರ ಕುರಿತಾಗಿ ಕೆಲವು ಲೇಖಕರು, ಅಧ್ಯಯನಕಾರರು ತಮ್ಮ ಲಿಯ ಪುಸ್ತಕ, ಲೇಖನಗಳಲ್ಲಿ ದಾಖಲಿಸಿರುವುದುಂಟು.

೧೯೫೦ರಲ್ಲಿ ಹೈದರಾಬಾದಿನ ಹಿಂದಿನ ನಿಜಾಂ ಪ್ರಭುತ್ವದಲ್ಲಿ ಬೇಡ (ಬುಡ್ಗ) ಜಂಗಮ್ ಸಮುದಾಯವನ್ನು ಪರಿಶಿಷ್ಟ ಜಾತಿ ಪಟ್ಟಿಯ ಕ್ರಮಸಂಖ್ಯೆ ೪ರಲ್ಲಿ ದಾಖಲಿಸಲಾಗಿದೆ. ೧೯೫೬ರಲ್ಲಿ ಭಾಷಾವಾರು ಪ್ರಾಂತ್ಯ ರಚನೆಯಾದ ಮೇಲೆ ಕನ್ನಡ ನಾಡಿನ ಹೈದ್ರಾಬಾದ ಕರ್ನಾಟಕ ಪ್ರದೇಶದಲ್ಲಿ ಬುಡ್ಗಜಂಗಮರು ದಾಖಲಾದರು. ೧೯೬೦ರಲ್ಲಿ ಸಂವಿಧಾನ ಬದ್ಧವಾಗಿ ಕರ್ನಾಟಕದಲ್ಲಿ ಅಂದಿನ ಮೈಸೂರು ರಾಜ್ಯದ ಬೀದರ, ಗುಲಬರ್ಗಾ ಮತ್ತು ರಾಯಚೂರು ಜಿಲ್ಲೆಗಳಿಗೆ ಸೀಮಿತಗೊಂಡಂತೆ ಬೇಡ (ಬುಡ್ಗ) ಜಂಗಮ್ ಸಮುದಾಯ ಪರಿಶಿಷ್ಟ ಜಾತಿ ಪಟ್ಟಿಯ ಕ್ರ ಸಂಖ್ಯೆ ೪ರಲ್ಲಿ ದಾಖಲಾದರು. ಭಾರತ ಸರಕಾರ ೧೯೭೬ರ ಮೇ ಒಂದರಂದು ಹೊರಡಿಸಿದ ಪಟ್ಟಿಯ ಪ್ರಕಾರ ಆಂಧ್ರಪ್ರದೇಶ ಹಾಗೂ ಮಹಾರಾಷ್ಟ್ರ ರಾಜ್ಯಗಳ ಪರಿಶಿಷ್ಟ ಜಾತಿಯ ಪರಿಷ್ಕೃತ ಪಟ್ಟಿಯ ಕ್ರ ಸಂಖ್ಯೆ ೯ರಲ್ಲಿ ಮತ್ತು ಕರ್ನಾಟಕದ ಅದೇ ಪಟ್ಟಿಯ ಕ್ರ ಸಂಖ್ಯೆ ೧೯ರಲ್ಲಿ ಬೇಡ ಜಂಗಮ್, ಬುಡ್ಗ ಜಂಗಮ್ ಎಂಬ ಜಾತಿಗಳು ದಾಖಲಾಗಿವೆ. ಇವು ಬೇಡ ಜಂಗಾಲ ಮತ್ತು ಬುಡ್ಗ ಜಂಗಾಲ ಸಮುದಾಯವನ್ನೇ ಪ್ರತಿನಿಧಿಸುವ ಪದಗಳಾಗಿದ್ದರೂ ಸರ್ಕಾರಕ್ಕೆ ಬಿಡಿಸಲಾಗದ ಕಗ್ಗಂಟಾಗಿರುವುದರಿಂದ ಸಂವಿಧಾನಬದ್ಧ ಸೌಲಭ್ಯಗಳಿಂದ ಈ ಸಮುದಾಯಗಳು ವಂಚಿಸಲ್ಪಟ್ಟಿವು.

**ಬುಡ್ಗ ಜಂಗಮ್ ಪದ ಬಳಕೆ ಮತ್ತು ಔಚಿತ್ಯ**

ಬುಡ್ಗಜಂಗಮ್ (ಬೇಡ ಜಂಗಮ್) ಪದ ನಿಷ್ಪತ್ತಿ ಕುರಿತು ಹಲವಾರು ತಜ್ಞರ ಭಿನ್ನಾಭಿಪ್ರಾಯಗಳು ಬೆಳಕಿಗೆ ಬಂದಿವೆ. ಪ್ರೊ ಬಿ ರಾಮರಾಜು ಅವರು ತಮ್ಮ "ತೆಲಗು

ಜಾನಪದ ಗೇಯ ಸಾಹಿತ್ಯಂ" ಎಂಬ ಕೃತಿಯಲ್ಲಿ ಬುಡಿಗೆ ಎಂಬ ವಾದ್ಯವನ್ನು ನುಡಿಸುತ್ತಾ ಕಥೆ ಹೇಳುವ ಜನರನ್ನು ಬುಡ್ಗ ಜಂಗಾಲು ಎಂದು ಕರೆದಿದ್ದಾರೆ.

ಮರುವೂರು ಕೋದಂಡರಾಮರೆಡ್ಡಿ ಅವರು ಬರೆದ "ಮಾಂಡಲಿಕ ಪದಕೋಶಂ" ಎಂಬ ಗ್ರಂಥದಲ್ಲಿ ಇವರನ್ನು ವಿವರಿಸುತ್ತಾ 'ತಂದಾನಾ' ಕಥೆಗಳನ್ನು ಹೇಳಿ ಜೀವಿಸುವ ಬುರ್ರ ಕಥೆಯವರು ಹಾಗೂ 'ಬುಡಗೇಲು' ವಾದ್ಯವನ್ನು ನುಡಿಸುತ್ತಾ ಭಿಕ್ಷೆ ಎತ್ತುವವರೇ 'ಬುಡ್ಗ ಜಂಗಾಲ' ಜಾತಿಯವರು ಎಂದು ತಿಳಿಸಿರುತ್ತಾರೆ.

ಹಗಲು ವೇಷ ಹಾಕುವ ಜನರನ್ನು ಬುಡ್ಗ ಜಂಗಾಲು ಎಂದು ಕರೆದಿರುವುದಾಗಿ 'ಹಗಲು ವೇಷದವರ ಸಂಸ್ಕೃತಿ' ಎಂಬ ತಮ್ಮ ಪುಸ್ತಕದಲ್ಲಿ ಯಳನಾಡು ಅಂಜನಪ್ಪನವರು ದಾಖಲಿಸಿದ್ದಾರೆ.

ಎಡ್ಗರ್ ಥರ್‍ಸ್ಟನ್ ಅವರು ಹಗಲು ವೇಷದವರನ್ನು (Paghathi Vesham) ಕುರಿತು A class of Telgu beggar, who put in disguises (vesham) while begging (Madras Census report 1901). At the Annual festival at Thirupathi in honour of the godess Gangamma, Custom requires the people to appear in a different disguise every morning and evening. These disguise include those of a Bairagi, Serpent etc. Mannual of the North Arcot District 1987 Vol V, p 454 ಎಂದು ಬರೆಯುತ್ತಾರೆ. ತಿರುಪತಿ ಗಂಗಮ್ಮ ಎನ್ನುವ ದೇವತೆಯ ಗೌರವರ್ಥ ನಡೆಯುವ ವಾರ್ಷಿಕ ಜಾತ್ರೆಯಲ್ಲಿ ಪ್ರತಿದಿನ ಬೆಳಿಗ್ಗೆ ಸಂಜೆ ಬೈರಾಗಿ, ಸರ್ಪ ಮುಂತಾದ ಬೇರೆ ಬೇರೆ ವೇಷಧರಿಸಿ ಭಿಕ್ಷೆ ಎತ್ತುವ ತೆಲಗು ಭಿಕ್ಷುಕ ವರ್ಗವನ್ನು ಹಗಲು ವೇಷದವರು ಎಂದು ಥರ್‍ಸ್ಟನ್ ದಾಖಲಿಸಿದ್ದಾರೆ.

ಆಂಧ್ರಪ್ರದೇಶದ ಪ್ರಾಂತ್ಯದಲ್ಲಿ ತೆಲಂಗಾಣ ಬೇಟೆಯಾಡಿ ಜೀವಿಸುವ ಜನರನ್ನು 'ಬೋಯ' ಎಂದೂ ಕರ್ನಾಟಕದಲ್ಲಿ 'ಬೇಡ' ಎಂದೂ ಕರೆಯಲಾಗುತ್ತಿದೆ. ಥರ್‍ಸ್ಟನ್ ಅವರು ಬೇಡರನ್ನು ಬೇಡ ಜಂಗಾಲು ಎಂದು ಕರೆದಿರುವುದರಲ್ಲಿ ಅರ್ಥವಿದೆ.

ಬುಡ್ಗ ಜಂಗಾಲು ಜನ ನಾನಾ ವೇಷಗಳನ್ನು ಹಾಕುವುದರಿಂದ ಇವರನ್ನು ಬಹುರೂಪಿಗಳು ಎಂದು ಗುರುತಿಸಿರುವುದು ಕಂಡು ಬರುತ್ತದೆ. ವಚನಕಾರರಲ್ಲೊಬ್ಬರಾದ 'ಅಂಬಿಗರ ಚೌಡಯ್ಯ'ನು ಬಹುರೂಪಿ ಸಮುದಾಯಕ್ಕೆ ಸೇರಿದವನೆಂದು ತಿಳಿದುಬರುತ್ತದೆ. ಬೆಸ್ತರು ಬೇಟೆಯಾಡುವುದರಿಂದ ಒಂದು ಅರ್ಥದಲ್ಲಿ ಇವರನ್ನು ಬೇಡ ಜಂಗಾಲು ಎಂದು ಕರೆದಿರಲೂ ಬಹುದು ಎಂದು ಯಳನಾಡು ಅಂಜನಪ್ಪನವರ ತರ್ಕ.

ಕೆ ಎಸ್ ಸಿಂಗ್ ಅವರ ಪುಸ್ತಕ 'ಪೀಪಲ್ ಆಫ್ ಇಂಡಿಯಾ'ದ ರಾಷ್ಟ್ರೀಯ ಸರಣಿ ಪುಸ್ತಕ ಎರಡರಲ್ಲಿ ಮಾನವ ಕುಲವಿವರಣಾ ವಿಜ್ಞಾನದ ಹಿನ್ನೆಲೆಯಲ್ಲಿ ಪರಿಶಿಷ್ಟ ಜಾತಿಯ ಬೇಡ ಜಂಗಮ್, ಬುಡ್ಗ ಜಂಗಮ್ ಸಮುದಾಯದ ಬಗ್ಗೆ ಮಹತ್ವಪೂರ್ಣ ಮಾಹಿತಿಯನ್ನು ಅದರ ಪುಟಸಂಖ್ಯೆ ೨೦೨-೨೦೭ರಲ್ಲಿ ನೀಡಲಾಗಿದೆ. ಅದರಲ್ಲಿ ಬೇಡ ಜಂಗಮ್, ಬುಡ್ಗ ಜಂಗಮ್ ಸಮುದಾಯದವರು ಆಂಧ್ರದ ಕರಾವಳಿ, ರಾಯಲ್ ಸೀಮಾ ಮತ್ತು ತೆಲಂಗಾಣಾ ಪ್ರದೇಶದಲ್ಲಿ ಹರಡಿದ್ದು, ೧೯೮೧ರ ಜನಗಣತಿಯ ಪ್ರಕಾರ ಅವರ ಜನಸಂಖ್ಯೆ ೧೨,೦೨೪ ಎಂದು

ದಾಖಲಿಸಿದ್ದಾರೆ. ಅವರು ಕರ್ನಾಟಕದ ಬೀದರ, ಗುಲಬರ್ಗಾ, ರಾಯಚೂರ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿಯೂ ಪಸರಿಸಿರುವುದಾಗಿ ಹಾಗೂ ಅವರು ಬಲಿಷ್ಠ ವೀರಶೈವ ಲಿಂಗಾಯತ ಧರ್ಮದ ಜಂಗಮರಿಗಿಂತ ಭಿನ್ನವಾಗಿರುವರೆಂದು ತಿಳಿಸುತ್ತ ಅವರ ಜನಸಂಖ್ಯೆಯನ್ನು ೧೯೮೧ರ ಜನಗಣತಿಯ ಪ್ರಕಾರ ೩೦೩೫ ಎಂದು ಸ್ಪಷ್ಟಪಡಿಸಿದ್ದಾರೆ. ಮುಂದುವರೆದ ಅವರು ಮಹಾರಾಷ್ಟ್ರದ ಸೋಲಾಪುರ, ಸಾತಾರಾ, ಸಾಂಗ್ಲಿ ಕೋಲ್ಹಾಪುರ, ನಾಂದೇಡ ಉಸ್ಮಾನಾಬಾದ್ ಜಿಲ್ಲೆಗಳಲ್ಲಿಯೂ ಚದುರಿರುವುದಾಗಿಯೂ ಮತ್ತು ೧೯೮೧ರ ಜನಗಣತಿಯ ಪ್ರಕಾರ ಅವರ ಜನಸಂಖ್ಯೆ ೨೭,೯೯೪ ಎಂದು ದಾಖಲಿಸಿದ್ದಾರೆ. ಇವರ ಮಾತೃ ಭಾಷೆ ತೆಲುಗು, ಮಾಂಸಹಾರಿಗಳು, ಬೇಟೆಗಾರರು ಮತ್ತು ಶೈವೋಪಾಸಕರೆಂಬ ವಿಷಯ ಸ್ಪಷ್ಟವಾಗಿಸಿದ್ದಾರೆ. ಆದರೆ ೧೯೯೧ರ ಜನಗಣತಿಯ ಪ್ರಕಾರ ಕರ್ನಾಟಕದಲ್ಲಿಯೇ ಬೇಡ ಮತ್ತು ಬುಡ್ಗಜಂಗಮರ ಜನಸಂಖ್ಯೆ ೧,೨೧,೦೫೭ ಇದರಲ್ಲಿ ೬೨,೬೮೧ ಪುರುಷರು ಹಾಗೂ ೫೮,೩೭೬ ಸ್ತ್ರೀಯರು ದಾಖಲಾಗಿರುವರು. ವಾಸ್ತವದಲ್ಲಿ ಈ ಗಣತಿಯಲ್ಲಿ ವೀರಶೈವ ಜಂಗಮರು ಬೇಡ ಜಂಗಮರೆಂದು ದಾಖಲಿಸಿದಂತಿದೆ. ಕಾರಣ ಕೇವಲ ಒಂದು ದಶಕದಲ್ಲಿ ಇಷ್ಟೊಂದು ಜನಸಂಖ್ಯೆ ಬೆಳೆಯಲು ಸಾಧ್ಯವಿಲ್ಲ. ಇತ್ತೀಚಿನ ಸಮೀಕ್ಷೆಯ ಪ್ರಕಾರ ಬುಡ್ಗಜಂಗಮರು ಕರ್ನಾಟಕದ ಬಹುತೇಕ ಎಲ್ಲಾ ಜಿಲ್ಲೆಗಳಲ್ಲಿ ವಾಸವಾಗಿರುವುದು ಸ್ಪಷ್ಟವಾಗಿದೆ.

ಈ ಮೇಲಿನ ಎಲ್ಲಾ ತಜ್ಞರ ಅಭಿಪ್ರಾಯಗಳನ್ನು ಅಲ್ಲಗಳೆಯುವಂತಿಲ್ಲ. ಅವರು ಬೇಡ ಬುಡ್ಗ ಜಂಗಮ್ ಪದ ನಿಷ್ಪತ್ತಿ ಹಾಗೂ ಅದಕ್ಕೆ ತಮ್ಮದೇ ಆದ ಅರ್ಥ ನೀಡಿರುತ್ತಾರೆ. ಆದಾಗ್ಯೂ ಈ ಪದಗಳು ಸರ್ಕಾರಕ್ಕೆ ಕಗ್ಗಂಟಾಗಿರುವುದನ್ನು ಮರೆಯುವಂತಿಲ್ಲ.

ಬಹು ಹಿಂದೆಯೇ ಬೇಟೆಗಾರಿಕೆಯಿಂದ ಕವಲೊಡೆದವರು ಬೇಡ ಜಂಗಾಲರು ಎಂಬುದು ಮೇಲ್ನೋಟಕ್ಕೆ ಸರಿ ಎನಿಸಿದರೂ ಬೇಟೆಯ ಮೂಲಿಗರೇ ಕಾಡಾಡಿ ಬುಡರು ಎಂಬುವುದನ್ನು ಅಲ್ಲಗಳೆಯುವಂತಿಲ್ಲ. ಬುಡರೇ ಬುಡಕಟ್ಟಿನವರು, ಮೂಲನಿವಾಸಿಗಳು, ಗಿರಿಜನ ಆದಿವಾಸಿಗಳು. ಕಾಲಾಂತರದಲ್ಲಿ ಬುಡರು ಬುಡ್ಗ ಜಂಗಾಲರಾದರು. ಬುಡ್ಗ ಜಂಗಾಲರು ಮತ್ತು ಬೇಡ ಜಂಗಾಲರು ಬೇರೆ ಬೇರೆ ಇಲ್ಲ. ಬೇಟೆ ಮತ್ತು ಬುಡ್ಗ (ಚರ್ಮವಾದ್ಯ)ದ ಮಾಧ್ಯಮದಿಂದ ಕಾಡು ಮತ್ತು ನಾಡಿನ ಅಂಚಿನಲ್ಲಿ ಬದುಕು ಸಾಗಿಸಿರುವುದರಿಂದ ಇವರಿಗೆ ಈ ಹೆಸರುಗಳು ಜನಪದರಿಂದ ಲಭ್ಯವಾದವು.

ರಾಷ್ಟ್ರದಲ್ಲಿ ಶೈವ, ವೀರಶೈವ ಪುರೋಭಿವೃದ್ಧಿಗಾಗಿ ಗುರು ಪರಂಪರೆಯ ಪಂಚಪೀಠಗಳು ಉದಯವಾದವು. ಇವುಗಳ ಪೀಠಾಧ್ಯಕ್ಷರು ಶೈವ, ವೀರಶೈವ ಗುರು ಪರಂಪರೆಯ ಜಂಗಮರು. ಈ ಪರಂಪರೆಯ ಪ್ರಸಾರಕ್ಕಾಗಿ ಪ್ರತಿ ಹಳ್ಳಿಹಳ್ಳಿಗೂ ಮಠಗಳ ಸ್ಥಾಪನ ಕಾರ್ಯ ಮುಂದುವರಿಯಿತು. ಮಠ ಮಾನ್ಯರು ಜಂಗಮ ಎಂಬ ಪದದಡಿಯಲ್ಲಿ ಬ್ರಾಹ್ಮಣರ ಸಮಾನ ಸಾಮಾಜಿಕ ಸ್ಥಾನಮಾನ ಪಡೆದರು. ಶೈವ ಪರಂಪರೆಯ ಸಾಮಾಜಿಕ ಸ್ಥಾನಮಾನದಲ್ಲಿ ಇವರದ್ದು ಅತ್ಯುನ್ನತ ಸ್ಥಾನ, ಹೀಗಾಗಿ ನಾಡಿನ ಸಂಸ್ಕೃತಿಯಲ್ಲಿ ಸಂಸ್ಕೃತೀಕರಣದತ್ತ ಪ್ರಭಾವ ಗರಿಗೆದರಿತು. ಎಲ್ಲ ಶೋಷಿತ ಸಮೂಹಗಳು ಸಂಸ್ಕೃತೀಕರಣದಿಂದ ಸಾಗಿದವು.

ಸಂಸ್ಕೃತೀಕರಣದ ಪ್ರಭಾವದಲ್ಲಿ ಇತರರಂತೆ ಬೇಡ, ಬುಡ್ಗ ಜಂಗಾಲರು ಮಠಮಾನ್ಯಗಳ ಆಶ್ರಯ ಪಡೆಯಲು ಹವಣಿಸಿ ಸಾಮಾಜಿಕ ಸ್ಥಾನಮಾನ ಪಡೆಯಲು ಜಂಗಾಲದ ಬದಲಾಗಿ ಜಂಗಮರೆಂಬ ಪದ ಬಳಕೆಗೆ ಮುಂದಾದರು. ಮಠಮಾನ್ಯರು ಶೈವ ಪರಂಪರೆಯನ್ನು ಪ್ರಚುರ ಗೊಳಿಸಲು ಅಲೆಮಾರಿ ಬೇಡ, ಬುಡ್ಗ, ಜಂಗಾಲರನ್ನು ವ್ಯವಸ್ಥಿತವಾಗಿ ಬಳಸಿಕೊಳ್ಳಲು ಹಾತೊರೆದು ಶೈವ, ವೀರಶೈವ ಸಾಹಿತ್ಯವನ್ನು ಜನಸಾಮಾನ್ಯರಿಗೆ ಮುಟ್ಟಿಸುವ ಕಾರ್ಯಕ್ಕೆ ಇವರನ್ನು ಅಣಿಗೊಳಿಸಿ ತಕ್ಕಮಟ್ಟಿಗೆ ಯಶಕಂಡರು. ಬುಡ್ಗ ಜಂಗಮರು ಬುರ್ರಕಥೆ, ಬಾಳಸಂತು, ಬಹುರೂಪಿ ವೇಷಗಳನ್ನು ಹುಟ್ಟು ಹಾಕಿ ಶೈವ ಸಾಹಿತ್ಯಕ್ಕೆ ಜನಪರಗೊಳಿಸಿದರು. ಬಹು ಹಿಂದೆಯೇ ಬೀದಿ ನಾಟಕಗಳ ಮುಖಾಂತರ ಬಹುರೂಪದ ಹಗಲು ವೇಷಗಳನ್ನು ಪ್ರದರ್ಶಿಸಿ ಜನಮನಗೆದ್ದರು. ರಾತ್ರಿ ಬುರ್ರಕಥೆಗಳನ್ನು ಹಾಡಿ ಜನಜಾಗೃತಿಯನ್ನುಂಟು ಮಾಡಿ ಅಪಾರ ಮೌಖಿಕ ಸಾಹಿತ್ಯದ ಒಡೆಯರಾದರು. ಅವರು ಬಾಲಸಂತರ ಮತ್ತು ಬಹುರೂಪಿಗಳ ಹಗಲು ವೇಷಗಳನ್ನು ಹಾಕಿ ಮನೆಮನೆಗೆ, ಊರೂರಿಗೆ ಅಲೆದು ಮಾನವ ಬದುಕಿನ ಮೌಲ್ಯಗಳನ್ನು ಮುಟ್ಟಿಸುವ ಮತ್ತು ಸಾಮಾನ್ಯರಿಂದ ಮಹಾರಾಜರವರೆಗೆ ಗುಪ್ತಚಾರಿಗಳಾಗಿ ಎಲ್ಲಾ ಕಡೆಯ ಮಾಹಿತಿಗಳನ್ನು ಸಂಗ್ರಹಿಸುವ ಹಾಗೂ ಬೇಕಾದವರಿಗೆ ಒದಗಿಸುವ ಕಾರ್ಯವನ್ನು ವ್ಯವಸ್ಥಿತವಾಗಿ ನಿರ್ವಹಿಸಿದರು.

ಸಂಸ್ಕೃತೀಕರಣದ ಪ್ರಭಾವಕ್ಕೊಳಗಾಗಿ ಜಂಗಮ ಪದಗ್ರಹಣಕ್ಕೆ ಜೋತುಬಿದ್ದ ಜಂಗಾಲರು ಜಂಗಮ ತತ್ವದಡಿಯಲ್ಲಿ ಬದುಕು ಸಾಗಿಸಲು ಸಾಧ್ಯವಾಗಲಿಲ್ಲ. ಕಾಡಿನ ಸಂಸ್ಕೃತಿಯ ಬೇಟೆಯ ಜೀವನದಿಂದ ಮುಕ್ತಿ ಹೊಂದಲಾಗಲಿಲ್ಲ. ಹೀಗಾಗಿ ವೀರಶೈವ ಜಂಗಮರು ಇವರನ್ನು ತಮ್ಮ ಮಠಮಾನ್ಯಗಳಲ್ಲಿ ಸ್ಥಾನ ಕಲ್ಪಿಸಲಿಲ್ಲ, ಜಂಗಮ ಪದವಿ ನೀಡಲಿಲ್ಲ. ಆದರೆ, ಬೇಡ, ಬುಡ್ಗ ಜಂಗಾಲರು ಮಾತ್ರ ಶತಮಾನಗಳ ಹಿಂದಿನವರೆಗೂ ಬೇಡ ಜಂಗಮ್ ಬುಡ್ಗ ಜಂಗಮ್ ಎಂಬ ಪದಗಳನ್ನು ಬಳಸುತ್ತಿದ್ದರೆಂಬುದನ್ನು ಅಧ್ಯಯನ ಕಾರರು ಅನಾವರಣಗೊಳಿಸಿದ್ದಾರೆ. ಇಪ್ಪತ್ತನೇ ಶತಮಾನದ ಆದಿಯಲ್ಲಿಯೇ ಎಡ್ಗರ್ ಥರ್ಸಟನ್ ಅವರು ಬೇಡ ಜಂಗಮ್, ಬುಡ್ಗ ಜಂಗಮ್ ಸಮುದಾಯವನ್ನು ಕುರಿತು ಸ್ಪಷ್ಟ ಮಾಹಿತಿಯನ್ನು ನೀಡಿರುವ ಹಿನ್ನೆಲೆಯಲ್ಲಿ ೧೯೫೦ರಲ್ಲಿಯೇ ಇವರನ್ನು ಕರ್ನಾಟಕ, ಆಂಧ್ರಪ್ರದೇಶ ಮತ್ತು ಮಹಾರಾಷ್ಟ್ರ ರಾಜ್ಯಗಳಲ್ಲಿಯ ಮೀಸಲಾತಿಯ ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ಸೇರಿಸಲಾಯಿತು.

ಮೀಸಲಾತಿಯ ಗಂಧ ಅರಿಯದ (ಬೇಡ) ಬುಡ್ಗ ಜಂಗಮ್ ಸಮುದಾಯ ಅಪ್ಪಟ ಬುಡಕಟ್ಟಿನ ಅಲೆಮಾರಿ ಬದುಕನ್ನು ಮುಂದುವರಿಸಿದರು. ಆದರೆ, ಬೇಡ ಜಂಗಮ್ ಪದ ಮೀಸಲಾತಿಯ ಪಟ್ಟಿಯಲ್ಲಿ ಕಂಡ ವೀರಶೈವ ಜಂಗಮರು ಇದು ತಮ್ಮದೆಂದು ತಾವೇ ಬೇಡುವ ಬೇಡ ಜಂಗಮರೆಂದು ಪರಿಶಿಷ್ಟ ಜಾತಿಯ ಮೀಸಲಾತಿ ಪ್ರಮಾಣ ಪತ್ರ ಪಡೆಯಲು ಹಲವೆಡೆ ಮುಂದಾಗಿ ತಕ್ಕಮಟ್ಟಿಗೆ ಯಶಗಳಿಸಿದರು. ಇದರಿಂದ ನಿಜವಾದ ಬೇಡ ಜಂಗಮ್, ಬುಡ್ಗ ಜಂಗಮ್ ಸಮುದಾಯಕ್ಕೆ ಅನ್ಯಾಯವಾಗುತ್ತಿತ್ತು. ಇದನ್ನು ಪ್ರತಿಭಟಿಸಲು ದಲಿತ ಸಂಘಟನೆಗಳು ಮೊದಲು ಮುಂದಾದವು. ತೊಂಭತ್ತರ ದಶಕದಲ್ಲಿ ಬುಡ್ಗ ಜಂಗಮರು ಕಣ್ಣು ತೆರೆದರು. ತಮ್ಮ ಹಕ್ಕಿಗಾಗಿ ಹೋರಾಡಲು ಮುಂದಾದರು.

ಜನಪದರ ಬಾಯಿಯಲ್ಲಿ ಬುಡ್ಗ ಜಂಗಮರು ಬಹೂರೂಪಿ, ಬಾಲಸಂತ, ಹಗಲು ವೇಷಗಾರ, ಬುರ‍್ರ ಕಥೆಯವರು, ಕುರುಕುರುಮಾಮ, ಕೊಂಡಮಾಮ, ಬೈರಾಗಿ ಇತ್ಯಾದಿ ಗಳಾಗಿದ್ದರು. ಬುಡ್ಗ ಜಂಗಮ್ ಪದ ಸವಕಳಿಯಾಗಿತ್ತು. ಇದನ್ನರಿಯದ ಸರಕಾರಿ ಅಧಿಕಾರಿಗಳು, ಸಾರ್ವಜನಿಕರು ಬುಡ್ಗ ಜಂಗಮ್ ಪದದ ಬಳಕೆಗೆ ಹಾಗೂ ಚಲಾವಣೆಗೆ ಹಿಂಜರಿಯುತ್ತಿದ್ದರು. ಎಲ್ಲರೂ ಸಾಮಾನ್ಯವಾಗಿ ಬುರ‍್ರಕಥೆಯವರು ಅಥವಾ ವೇಷಗಾರರೆಂಬ ಹೆಸರಿನಿಂದಲೇ ಇವರನ್ನು ಗುರುತಿಸುತ್ತಿದ್ದರು. ಹೀಗಾಗಿ ಉಪ ಸಂಸ್ಕೃತಿ ಮಾಲೆಯಲ್ಲಿ ಹಗಲು ವೇಷದವರ ಸಂಸ್ಕೃತಿ ಎಂಬ ಶಿರೋನಾಮೆಯಲ್ಲಿ ೧೯೯೩ರಲ್ಲಿ ಪುಸ್ತಕ ಪ್ರಕಟಗೊಂಡಿತು. ಈ ಪದಗಳು ಸಂವಿಧಾನ ಬದ್ಧವಾಗಿ ಕರ್ನಾಟಕ ರಾಜ್ಯದಲ್ಲಿ ಅಥವಾ ಭಾರತದ ಯಾವುದೇ ರಾಜ್ಯದಲ್ಲಿ ಮೀಸಲಾತಿಯ ಯಾವುದೇ ಪಟ್ಟಿಗೆ ಸೇರಿರುವುದಿಲ್ಲ. ಹೀಗಾಗಿ ಬುಡ್ಗ ಜಂಗಮರು ತಮ್ಮ ಮೂಲದ ಶೋಧದಲ್ಲಿ ತೊಡಗಿ ಅಲ್ಲಲ್ಲಿ ಸಂಘಟನೆಗಳನ್ನು ಕಟ್ಟಿಕೊಂಡು ಸಂವಿಧಾನಬದ್ಧ ಹಕ್ಕುಗಳಿಗಾಗಿ ಹೋರಾಟಕ್ಕಿಳಿದು ತಕ್ಕಮಟ್ಟಿಗೆ ಯಶಕಂಡರು.

ಕಾಡು ನಾಡು ಇವೆರಡನ್ನು ಕಳೆದುಕೊಂಡು ಅತಂತ್ರ ಸ್ಥಿತಿಯಲ್ಲಿರುವ ಇವರು ತಮ್ಮ ಮೂಲ ಸಂಸ್ಕೃತಿಯನ್ನು ಇತ್ತೀಚಿಗೆ ಕಳೆದುಕೊಳ್ಳುತ್ತಿದ್ದಾರೆ. ಸಮಾಜದ ಮುಖ್ಯಸ್ಥರದೊಂದಿಗೆ ಬದುಕಬೇಕಿರುವಾಗ ತನ್ನ ನಿಜಾಂಶವನ್ನು ಮರೆಮಾಚುತ್ತಿದೆ. ಅದಕ್ಕಾಗಿ ಸ್ಪಷ್ಟ ಹಾಗೂ ಸೂಕ್ಷ್ಮ ಅಧ್ಯಯನದಿಂದ ಈ ಬುಡ್ಗಜಂಗಮರನ್ನು ತಿಳಿದುಕೊಳ್ಳಬಹುದಾಗಿದೆ.

ಕೇವಲ ವೃತ್ತಿ ಉದ್ಯೋಗಗಳಿಂದ ಪರಗಣಿಸದೆ ಅವರ ಆಚಾರ ವಿಚಾರ ಸಾಂಸ್ಕೃತಿಕ ಹಿನ್ನೆಲೆ ಭಾಷೆ ಇವುಗಳನ್ನು ಗುರುತಿಸಿ ಮುಖ್ಯವಾಹಿನಿಗೆ ತರುವುದು ಅತ್ಯಗತ್ಯವಾಗಿದೆ. ಕರ್ನಾಟಕದ ನಾಲ್ಕು ಭಾಗಗಳಲ್ಲಿ ಕರೆಯುವ ಜನಪದ ಹೆಸರುಗಳಾದ ಉತ್ತರ ಕರ್ನಾಟಕದ ಬೆಳಗಾವಿ ಬಾಗಲಕೋಟೆ ವಿಜಾಪೂರ ಜಿಲ್ಲೆಗಳಲ್ಲಿ ಬಹುರೂಪಿ, ಹಗಲು ವೇಷಗಾರರು ಸಿದ್ದರು ಕುರಮಾಮಾ ಎಂದು ಕರೆದರೆ, ಗುಲಬರ್ಗಾ ರಾಯಚೂರು ಬಳ್ಳಾರಿ, ಕೊಪ್ಪಳ ಜಿಲ್ಲೆಗಳಲ್ಲಿ ಹಗಲು ವೇಷಗಾರ, ಬುರ‍್ರಕಥೆಯವರು, ಸುಡಗಾಡು ಸಿದ್ದರು, ಕೊಂಡಮಾಮ ಎಂತಲೂ ದಕ್ಷಿಣ ಕರ್ನಾಟಕದ ಕೋಲಾರ ರಾಮನಗರ ಜಿಲ್ಲೆ ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ತುಮಕೂರು ಹಾಸನ ಕಡೆಗಳಲ್ಲಿ ಸನ್ಯಾಸಿ, ಜಗ್ಗಾಲಿ, ಬಾವಚಿ, ಬಾಬಾಬುಡರು, ಪಿರಿಕಿಜಂಗಾಲು ಶಿವಜಂಗಾಲು, ಸಿರಿಜಂಗಾಲ, ಕಾಟಿಪಾಪಲು, ಕಥಗಾಳ್ಳು ಗಣಾಯತ ಜಂಗಾಲು, ಶ್ರೀಜಂಗಾಲು, ಈತಮಲಕ ಜಂಗಮ, ಜಂಗಾಲು, ಪಗಟಿ ವೇಷಗಾಳ್ಳು, ಪಂಚಗಾಳ್ಳು, ಬೀದಿ ಭಾಗವತುಲು, ಕೊಯಜಂಗಾಲು ಎಂದು ಕರೆಯುತ್ತಾರೆ.

# ೨

# ಮೂಲ ಮತ್ತು ಪ್ರಸಾರ

## ಮೂಲ

**ಬುಡ್ಗ ಜಂಗಮರು :** ಪೂರ್ವಕಾಲದಲ್ಲಿ ಆಂಧ್ರಪ್ರದೇಶದ ಶ್ರೀಶೈಲ ಅರಣ್ಯದ ಭಾಗಗಳಲ್ಲಿ ಬೇಟೆಯನ್ನೆ ಪ್ರಧಾನವಾಗಿ ಇಟ್ಟುಕೊಂಡು ನೆಲೆಸಿರುವ ಬುಡ್ಗ ಜಂಗಮರು ತಂದ ಮಾಂಸಹಾರದ ಸ್ವಲ್ಪ ಭಾಗವನ್ನು ಶಿವನಿಗೆ ಭಕ್ತಿಯಿಂದ ಸಮರ್ಪಿಸಿ ತಾವು ಊಟ ಮಾಡುವುದು ಸಂಪ್ರದಾಯ ಎಂದು ಶ್ರೀ ಕಾಳಹಸ್ತಿ ಮಹತ್ಮಮು ಎಂಬ ಪುಸ್ತಕದಲ್ಲಿ ೩-೮೮, ಮತ್ತು ೩,೫೦ರಲ್ಲಿ ಉಲ್ಲೇಖಿಸಲಾಗಿದೆ. ಅದೇ ರೀತಿಯಾಗಿ ಎನ್ ಆರ್ ವೆಂಕಟೇಶಂ ಅವರು ವೃತ್ತಿ ಆಹಾರದ ಸಲುವಾಗಿ ಬೇಟೆಯನ್ನು ಆಧಾರವಾಗಿಟ್ಟುಕೊಂಡು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗುತ್ತಾ ಅಂದಿನಿಂದ ಇಂದಿನವರೆಗೆ ತಮ್ಮ ಸಮುದಾಯದಲ್ಲಿ ಮುಂದುವರಿಯುತ್ತ ಬಂದಿರುತ್ತದೆ. ಇವರು ಕಾಡಿನಿಂದ ಚದುರಿ ಮಹಾರಾಷ್ಟ್ರ, ಕರ್ನಾಟಕ ಇನ್ನಿತರ ರಾಜ್ಯಗಳಿಗೆ ಗುಳೆ ಹೋಗಿರುವರು. ತಮ್ಮ ಸಂಚಾರಿ ಜೀವನದಲ್ಲಿ ವಿವಿಧ ವೃತ್ತಿಗಳನ್ನು ಕಂಡುಕೊಂಡಿರುತ್ತಾರೆ.

ಬುಡ್ಗ ಜಂಗಮರ ಜೀವನದಲ್ಲಿ ಅನೇಕ ಮಹಾದರ್ಶನಿಕರ ಆಗಮನದಿಂದ ವೃತ್ತಿಗಳಲ್ಲಿ ಅನೇಕ ಬದಲಾವಣೆಗಳಾದವು. ಆಂಧ್ರ ಪ್ರದೇಶ ಮತ್ತು ಕರ್ನಾಟಕದಲ್ಲಿ ೧೨ನೇ ಶತಮಾನದ ಬಸವಣ್ಣನ ಅನುಯಾಯಿಗಳು ಇವರನ್ನು ಧರ್ಮ ಪ್ರಚಾರಕ್ಕಾಗಿ ಬಳಸಿಕೊಂಡರು. ಶಿವಾಜಿ ಕಾಲದಲ್ಲಿ ಸ್ವತಂತ್ರ ಹೋರಾಟಕ್ಕೆ ಇವರನ್ನು ಗೂಡಾಚಾರಿಗಳಾಗಿ ಬಳಸಿ ಕೊಂಡಿರುವುದು ಕಂಡುಬರುತ್ತದೆ.

ಕಾಡಿನಲ್ಲಿ ಸಣ್ಣಪುಟ್ಟ ಸಮುದಾಯಗಳ ಒಳಜಗಳಗಳು ಮತ್ತು ಆಂಗ್ಲ, ನಿಜಾಮ್ ಹಾಗೂ ಮುಸ್ಲಿಮರ ದಬ್ಬಾಳಿಕೆಗಳನ್ನು ಸಹಿಸದ ಇಡೀ ಸಮುದಾಯ ಅನೇಕ ತಿರುವುಗಳನ್ನು ಕಂಡಿತು. ಕಾಡಿನಿಂದ ನಾಡಿನತ್ತ ಮರಳುವ ಸಂದರ್ಭದಲ್ಲಿ ಹೊಟ್ಟೆಪಾಡಿಗಾಗಿ ಸಾಂಸ್ಕೃತಿಕ ವೇಷಗಳನ್ನು ಹಾಕಿ ಕಲೆ ಪ್ರದರ್ಶನ ನೀಡುತ್ತ ನಾಡಿನಲ್ಲಿ ಪ್ರವೇಶ ಪಡೆದರು. ಒಂದೊಂದು ತಂಡವಾಗಿ ಊರಿನಲ್ಲಿ ಪ್ರವೇಶಮಾಡಿದ ಇವರು ಆ ಕಾಲದ ಘಟನೆಗಳನ್ನು ಹಾಗೂ ಧಾರ್ಮಿಕ ಪ್ರಚಾರವನ್ನು ತಮ್ಮ ವೇಷಗಳ ಹಾಗೂ ಕಲಾ ಪ್ರಕಾರಗಳ ಮೂಲಕ ದೇಶದ ಹಲವು

ಪ್ರದೇಶಗಳಿಗೆ ಭಿಕ್ಷಾಟನೆ ಅರಿಸಿ ಹೋದರು. ಪ್ರಮುಖವಾಗಿ, ಕರ್ನಾಟಕ, ಮಹಾರಾಷ್ಟ್ರ, ಮಧ್ಯಪ್ರದೇಶ, ತಮಿಳುನಾಡು, ಗೋವಾ ರಾಜ್ಯಗಳಲ್ಲಿ ಅಲ್ಲಿಯ ಪ್ರಾದೇಶಿಕ ಭಾಷೆಯಲ್ಲಿ ಕಲೆಗಳನ್ನು ಪ್ರದರ್ಶಿಸಿಸುತ್ತಾ ಜೀವನ ಸಾಗಿಸುತ್ತಿದ್ದಾರೆ.

ಪ್ರಸಾರ ನೆಲೆಗಳು

ಭಾರತದ ಬುಡ್ಗ ಜಂಗಮರು

ಭಾರತದಲ್ಲಿ ೧೮೮೧ರ ಜನಗಣತಿಯ ಪ್ರಕಾರ ಬಹುರೂಪಿ, ಬೈರಾಗಿ, ಸನ್ಯಾಸಿ, ಬುಡ್ಗ ಜಂಗಮ್, ಸುಡುಗಾಡು ಸಿದ್ಧ ಎಂಬ ಹೆಸರುಗಳಲ್ಲಿ ಬೆರಾರ್, ಬಾಂಬೆ, ಸೆಂಟ್ರಲ್ ಪ್ರವೀನ್ಸ್, ನಾರ್ಥಈಸ್ಟ್ ಪ್ರವೀನ್ಸ್, ಪಂಜಾಬ, ಮದ್ರಾಸ್, ಬರೋಡ, ಮೈಸೂರು , ಹೈದರಾಬಾದ್ ಪ್ರಾಂತಗಳಲ್ಲಿ ದಾಖಲಾದವರ ಜನಸಂಖ್ಯೆಯ ವಿವರ ಹೀಗಿದೆ (ಕೋಷ್ಟಕ:೨.೧). ಈ ಸಮುದಾಯಗಳಲ್ಲಿಯೇ ಬುಡ್ಗ ಜಂಗಮರು ಅಲ್ಲಲ್ಲಿ ದಾಖಲಾಗಿರುವ ಸಾಧ್ಯತೆಗಳಿವೆ. ಬೈರಾಗಿಗಳನ್ನು ಧಾರ್ಮಿಕ ಭಿಕ್ಷುಕರೆಂದು ವಿಂಗಡಿಸಲಾಗಿದೆ.

**ಕೋಷ್ಟಕ: ೨.೧ ಭಾರತದ ಬುಡ್ಗ ಜಂಗಮರ ಜನಸಂಖ್ಯೆ (೧೮೮೧)**

| ಸಂ | ಸಮುದಾಯ | ಪ್ರದೇಶ | ಜನಸಂಖ್ಯೆ |
|---|---|---|---|
| ೧. | ಬಹುರೂಪಿ | | ೪೮೧೬ |
| | | ಬೆರಾರ | ೨೯೦ |
| | | ಬಾಂಬೆ | ೬೦೫ |
| | | ಸೆಂಟ್ರಲ್ ಪ್ರವೀನ್ಸ್ | ೫೬ |
| | | ನಾರ್ಥಈಸ್ಟ್ ಪ್ರವೀನ್ಸ್ | ೨೧೬೭ |
| | | ಪಂಜಾಬ | ೩೪೬೦ |
| | | ಬರೋಡಾ | ೩ |
| | | ಹೈದ್ರಾಬಾದ್ | ೧೮೫ |
| ೨. | ಭೈರಾಗಿ | | ೧,೦೪,೧೩೩ |
| | | ಬೆರಾರ | ೧೫೨೯ |
| | | ಬಾಂಬೆ | ೫೨೧೬ |
| | | ಸೆಂಟ್ರಲ್ ಪ್ರವೀನ್ಸ್ | ೩೩೪೬೯ |
| | | ಮದ್ರಾಸ್ | ೯೦೧೯ |
| | | ಪೆಂಜಾಬ | ೪೭೨೮ |
| | | ಬರೋಡಾ | ೨೨೭೦ |
| | | ಹೈದ್ರಾಬಾದ್ | ೫೦೫೭ |
| | | ಮೈಸೂರು | ೨೭೭ |

| | | |
|---|---|---|
| ೩. ಬಾಳಸಂತೋಷ | | ೩೧೮ |
| | ಬಾಂಬೆ | ೨೦ |
| | ಹೈದ್ರಾಬಾದ್ | ೨೯೮ |
| ೪. ಸನ್ಯಾಸಿ | | ೧೧,೮೫೦ |
| | ಬೆಂಗಳೂರು | ೯೦೪ |
| | ಪಂಜಾಬ | ೧೦,೯೭೦ |
| | ಬೆರಾರ | ೧೨ |
| ೫. ಬುಡ್ಗ ಜಂಗಮ್ | | ೩೨೬ |
| | ಮದ್ರಾಸ್ | ೩೨೬ |
| ೬. ಸುಡುಗಾಡು ಸಿದ್ಧ | | ೩೬೪ |
| | ಬಾಂಬೆ | ೩೬೪ |

೧೮೮೧ ರ ಜನಗಣತಿಯಲ್ಲಿ ಭಾರತದ ಬುಡ್ಗ ಜಂಗಮರ ಜನಸಂಖ್ಯೆ ಕೇವಲ ೩೨೬ ಮದ್ರಾಸ್ ಪ್ರಾಂತದಲ್ಲಿ ದಾಖಲಾಗಿರುವುದು. ೨೦೦೧ ರ ಜನಗಣತಿಯಲ್ಲಿ ಭಾರತದಲ್ಲಿ ಬೇಡ ಜಂಗಮ್ ಮತ್ತು ಬುಡ್ಗ ಜಂಗಮರ ಜನಸಂಖ್ಯೆ ೧,೫೯,೪೬೮ ದಾಖಲಾಗಿರುವುದು ಗಮನಾರ್ಹ. ಇದರಲ್ಲಿ ಆಂಧ್ರ ಪ್ರದೇಶದಲ್ಲಿ ಅತ್ಯಧಿಕ ಅಂದರೆ ೭೩,೩೮೯ ಕರ್ನಾಟಕ ರಾಜ್ಯದಲ್ಲಿ ೫೪,೮೭೩ ಮತ್ತು ಮಹಾರಾಷ್ಟ್ರದಲ್ಲಿ ೩೧,೨೦೬ ಜನ ದಾಖಲಾಗಿರುವರು (ಕೋಷ್ಟಕ ೨.೨). ಕರ್ನಾಟಕ ರಾಜ್ಯದ ಬೇಡ ಜಂಗಮ್, ಬುಡ್ಗ ಜಂಗಮ್ ಸಮುದಾಯದ ೧೯೯೧ ರ ಜನಗಣತಿಯ ಜನಸಂಖ್ಯೆ ೧,೨೧,೦೫೬. ಆದರೆ, ೨೦೦೧ರಲ್ಲಿ ಇವರ ಜನಸಂಖ್ಯೆಯಲ್ಲಿ ಅರ್ಧದಷ್ಟು ಇಳಿಮುಖವಾಗಿರುವುದನ್ನು ಕಾಣಬಹುದು. ೧೯೯೧ರಲ್ಲಿ ವಾಸ್ತವವಾಗಿ ಕರ್ನಾಟಕದ ವೀರಶೈವ ಜಂಗಮರು ಇದರಲ್ಲಿ ದಾಖಲಾಗಿದ್ದರು.

**ಕೋಷ್ಟಕ ೨.೨ ಭಾರತದ ಬೇಡ ಜಂಗಮ್, ಬುಡ್ಗ ಜಂಗಮರ ಜನಸಂಖ್ಯೆ (೨೦೦೧)**

| ರಾಜ್ಯ | ಒಗ್ರಾನ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ಆಂಧ್ರ ಪ್ರದೇಶ | ಒಟ್ಟು | ೩೭,೦೭೯ | ೩೬,೩೧೦ | ೭೩,೩೮೯ |
| | ಗ್ರಾಮೀಣ | ೨೮,೮೧೬ | ೨೮,೧೬೫ | ೫೬,೯೮೧ |
| | ನಗರ | ೮,೨೬೩ | ೮,೧೪೫ | ೧೬,೪೦೮ |
| ಮಹಾರಾಷ್ಟ್ರ | ಒಟ್ಟು | ೧೫,೯೧೯ | ೧೫,೨೮೭ | ೩೧,೨೦೬ |
| | ಗ್ರಾಮೀಣ | ೯,೮೦೩ | ೯,೪೯೨ | ೧೯,೨೯೫ |
| | ನಗರ | ೬,೧೧೬ | ೫,೭೯೫ | ೧೧,೯೧೧ |

| | | | | |
|---|---|---|---|---|
| ಕರ್ನಾಟಕ | ಒಟ್ಟು | ೨೭,೯೫೮ | ೨೬,೯೧೫ | ೫೪,೮೭೩ |
| | ಗ್ರಾಮೀಣ | ೨೦,೧೪೨ | ೧೯,೫೪೦ | ೩೯,೬೮೨ |
| | ನಗರ | ೭,೮೧೬ | ೭,೩೭೫ | ೧೫,೧೯೧ |

## ಕರ್ನಾಟಕದ ಬುಡ್ಗ ಜಂಗಮರ ಜನಸಂಖ್ಯೆ

ಕರ್ನಾಟಕ ಬುಡ್ಗ ಜಂಗಮರು ಕರ್ನಾಟಕ ರಾಜ್ಯದಲ್ಲಿ ಅಲೆಮಾರಿಗಳಲ್ಲಿಯೇ ಗಣನೀಯ ಪ್ರಮಾಣದಲ್ಲಿ ಇರುವುದನ್ನು ಕಾಣಬಹುದು. ೧೯೯೧ ಮತ್ತು ೨೦೦೧ರ ಜನಗಣತಿಯ ಅಂಕಿಅಂಶಗಳಲ್ಲಿ ಏರಿಳಿತಗಳಿರುವುದಕ್ಕೆ ಮುಖ್ಯ ಕಾರಣ ಕರ್ನಾಟಕ ರಾಜ್ಯದಲ್ಲಿಯ ವೀರಶೈವ ಜಂಗಮರು ಬೇಡಜಂಗಮರ ಹೆಸರಿನಲ್ಲಿ ದಾಖಲಾಗಿರುವುದಾಗಿದೆ. ಇತ್ತೀಚೆಗೆ ವೀರಶೈವರು ಬೇಡ ಜಂಗಮ ಎಂಬೀ ಹೆಸರಿನಿಂದ ಹೊರ ಬರುತ್ತಲಿರುವುದರಿಂದ ಈ ಜನಸಂಖ್ಯೆಯಲ್ಲಿ ಒಂದು ದಶಕದಲ್ಲಿ ಗಣನೀಯ ಪ್ರಮಾಣದಲ್ಲಿ ಇಳಿಕೆಯಾಗಿದೆ. ಕನ್ನಡ ಪುಸ್ತಕ ಪ್ರಾಧಿಕಾರದ ೨೦೦೭ರ ಸಮೀಕ್ಷೆಯು ಪ್ರಮಾಣಿಕವಾಗಿ ನಿರ್ವಹಿಸಲು ಪ್ರಯತ್ನಿಸಲಾಗಿದೆ. ಅಲೆಮಾರಿಗಳಾಗಿರುವುದರಿಂದ ಸಮೀಕ್ಷೆಯಲ್ಲಿ ಹಲವು ಕುಟುಂಬಗಳು ದಾಖಲಾಗದೆ ಇರುವುದು ಸಾಧ್ಯವಿರುವುದು. ಸಮೀಕ್ಷೆಯ ಅಂಕಿಅಂಶಗಳ ಜಿಲ್ಲಾವಾರು ಲಿಂಗವಾರು ಈ ಕೆಳಗಿನಂತೆ ನೀಡಲಾಗಿದೆ(ಕೋಷ್ಟಕ: ೨.೩).

**ಕೋಷ್ಟಕ: ೨.೩ ಕರ್ನಾಟಕ ಬುಡ್ಗ ಜಂಗಮರ ಜನಸಂಖ್ಯೆ (೨೦೦೭)**

| ಸಂ. | ಜಿಲ್ಲೆಗಳು | ಕುಟುಂಬ | ಗಂಡು | ಹೆಣ್ಣು | ಒಟ್ಟು |
|---|---|---|---|---|---|
| ೧ | ಬಾಗಲಕೋಟೆ | ೧೪ | ೫೨ | ೩೧ | ೮೩ |
| ೨ | ಬೆಂಗಳೂರು ಗ್ರಾಮಂತರ | ೭೬ | ೧೭೯ | ೧೭೮ | ೩೫೭ |
| ೩ | ಬೆಂಗಳೂರು ನಗರ | ೪೬೩ | ೧೫೩೬ | ೧೩೭೯ | ೨೯೧೫ |
| ೪ | ಬೆಳಗಾವಿ | ೨೩೪ | ೫೩೪ | ೪೭೨ | ೧೦೦೬ |
| ೫ | ಬಳ್ಳಾರಿ | ೬೪೫ | ೧೪೭೨ | ೧೪೮೨ | ೨೯೫೪ |
| ೬ | ಬೀದರ | ೨೧೭ | ೫೬೧ | ೫೬೫ | ೧೧೨೬ |
| ೭ | ಬಿಜಾಪುರ * | ೩೨ | ೧೨೪ | ೧೦೨ | ೨೨೬ |
| ೮ | ಚಿತ್ರದುರ್ಗ * | ೧೧ | ೨೮ | ೩೨ | ೬೦ |
| ೯ | ದಾವಣಗೆರೆ | ೮೫ | ೧೮೧ | ೧೯೭ | ೩೭೮ |
| ೧೦ | ಧಾರವಾಡ | ೭೭ | ೨೧೬ | ೨೨೧ | ೪೩೭ |
| ೧೧ | ಗದಗ | ೭೯ | ೨೩೪ | ೨೧೭ | ೪೫೧ |
| ೧೨ | ಗುಲಬರ್ಗಾ | ೪೪೫ | ೧೩೬೯ | ೧೨೬೧ | ೨೬೩೦ |
| ೧೩ | ಹಾಸನ | ೧೭೭ | ೪೪೫ | ೪೧೭ | ೮೬೨ |

| | | | | | |
|---|---|---|---|---|---|
| ೧೪ | ಹಾವೇರಿ | ೩೮ | ೯೧ | ೯೧ | ೧೮೨ |
| ೧೫ | ಕೋಲಾರ | ೯೯೦ | ೨೦೭೩ | ೨೨೮೨ | ೪೩೫೫ |
| ೧೬ | ಕೊಪ್ಪಳ | ೫೫೦ | ೧೧೭೧ | ೧೧೪೬ | ೨೩೧೭ |
| ೧೭ | ರಾಯಚೂರು | ೨೫೭ | ೬೩೮ | ೬೦೯ | ೧೨೪೭ |
| ೧೮ | ರಾಮನಗರ | ೪೬೬ | ೧೧೨೨ | ೧೦೭೪ | ೨೧೯೬ |
| ೧೯ | ಶಿವಮೊಗ್ಗ | ೨೨ | ೧೯ | ೩೨ | ೫೧ |
| ೨೦ | ತುಮಕೂರು | ೫೭ | ೧೬೨ | ೧೩೭ | ೨೯೯ |
| | ಒಟ್ಟು | ೪೯೩೫ | ೧೨೨೦೭ | ೧೧೯೨೫ | ೨೪೧೩೨ |

ಆಂಧ್ರದಿಂದ ಗುಳೇ ಬಂದ ಬುಡ್ಗ ಜಂಗಮರು ಚಿತ್ತೂರು ಜಿಲ್ಲೆಯ ಕೊಂಗನೂರು ತಾಲೂಕು ಕಾಂಬಾಪೇಟೆ ಈ ಭಾಗದಿಂದ ಬಂದ ಕುಟುಂಬದವರು ಕೋಲಾರ ಜಿಲ್ಲೆಯ ಮುಳಬಾಗಿಲು ತಾಲೂಕು ಕೊತ್ತೂರು ಕಡೆ ಜೀವನ ಪ್ರಾರಂಭಿಸಿ ದಕ್ಷಿಣ ಕರ್ನಾಟಕದ ಹಲವು ಭಾಗಗಳಲ್ಲಿ ಅಲೆದಾಡಿ ನೆಲೆಯೂರಿರುತ್ತಾರೆ. ಈ ಭಾಗದ ಜನರು ತಮ್ಮ ಜೀವನ ಹಾಗೂ ತಮ್ಮ ವೈವಾಹಿಕ ಸಂಬಂಧಕ್ಕಾಗಿ ಕೆಲವು ಕಟ್ಟೆ(ಗಡ)ಗಳನ್ನು ನಿರ್ಮಿಸಿಕೊಂಡರು. ಮುಳುಬಾಗಿಲು ಕಡೆಯಿಂದ ಬಂದ ಕುಲಬಾಂಧವರು ಬೆನ್ನಿಗಾನಹಳ್ಳಿ ಛತ್ರದ ಕಟ್ಟಕ್ಕೆ ಸೇರುತ್ತಾರೆ. ಹೊಸದೊಡ್ಡಿ ಕಡೆಯಿಂದ ಬಂದ ಕುಲಬಾಂಧವರು ಮೈಸೂರು ರಸ್ತೆಯ ಕಸ್ತೂರಿಬಾ ನಗರ ಅಂಚೆಪಾಳ್ಯ ಆಲದ ಮರದ ಅಶ್ವತ ಕಟ್ಟೆ, ಕಟ್ಟಕ್ಕೆ ಸೇರುತ್ತಾರೆ. ತುಮಕೂರಿನ ಕಡೆಯಿಂದ ಬಂದಿರುವ ಕುಲಭಾಂದವರು ಮಾಗಡಿರೋಡ ದಾಸರಹಳ್ಳಿ ಗುಂಡು ತೋಪಿನ ಕಟ್ಟಕ್ಕೆ ಸೇರುತ್ತಾರೆ.

ಉತ್ತರ ಕರ್ನಾಟಕದಲ್ಲಿ ಸಂಚರಿಸುವ ಮತ್ತು ವಾಸಿಸುತ್ತಿರುವ ಸಮುದಾಯದ ಕಟ್ಟಗಳು ಗದ್ವಾಲ ಕಟ್ಟ, ಗೋಲ್ಕಂಡ ಕಟ್ಟ, ಹರಪ್ಪನಳ್ಳಿ ಕಟ್ಟ ,ಬೊಮ್ಮನಾಳಕಟ್ಟ, ಸೋಲ್ಲಾಪುರ (ಮಹಾರಾಷ್ಟ್ರ) ಕಟ್ಟ, ಯಕ್ಕಂಚಿ (ವಿಜಾಪುರ) ಕರ್ನೂಲು, ಅದೋನಿ, ಬಳ್ಳಾರಿ ಕಟ್ಟ, ತಾವರಗೇರಿ, ಕೊಪ್ಪಳಜಿಲ್ಲೆ ಕುದುರೆಮೋತಿ, ಗುಂತಕಲ್ ಈ ಕಟ್ಟೆಗಳಲ್ಲಿ ಸೇರುತ್ತಾರೆ. ಆದರೆ ಇತ್ತೀಚಿಗೆ ರಾಜ್ಯದ ಎಲ್ಲ ಭಾಗಗಳಲ್ಲಿ ಅಲ್ಲಲ್ಲಿಯೇ ನೆಲೆಗಳನ್ನು ಮಾಡಿಕೊಂಡು ಸೇರುತ್ತಿದ್ದಾರೆ.

ಒಂದು ಕಟ್ಟದಿಂದ ಇನ್ನೊಂದು ಕಟ್ಟಕ್ಕೆ ಕೇವಲ ಪ್ರಾದೇಶಿಕವಾಗಿ ಭಿಕ್ಷೆ ಬೇಡುವ ಹಾಗೂ ಪ್ರದರ್ಶನ ಮಾಡುವ ಕಲೆ ಮಾತ್ರ ಬೇರೆಯಾಗಿರುತ್ತದೆ. ಕುಲ ಮಾತ್ರ ಒಂದೇ, ಈ ಸಮುದಾಯದ ಯಾವುದೇ ವ್ಯಕ್ತಿ ಬಂದರು ಅವರನ್ನು ವಿಚಾರಿಸುವುದು ಮೀರು ಜಂಗಾಲ ಎಂದು ಹೌದು ಎಂದಾದರೆ ಮುಂದೆ ಬೆಡಗುಗಳಿಂದ ಪರಿಚಯಿಸಿಕೊಂಡು ಬಂಧುಗಳಾಗುತ್ತಾರೆ. ಇವರು ಕುಲದಿಂದ ಮಾತ್ರ ಬುಡ್ಗಜಂಗಾಲರಾಗಿರುತ್ತಾರೆ. ಇವರು ಹೆಚ್ಚಾಗಿ ಆಯಾ ಕಟ್ಟಗಳಲ್ಲಿಯೇ ಹೆಚ್ಚು ಕೊಟ್ಟು ತೆಗೆದುಕೊಳ್ಳುವ ರೂಢಿ ಇರುತ್ತದೆ ಕಾರಣ ಮಗಳು ಮತ್ತು ಸಂಬಂಧಿಕರು ಹತ್ತಿರದಲ್ಲಿಯೇ ಇರಬೇಕೆನ್ನುವ ಅಲ್ಲದೆ ವ್ಯಾರ ಪೂಟ ಎನ್ನುವ ನಿಬಂಧನೆಗಳಿಂದಾಗಿ ರಕ್ತ ಸಂಬಂಧದಲ್ಲಿಯೇ ಮದುವೆ ಮಾಡಿಕೊಳ್ಳುತ್ತಾರೆ.


ಕರ್ನಾಟಕ
ಬುಡ್ಗ ಜಂಗಮ ಸಮುದಾಯದ ನೆಲೆಗಳು
ಬೀದರ
ಗುಲಬರ್ಗಾ
ಬಿಜಾಪುರ
ಬಾಗಲಕೋಟೆ
ರಾಯಚೂರು
ಬೆಳಗಾವಿ
ಕೊಪ್ಪಳ
ಧಾರವಾಡ
ಗದಗ
ಬಳ್ಳಾರಿ
ಉತ್ತರ ಕನ್ನಡ
ಹಾವೇರಿ
ದಾವಣಗೆರೆ
ಚಿತ್ರದುರ್ಗ
ಶಿವಮೊಗ್ಗ
ಕೋಲಾರ
ಉಡುಪಿ
ಚಿಕ್ಕಮಗಳೂರು
ತುಮಕೂರು
ಚಿಕ್ಕಬಳ್ಳಾಪುರ
ಹಾಸನ
ದಕ್ಷಿಣ ಕನ್ನಡ
ಮಂಡ್ಯ
ರಾಮನಗರ
ಕೊಡಗು
ಮೈಸೂರು
ಚಾಮರಾಜನಗರ
ಕುಟುಂಬಗಳು
● ೫೦ರ ಒಳಗೆ
⊙ ೫೧ – ೧೦೦
○ ೧೦೧ – ೨೦೦
♦ ೨೦೧ – ೩೦೦
✧ ೩೦೧ – ೪೦೦
✪ ೪೦೧ – ೫೦೦
★ ೫೦೧ ರ ಮೇಲ್ಪಟ್ಟು

ಅನೇಕ ವರ್ಷಗಳಿಂದ ತಮ್ಮ ಪಾಲಿಗೆ ಬಂದಿರುವ ಊರು ಕೇರಿಗಳನ್ನು ತಾಲ್ಲೂಕು ಜಿಲ್ಲೆಗಳನ್ನು ಇವರು ಅಸ್ತಿಯಂತೆ ಪಾಲು ಮಾಡಿಕೊಳ್ಳುವರು. ಹೆಚ್ಚು ಊರು-ಕೇರಿಗಳನ್ನು ಹೊಂದಿರುವವರು ಶ್ರೀಮಂತರೆಂಬ ಮನೋಭಾವ ಇದೆ. ತಂದೆಯಿಂದ ಮಗನಿಗೆ, ಮಗನಿಂದ ಮೊಮ್ಮಗನಿಗೆ ಇಲ್ಲವೇ ಮಗಳಿಂದ ಅಳಿಯನಿಗೆ ಹಾಗೂ ತಾಯಿಯಿಂದ ಮಕ್ಕಳಿಗೆ, ದತ್ತು ಪುತ್ರನಿಗೆ ಊರು-ಕೇರಿಗಳನ್ನು ಹಸ್ತಾಂತರವಾಗುತ್ತವೆ. ತಮ್ಮ ಪಾಲಿನ ಹಳ್ಳಿಗಳಿಗೆ ಇನ್ನೊಬ್ಬರು ಹೋಗಿ ಅನ್ನ, ಬಟ್ಟೆ, ಕಾಳು ವಸೂಲಿ ಮಾಡಿದರೆ ಅಂಥವರಿಗೆ ತಪ್ಪು ದಂಡ ವಿಧಿಸುವ ಕಟ್ಟುಕಟ್ಟಳೆ ಇವರಲ್ಲಿದೆ. ಇವರು ಬೇಟೆಗೆ ಸಿಗುವ ಪ್ರದೇಶವನ್ನು ಅರಸುತ್ತಾ ಹೋಗುವರು. ಹೆಚ್ಚು ಭಿಕ್ಷಾಟನೆಗೆ ಸಿಗುವ ಸ್ಥಳಕ್ಕೆ ತನ್ನವರನ್ನು ಕರೆದುಕೊಂಡು ಹೋಗಿ ನೆಲೆ ಸ್ಥಾಪಿಸುವರು. ಬೇಟೆಯ ಪ್ರಧಾನವಾದ ಕಸಬು ನಿಸರ್ಗದ ಜೀವ ಜಂತುಗಳನ್ನು ಅವಲಂಭಿಸಿದ್ದು ಕಾಲಕ್ರಮೇಣ ಕಾಡಿನಿಂದ ನಾಡಿನತ್ತಾ ಪಯಣ ಬೆಳೆಸಿದರು.



೩

# ಸ್ಥಳಾವರಣ ಮತ್ತು ಬ್ರಹ್ಮಾಂಡದ ಪರಿಕಲ್ಪನೆ

## ಮನೆ ಕೊಟ್ಟಿಗೆ ಗಲ್ಲಿ ಎಲ್ಲೆಕಟ್ಟು, ಅಥವಾ ಮೇರೆ

ಬುಡ್ಗ ಜಂಗಮರು ಸಾಮಾನ್ಯವಾಗಿ ಒಂದೇ ಗುಡಿಸಲಿನಲ್ಲಿ ತಮ್ಮ ಇಡೀ ಸಂಸಾರವನ್ನು ಕಳೆಯುತ್ತಾರೆ. ತಮ್ಮ ವಾಸಕ್ಕಾಗಿ ತಾತ್ಕಾಲಿಕವಾಗಿ ಗುಡಿಸಲುಗಳನ್ನು, ಡೇರೆಗಳನ್ನು ಹಾಕಿಕೊಳ್ಳುತ್ತಾರೆ. ಇವು ಕವದಿ ಅಥವಾ ಬಟ್ಟೆಯಿಂದ ತಯಾರಿಸಲಾಗುತ್ತದೆ. ವಲಸೆ ಸಮಯದಲ್ಲಿ ಭಾರ ಕಡಿಮೆ ಇರಲು ಬಟ್ಟೆಗುಡಾರಗಳನ್ನು ತಮ್ಮ ಜೊತೆಯಲ್ಲಿಟ್ಟುಕೊಂಡು ಅಲೆದಾಡುತ್ತಾರೆ. ಹೆಚ್ಚು ಭಾರವಿಲ್ಲದ ಹಗುರವಾದ ಸಾಮಾನುಗಳನ್ನು ಬಳಸಿಕೊಂಡು ವಾಸದ ಮನೆ ಗುಡಿಸಲುಗಳು ಕುಟುಂಬದ ಗಾತ್ರ ಮತ್ತು ಅವರವರ ಅನುಕೂಲತೆ ತಕ್ಕಂತೆ ನಿರ್ಮಿಸಿಕೊಂಡಿರುತ್ತಾರೆ. ತಮ್ಮ ಇಡೀ ಸಂಸಾರದ ಜೊತೆಗೆ ಕುರಿ, ಕೋಳಿ, ನಾಯಿಗಳನ್ನು ಸಾಕಿಕೊಂಡಿರುತ್ತಾರೆ. ಅವುಗಳನ್ನು ಗುಡಿಸಲುಗಳ ಮುಂದೆ ವಾಸಕ್ಕಾಗಿ ಗೂಟಗಳನ್ನು ನೆಟ್ಟು ಅವುಗಳನ್ನು ಕಟ್ಟುತ್ತಾರೆ. ಗುಡಿಸಲ ಹಿಂಭಾಗದಲ್ಲಿ ತಮ್ಮ ಸಾಮಾನುಗಳನ್ನು ಇಡಲು ಬಿದರಿನಿಂದ ತಯಾರಿಸದ ಸಣ್ಣ ಮಂಚಗಳನ್ನು ಉಪಯೋಗಿಸುತ್ತಾರೆ. ಇದು ಪ್ರವಾಸ ಮಾಡುವಾಗಲು ತೊಂದರೆಯಾಗದಂತೆ ಸಣ್ಣ ಮಂಚಗಳನ್ನು ಗುಡಿಸಲುಗಳಲ್ಲಿ ಇವರು ಹಾಸಲು ಮತ್ತು ಹೊದೆಯಲು ಈಚಲು ಚಾಪೆ ಕೌದಿಗಳನ್ನು ಬಳಸುತ್ತಾರೆ. ಮಳೆಗಾಲವಿರಲ್ಲಿ, ಚಳಿಗಾಲವಿರಲಿ ಇಲ್ಲವೆ ಬೇಸಿಗೆ ಕಾಲವಿರಲಿ ಅದೇ ಗುಡಾರ ಗುಡಿಸಲುಗಳಲ್ಲಿ ಕಾಲಕಳೆಯುತ್ತಾರೆ. ಯಾವ ಬದಲಾವಣೆ ಮಾಡಿಕೊಳ್ಳುವುದಿಲ್ಲ ಮತ್ತು ಗುಡಿಸಲುಗಳನ್ನು ಕೊಡೆಯಾಕಾರದಲ್ಲಿ ನಿರ್ಮಿಸಿ ಮಳೆಗಾಲದಲ್ಲಿ ನೀರು ಹರಿದು ಹೋಗಲು ಮತ್ತು ಮಳೆ ನೀರು ಗುಡಾರ, ಗುಡಿಸಲಲ್ಲಿ ಒಳಗೆ ಬಾರದಂತೆ ಸುತ್ತಲು ಮಣ್ಣಿನಿಂದ ಒಡ್ಡು ಮಾಡಿಕೊಂಡಿರುತ್ತಾರೆ. ಅಡಿಗೆ ಮಾಡಲು ಒಲೆಗಳನ್ನು ಗುಡಾರದ ಮುಂಭಾಗದ ಬಯಲಿನಲ್ಲಿ ಅಡುಗೆ ಮಾಡುತ್ತಾರೆ. ಹೆಚ್ಚಾಗಿ ಈ ತರಹದ ಗುಡಾರಗಳನ್ನು ಭೀಕ್ಷಾಟನೆ ಮಾಡುವನ್ನು ಊರಿಂದೂರಿಗೆ ವಲಸೆ ಹೋಗುವವರಲ್ಲಿ ಕಾಣಬಹುದು.

ಇತ್ತಿಚೀಗೆ ಬುಡ್ಗ ಜಂಗಮರು ಅಲೆಮಾರಿ ಬದುಕನ್ನು ನಿಲ್ಲಿಸಿ ತಮಗೆ ಅನುಕೂಲವಾದ ಊರುಗಳನ್ನು ಗುರುತಿಸಿಕೊಂಡು ತಮ್ಮ ತಮ್ಮ ಸಂಬಂಧಿಕರೊಂದಿಗೆ ಒಂದೆಡೆ ನೆಲಸ ಹತ್ತಿದ್ದಾರೆ.

ಬುಡ್ಗ ಜಂಗಮರು ತಮ್ಮ ಸಮುದಾಯದವರೊಂದಿಗೆ ಊರಿನ ಹೊರ ಭಾಗವನ್ನು ಗುರುತಿಸಿಕೊಂಡು ಮನೆಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ. ಇಂಥವುಗಳಿಗೆ ಊರಿನವರು ಗುಡಾರ ನಗರ ಅಥವಾ ಭೈರಾಗಿ ಕಾಲೋನಿ, ಸಿದ್ಧರಪಾಳ್ಯ, ಸಿದ್ಧರ ಹಟ್ಟಿ, ಸಿದ್ದರ ಓಣಿ, ಬುಡ್ಗ ಜಂಗಮರ ಕಾಲೋನಿ, ಬಹುರೂಪಿ ಕಾಲೋನಿ, ಅಲೆಮಾರಿಗಳ ಕಾಲೋನಿ ಎಂದು ಕರೆಯುತ್ತಾರೆ. ಇವರು ತಮ್ಮ ಸಮುದಾಯದ ಕುಟುಂಬಗಳೆಲ್ಲಾ ಒಂದಡೆ ಇರಲು ಬಯಸುತ್ತಾರೆ. ಇತ್ತೀಚೆಗೆ ಸರ್ಕಾರದವರು ಮನೆಯಿಲ್ಲದ ಕೆಲವು ಕುಟುಂಬಗಳಿಗೆ ಆಶ್ರಯ ಮನೆಗಳನ್ನು ನಿರ್ಮಿಸಿಕೊಟ್ಟಿದ್ದಾರೆ. ಇಂತಹ ಮನೆಗಳಿಗೆ ದಿಕ್ಕು ಮತ್ತು ಆಯಾ ಅಂತಾ ಯಾವ ನಿಯಮಗಳು ಅನ್ವಯಿಸುವುದಿಲ್ಲ.

## ೩.೨ ಕ್ರಿಯಾವಿಧಿಯ ಸ್ಥಳಾವರಣ

ಕ್ರಿಯಾವಿಧಿಯ ಸ್ಥಳಾವರಣಗಳು ಬುಡ್ಗ ಜಂಗಮರೊಂದಿಗೆ ಸಂಚರಿಸುತ್ತಿರುತ್ತದೆ. ನಿತ್ಯ ಕ್ರಿಯೆಗಳಿಗೆ ಸಂಬಂಧಿಸಿದ ಸ್ಥಳಾವರಣ, ಹುಟ್ಟು ಸಾವುಗಳಿಗೆ ಸಂಬಂಧಿಸಿದ ಕ್ರಿಯಾವಿಧಿಯ ಸ್ಥಳಾವರಣ, ನಿತ್ಯ ಭಿಕ್ಷಾಟನೆ ನಡೆಸುವಾಗ ಶಾಸ್ತ್ರ, ಬುರಕಥೆ, ಹಗಲುವೇಷ, ಕೈಚಳಕದ ಆಟವನ್ನು ನಡೆಸುವ ಸ್ಥಳಾವರಣ ಹಾಗೂ ದೈವಾಚರಣೆಗೆ ಸಂಬಂಧಿಸಿದ ಸ್ಥಳಾವರಣ ಹೀಗೆ ನಾಲ್ಕು ವಿಧದ ಕ್ರಿಯಾವಿಧಿಯ ಸ್ಥಳಾವರಣಗಳನ್ನು ಬುಡ್ಗಜಂಗಮರಲ್ಲಿ ಕಾಣಬಹುದಾಗಿದೆ. ತಾವು ಎಲ್ಲೆಲ್ಲಿ ನೆಲೆಸುತ್ತಾರೋ ಅಲ್ಲಲ್ಲಿಯೇ ಸ್ಥಳಾವರಣ ಏರ್ಪಡುತ್ತದೆ. ಸೂತಕಕ್ಕೆ ಸಂಬಂಧಿಸಿದಂತೆ ಮುಖ್ಯವಾಗಿ ಸಾವಿಗೆ ಸಂಬಂಧಿಸಿದಂತಹ ಕ್ರಿಯಾವಿಧಿಯು ಸುಡುಗಾಡು (ಸ್ಮಶಾನ) ಹಾಗೂ ಗುಡಾರದ ಹೊರಭಾಗಗಳಲ್ಲಿ ನಡೆಯುತ್ತವೆ. ಹಳ್ಳಿಯ ರೈತರ ಮನೆಗಳು, ಜನ ಹೆಚ್ಚಾಗಿ ಸೇರುವ ಸ್ಥಳಗಳು ಪ್ರದರ್ಶಕ ಆಟಗಳಿಗೆ ಸ್ಥಳಾವರಣವಾಗಿರುತ್ತವೆ. ಇನ್ನು ಇವರು ಬಳಸುವ ಪರಿಕರವಾದ್ಯಗಳು, ಉಪಯೋಗಿಸುವ ವೇಷಭೂಷಣಗಳು, ಏಕನಾದ, ತಂಬೂರಿ, ಗುಮ್ಮಟ ಹಾಗೂ ಜೋಳಿಗೆಗಳೇ ದೈವಕ್ಕೆ ಸಂಬಂಧಿಸಿದ ಸ್ಥಳಾವರಣವಾಗಿರುತ್ತದೆ. ಗುಡಾರದೊಳಗೆ ಪ್ರತ್ಯೇಕ ಸ್ಥಳವೊಂದರಲ್ಲಿ, ಜೋಳಿಗೆಗಳನ್ನು ನೇತು ಹಾಕುತ್ತಿದ್ದೂ, ಆ ಜೋಳಿಗೆ ಹಾಕುವ ಸ್ಥಳವೇ ದೈವಾಚರಣೆಯ ಸ್ಥಳಾವರಣವಾಗಿರುತ್ತದೆ.

## ಬ್ರಹ್ಮಾಂಡದ ಪರಿಕಲ್ಪನೆ

ಮಾನವ ಹುಟ್ಟುವುದಕ್ಕೆ ಮುಂಚೆ ಆಕಾಶ, ಭೂಮಿ, ನೀರು, ವಾಯು, ಅಗ್ನಿ ಈ ಪಂಚ ಭೂತಗಳು ಸೃಷ್ಟಿಯಾದವು. ಈ ಪಂಚ ಭೂತಗಳ ಮಿಲನದಿಂದ ಓಂ ಎಂಬ ಓಂಕಾರ ಶಬ್ದವು ಉತ್ಪತ್ತಿ ಯಾಯಿತು. ಈ ಓಂಕಾರ ಶಬ್ದದಿಂದ ಶಕ್ತಿ ಉದಯವಾಯಿತು. ಆ ಶಕ್ತಿ ಬ್ರಹ್ಮಾಂಡವನ್ನು ಮೋಹಿಸಿ ತ್ರಿಮೂರ್ತಿಗಳನ್ನು ಹೆತ್ತಳು. ಬ್ರಹ್ಮ, ವಿಷ್ಣು, ಮಹೇಶ ಆ ಶಕ್ತಿಯು ತನ್ನನ್ನು ಮದುವೆ ಮಾಡಿಕೊಳ್ಳಬೇಕೆಂದು ಹೇಳಿದಾಗ ತ್ರಿಮೂರ್ತಿಗಳು ಒಲ್ಲೆ ಎಂದು ಹೇಳಿ ನೀನು ತಾಯಿ ಸಮಾನ ಎಂದು ತಿಳಿಸಿದರು ಆಗ ಸಿಟ್ಟಿನಲ್ಲಿ ಶಕ್ತಿಯು ಬೆಂಕಿ (ಅಗ್ನಿ)ಗೆ ಅಹುತಿಯಾದ. ಆ ಬೂದಿಯನ್ನು ಮೂರು ಭಾಗಗಳನ್ನಾಗಿ ಮಾಡಿಕೊಂಡ ಆ ಭಾಗಗಳಿಗೆ

ಪ್ರಾಣ ಪ್ರತಿಷ್ಠೆ ಮಾಡಿದಳು. ಲಕ್ಷ್ಮಿ, ಪಾರ್ವತಿ, ಸರಸ್ವತಿ ಹುಟ್ಟಿದರು. ಒಂದು ದಿನ ಶಿವ ಪಾರ್ವತಿಯರು ವಿಹಾರಕ್ಕಾಗಿ ಬಂದಾಗ ಶಿವನು ನೀರಡಿಕೆಯಿಂದ ಬಳಲುತಿದ್ದು ಶಿವನಿಗೆ ನೀರಿಗಾಗಿ ಈಚಲು ಗಿಡ ಸೃಷ್ಟಿಮಾಡಿ ಆ ಈಚಲು ಮರಕ್ಕೆ ತೂತನ್ನು ಕೊರೆದು ಆದರಿಂದ ಬಂದ ಹಾಲನ್ನು ಸೇವಿಸಲು ಪಾರ್ವತಿ ಪರಮೇಶ್ವರರು ತೃಪ್ತಿಯಾದರು. ನಂತರ ಆ ಈಚಲ ಮರವು ಶಿವನಲ್ಲಿ ಬೇಡಿಕೊಂಡಿತು. ನಿನ್ನ ದಾಹ ನಾನು ತೀರಿಸಿದೆ ಸ್ವಾಮಿ, ಇದೆ ರೀತಿಯ ಹಾಲನ್ನು ಕುಡಿಯಲು ಒಬ್ಬ ಮಾನವನನ್ನು ಸೃಷ್ಟಿಮಾಡು ಎಂದಾಗ ಶಿವನು ಒಬ್ಬ ಈಡಿಗ ಗೌಡನನ್ನು ಸೃಷ್ಟಿಮಾಡಿ ಆ ಈಚಲು ಗಿಡದಿಂದ ಬಂದ ಹಾಲನ್ನು ಶಿವನಿಗೆ ನೀಡಲು ಆಜ್ಞಾಪಿಸಿದ ಸ್ವಲ್ಪ ದಿನಗಳ ನಂತರ ಈಡಿಗ ಗೌಡನಿಗೆ ಶಿವನಲ್ಲಿ ಬೇಡಿಕೊಂಡ ನನಗೂ ಜೋಡಿಯನ್ನು ಪ್ರಸಾದಿಸು ಎಂದನ್ನು ಈ ರೀತಿಯಾಗಿ ಮಾನವ ಸಂತತಿ ಬೆಳೆಯಿತು. ಶಿವನು ಕುಡಿದ ತೀರ್ಥ(ಹೆಂಡ) ನಮ್ಮ ಬುಡ್ಗಜಂಗಮ ಸಮುದಾಯದ ಶುಭ-ಅಶುಭ ಕಾರ್ಯಗಳಿಗೆ ಪವಿತ್ರ ಎಂದು ಭಾವಿಸುತ್ತಾರೆ.

**ಯುಗಗಳು :** ಆದಿ, ಅನಾದಿ, ಕಳಂತರ, ಅದ್ವೃತ, ಕಮಂಜ, ಕಾಲಜ, ಕಂಡಜ, ಬಿನ್ನಜ, ಭಿನ್ನಾಯುಕ್ತ, ಮಾನಗಣ್ಣ, ಮನಿಗಣ್ಣ, ವಿಶ್ವಾಸು, ತ್ರೇತಾಯುಗ, ಕೃತಯುಗ, ದ್ವಾಪರ, ಕಲಿಯುಗ.

**ಯುಗಧರ್ಮ:** ಆದಿಯೆಂಬ ಯುಗವನ್ನು ಅಖಂಡೇಶ್ವರ ನಿರ್ಮಾಣ ಮಾಡಿದ. ಅನಾದಿ ಯುಗದಲ್ಲಿ ಸ್ವಾಮಿ ಕಾಯ ಉದ್ಭವಿಸಿತು. ಅನಂತನೆಂಬುವನು ಸಾಕ್ಷಾತ್ ಪರಮಾತ್ಮನ ಪಾದದಲ್ಲಿ ಪುಟ್ಟಿದನು, ಅದ್ವೈತವೆಂಬ ಯುಗದಲ್ಲಿ ಪಾರ್ವತಿ ದೇವಿ ಪುಟ್ಟಿದಳು, ತಮಂಗನಿಯೆಂಬ ಯುಗದಲ್ಲಿ ನಾರಾಯಣ ಪುಟ್ಟಿದನು. ನಾರಾಯಣನ ನಾಭಿಯಲ್ಲಿ ಕಮಲ ಪುಟ್ಟಿತು. ಆ ಬ್ರಹ್ಮನಿಗೆ ಅಜರಂಬಸ್ಮ ಆಯಿತು. ತಂಡಿ ಜನ್ಮ ಯುಗದಲ್ಲಿ ಬ್ರಹ್ಮಾಂಡ ಹುಟ್ಟಿತು. ಭಿನ್ನಜವೆಂಬ ಯುಗದಲ್ಲಿ ಆತಂಕದಲ್ಲಿ ಭಿನ್ನವಾಯಿತು. ಭಿನ್ನವಾಗುತ್ತಲೇ ಮೇಲು ಪರ್ಯಂಗಳು ಪುಟ್ಟಿದವು. ಆಯುಕ್ತಿಯೆಂಬ ಅಷ್ಟಕುಲ ಪ್ರವರ್ತಗಳು ಪುಟ್ಟಿದವು. ಅಮಾದಿತ್ಯವೆಂಬ ಯುಗದಲ್ಲಿ ಸಪ್ತ ಋಷಿ ಮಂಡಲಗಳು ಪುಟ್ಟಿದವು. ಮುನಿಯೆಂಬ ಯುಗದಲ್ಲಿ ಸಪ್ತ ಏಳು ಸಮುದ್ರಗಳು ಪುಟ್ಟಿದವು. ಮಾನಿನನೆಂಬ ಯುಗದಲ್ಲಿ ದೇವಾನುದೇವತೆಗಳು ಪುಟ್ಟಿದರು. ಈಶ್ವರನೆಂಬ ಯುಗದಲ್ಲಿ ಚಂದ್ರ ಸೂರ್ಯಾದಿಗಳು ಪುಟ್ಟಿದರು. ಇಶ್ವಾಸುವೆಂಬ ಯುಗದಲ್ಲಿ ಧನ, ರತ್ನ ಪುಟ್ಟಿದವು. ಅಲಂಕೃತೆಯೆಂಬ ಯುಗದಲ್ಲಿ ಉತ್ತಮ, ಮಧ್ಯಮ, ಕಷ್ಟ ಪುಟ್ಟಿದವು. ತ್ರೇತಾಯುಗದಲ್ಲಿ ದೇವ ದೈತ್ಯರ ಮದುವೆಯಾಯಿತು. ದ್ವಾಪರದಲ್ಲಿ ಪಾಂಡವರ ಯುದ್ಧವಾಯಿತು. ಕಲಿಯುಗದಲ್ಲಿ ಆಸೆ -ಇಸೆಗಳಿಗೆ ಯುದ್ಧವಾಯಿತು.

೪

# ಬಂಧುತ್ವ ಮತ್ತು ವಿವಾಹ

ಬುಡ್ಗ ಜಂಗಮರಲ್ಲಿ ಸ್ವಗೋತ್ರಗಳು ಬಿಟ್ಟು ಉಳಿದೆಲ್ಲ ಗೋತ್ರಗಳೊಂದಿಗೆ ಸಂಬಂಧ ಮತ್ತು ಬಂಧುತ್ವವನ್ನು ಬೆಳೆಸುತ್ತಾರೆ. ಹಾಕುವ ವೇಷ, ವೃತ್ತಿ, ಕಸುಬು ಬೇರೆ ಬೇರೆಯಾದರು ಅವರ ಭಾಷೆ, ಆಚಾರ-ವಿಚಾರ, ಬೆಡಗುಗಳು ಒಂದಾಗಿದ್ದರೆ ಅವರಲ್ಲಿ ಕೊಟ್ಟು ತೆಗೆದು ಕೊಳ್ಳುತ್ತಾರೆ. ಇವರ ಬಂಧುತ್ವನ್ನು ಮದುವೆಯ ಸಂದರ್ಭದಲ್ಲಿ ಬಹಳ ವಿಶೇಷವಾಗಿ ಕಾಣುತ್ತೇವೆ. ಮದುವೆಗೆ ಬಂದ ಎಲ್ಲ ಕುಲಸ್ಥರಿಗೆ ಊಟ ಉಪಚಾರ ಹೆಂಡ, ಸರಾಯಿ ಅಲ್ಲದೆ ಬಸ್ ಚಾರ್ಜ ಕೂಡಾ ಕೊಡುತ್ತಾರೆ.

## ಬುಡ್ಗ ಜಂಗಮರ ಬೆಡಗು ಮತ್ತು ಅರ್ಥ

೧. ಮತಸಂಬಂಧ ಗೃಹನಾಮ ವೀರಶೈವ ಮತ ಅವಲಂಭಿಸಿರುವ ಜಂಗಾಲೆ ಕಾಲಕ್ರಮೇಣ ಬೇರೆ ಬೇರೆಯಾಗಿ ಪ್ರತ್ಯೇಕವಾದ ಬೆಡುಗುಗಳುಳ್ಳ ಇವರ ಪೂರ್ವಿಕರು ಶೈವ ಸಂಸ್ಕೃತಿಯನ್ನು ಉಳ್ಳುವರು ಮತ್ತು ಮಧುಮಾಂಸಹಾರಿಗಳು. ಶಿವನ ಭಕ್ತ ಆರಾಧಕರು. ಆದ್ದರಿಂದ ಇವರು ಬೆಡುಗಗಳ ಸಿರಿಗಿರಿ, ವಿಭೂತಿ, ಪ್ರಸಾದಂ ರುದ್ರಾಕ್ಷಲು, ಪೈರ, ಇದರಲ್ಲಿ ಮತಸಂಬಂಧ ಗೃಹನಾಮಗಳಲ್ಲಿ ಪರ್ವತಮ್, ಒಂಟೆದ್ದು ಸಂಕುಲ ದೂಪಂ, ಸಿರಿಶಾಲ, ಶಿರವಾಟಿ, ಮುಖ್ಯ ವಾದವು.

೨. ಸಂಸ್ಕೃತಿ ಸಂಬಂಧ ಬೆಡಗುಗಳು ಸಂಸ್ಕೃತಿ ಕವಿತತ್ರೆಕಂ ಸಂಬಂಧಿಸಿದ ಬೆಡುಗಗಳು ಕಾಣುತ್ತವೆ. ಆಂಧ್ರಗಳಲ್ಲಿ ನಿಧಾನ ಕವಿ, ಭಾಕಿತಕವಿ, ಚಿತ್ತಾರಿ, ಬೊಮ್ಮಲ, ಸಂಸ್ಕೃತ, ಚಿತ್ರಕಾರ ಇದೆ. ಚಿತ್ರ ಪ್ರದರ್ಶನದಲ್ಲಿ ಉಂಟಾದ ತೊಗಲು ಗೊಂಬೆಯಾಟದ ಬೊಮ್ಮಲ ಅಟ.

ಕೆಲವು ಶೈವ ಗೋತ್ರಗಳು ಇವು ಶಿವನ ಆರಾಧಕರಾಗಿದ್ದು ಶೈವ ಮತ ಪ್ರಚಾರಕ್ಕಾಗಿ ಶೈವ ಕತೆಗಳನ್ನು ಹೇಳುತ್ತಾ ನೆಲೆಸಿರುವರು ಕಂಡುಬರುತ್ತದೆ. ಮತ್ತೆ ವೃಕ್ಷ ಸಂಬಂಧ ಬೆಡಗಿನವರು ಅವರು ಪ್ರಕೃತಿ ಆರಾಧಕರಾಗಿರುವುದು ಕಂಡುಬರುತ್ತದೆ. ಕೆಲವು ಬೆಡಗುಗಳು ಗ್ರಾಮಗಳ ಅಥವಾ ಊರುಗಳಿಂದ ಅಲೆಮಾರಿಗಳಾಗಿ ಬಂದಾಗ ಆದೆ ಊರಿನ ಗೋತ್ರಗಳು ಇರುವುದು ಕಂಡುಬರುತ್ತದೆ. ಕೆಲವರು ಗುಟ್ಟು ಪ್ರದೇಶ ಮತ್ತು ಹಳ್ಳ ಕೊಳ್ಳ (ರೇವು) ಬಂದಾಗ ಅದೇ ಗೋತ್ರಗಳು ಕಂಡುಬರುತ್ತವೆ. ಇನ್ನು ಕೆಲವರು ಆಯುರ್ವೇಧ ಸಸ್ಯಗಳು ಮತ್ತು ಎತ್ತು ಕುದುರೆ ಹೀಗೆ ಪ್ರಾಣಿ ಸಂಬಂಧ ಗೋತ್ರಗಳು ಸಹ ಕಂಡು ಬರುತ್ತವೆ.

ಒಟ್ಟಿನಲ್ಲಿ ಈ ಬುಡ್ಗ ಜಂಗಮ ಸಮುದಾಯದ ಎಲ್ಲಾ ಮೂಲಿಗರು ಪ್ರಕೃತಿ ಆರಾಧಕರಾಗಿದ್ದು ಬುಡಕಟ್ಟು ನೆಲೆಯಿಂದ ಚಿಕ್ಕ ಚಿಕ್ಕ ಗುಂಪುಗಳು ಒಂದಾಗಿ ಇವರ ಮೇಲೆ ಶೈವ ಮತ್ತು ವೈಷ್ಣವ ಪ್ರಭಾವದಿಂದ ಬೇಡ, ಬುಡ್ಗ ಜಂಗಮ ಮಾಲಜಂಗಮ ಎಂದು ಇದೇ ರೀತಿ ವೈಷ್ಣವ ಪ್ರಚಾರಕರ ಪ್ರಭಾವಕ್ಕೆ ಒಳಗಾಗಿ ಚೆನ್ನದಾಸ ಮಾಲದಾಸ ಎಂದು ವರ್ಗೀಕರಣವಾಗಿ ಹೋಗಿರುವುದು ಬೆಡಗುಗಳು, ಭಾಷೆ ಭೌಗೋಳಿಕ ಸೌಮ್ಯತೆ ತಿಳಿದುಬಂದಿರುತ್ತದೆ.

ಈ ಬೇಡ ಬುಡ್ಗ ಜಂಗಮರಲ್ಲಿಯೂ ಅನೇಕ ವೃತ್ತಿಗಳಿಂದ ವರ್ಗೀಕರಣವಾಗಿ ಬುಡ್ಗ ಜಂಗಮರಲ್ಲಿ ಅನೇಕ ವೃತ್ತಿಗಳು ಮಾಲಜಂಗಮರಲ್ಲಿ ಅನೇಕ ವೃತ್ತಿಗಳು ಕಂಡು ಬಂದಿರುತ್ತವೆ. ಈ ಬೇಡ ಬುಡ್ಗ ಜಂಗಮ ಮಾಲಜಂಗಮ ಇವರಲ್ಲಿ ಭಾಷೆ, ಬೆಡಗು, ಆಚಾರ, ವಿಚಾರ, ಒಂದೇ ಆಗಿರುವುದು ಸಂಶೋಧನೆಗಳಿಂದ ಮತ್ತು ಜಾತಿ ಮುಖಂಡರ ಹೇಳಿಕೆಗಳಿಂದ ಈ ಕಾರ್ಯಕ್ಷೇತ್ರದಲ್ಲಿ ತಿಳಿದು ಬಂದಿರುತ್ತದೆ.

**ಬೆಡಗು**

| | |
|---|---|
| ೧. ಅಲಂ | ೨. ಅಲೇವೆ |
| ೩. ಅವಧೂತ | ೪. ಅಶ್ವಿ |
| ೫. ಇನುಕೊಂಡ | ೬. ಇರ್ಲಾ |
| ೭. ಇಂಗುವ | ೮. ಇಪ್ಪ |
| ೯. ಈರಪಲ್ಲಿ | ೧೦. ಈರಲ್ಲಪಲ್ಲಿ |
| ೧೧. ಈಭೂತಿ | ೧೨. ಊರಾ |
| ೧೩. ಒಂಟೆದ್ದು | ೧೪. ಕಡೆಮ್ |
| ೧೫. ಕಡಿಮಿ | ೧೬. ಕಳಾಮಸ್ತಿ |
| ೧೭. ಕಲ್ಯಾಣಂ ಕಲ್ಯಾಂ | ೧೮. ಕಾಮಂಡ್ಲ ಪಲ್ಲಿ |
| ೧೯. ಕಂಕನಾಳ | ೨೦. ಕನುಗುರಿ |
| ೨೧. ಕನ್ನಾಟಿ | ೨೨. ಕಪ್ಪೇರಾ, ಕಪ್ಪೇರಿ |
| ೨೩. ಕರಿಟಾಂ | ೨೪. ಕರ್ರೆ, ಕರ್ರಿ |
| ೨೫. ಕರ್ನಕೋಟಾ | ೨೬. ಕಿನ್ನಾರ, ಕಿನ್ನರಿ, ಕಿಂದರ |
| ೨೭. ಕಾಟುಮುರಿ | ೨೮. ಕೋಡಿಗಂಟಿ |
| ೨೯. ಕೊದಂಡಮ | ೩೦. ಕೋಮಾರಿ |
| ೩೧. ಕೋಳ್ಳಾ | ೩೨. ಕೊಂಡ್ರ |
| ೩೩. ಕೊಂಡಪಲ್ಲಿ | ೩೪. ಕೊಂಡುರಿ, ಕೊಂಡುರು,ಕೊಂಡ್ರೊಳು |
| ಗಂಗಿನ ಪಲ್ಲಿ | ೩೫. ಗಂಟಿ |
| ೩೬. ಗಾನುಗ | ೩೭. ಗಿಟ್ಟಾ |
| ೩೮. ಗಂದೋತಿ | ೩೯. ಗುರಾನ |

೪೦. ಗಂಧಂ
೪೧. ಗಡ್ಡಂ
೪೪. ಗುಪ್ಪಾ
೪೬. ಗೋನಿಗಂಟ್ಲಾ
೪೮. ಚರ್ಲಪಲ್ಲಿ ಬೋಡ್‌ಪುರ್ತಿ
೫೦. ಚೆನ್ನಪಲ್ಲಿ
೫೨. ಚಿರಪಾಟಿ
೫೪. ಜಂಪ್ರೂಳು
೫೬. ತಿರುಪತೋಳ್ಳು
೫೮. ತಲಮಂಚಿ
೬೦. ತೂರ್ಲಪಾಟಿ
೬೨. ದುದ್ದುಕೂರಿ, ದುದ್ದುರ್ಕಿ
೬೪. ದೂಪಂ ವಿಭೂತಿ
೬೬. ನಂದಪೂರಿ, ನಂದಪುರಿ
೬೮. ನರಕುಟಿಬೈಲುಪಾಡೋಲ
೭೦. ನಾಮಾಲ
೭೨. ನಿಡುಗೊಂಡ, ನಿಡುಕೊಂಡ, ನಿರುಕೊಂಡ
೭೪. ನ್ಯಾರಕಂಟ್ಲ್ಯೊಲು
೭೬. ಪಚ್ಚಗಂಟ್ಲಿ
೭೮. ಪನಪು
೮೦. ಪನುಗಂಟಿ
೮೨. ಪರ್ಥಂ
೮೪. ಪರ್ರೆ
೮೬. ಪಸ್ತಂವಾವಿ
೮೮. ಪಟ್ಟಿಮಿದಿ, ಪೊಟಿಮಿದಿ
೯೦. ಪತ್ರಿ
ಪದಿರೆ
೯೨. ಪೊನ್ನಕಂಟಿ
೯೪. ಪುರೋತ್ರಂ
೯೬. ಪೆರ್ನಿ, ಪ್ಯಾರ್ಲೆ
೯೮. ಪೊನೆಟಿ

೪೧. ಗುರಾನಿ
೪೩. ಗಗನ ಗಗನಂ
೪೫. ಗುಂಡುಪಲ್ಲಿ
೪೭. ಗೊ
೪೯. ಚೆಲಿಮಂಡ್ಲ ಸನಮಂಡ್ಲ
೫೧. ಚೆನ್ನೂರಿ
೫೩. ಜೇಡಿಮೆಟ್ಲಿ
೫೫. ಜಂಪೆಲ್ಲಿ ಜಂಪಿಲ್ಲಿ ಜಂಪಲ್ಲಿ
೫೭. ತೊಟಿ
೫೯. ತಾಟಿಕೊಂಡ, ಪಾಲ್ಕ
೬೧. ತೂರಾಪಾಟಿ ತುರಪತಿ
೬೩. ದೊಬ್ಬೆ ದೂಡ್ಡ
೬೫. ದೇವರಪಲ್ಲಿ
೬೭. ನರ್ಲಗಂಟಿ, ನೆರಗಂಟಿ
೬೯. ನಾಗೂಲಾ
೭೧. ನಿಧಾನಕವಿ
೭೩. ನೂನೆ
೭೫. ಪಚ್ಚಗಂಟಿಲು
೭೭. ಪಲಪಾಟಿ
೭೯. ಪಲಗಡ
೮೧. ಪಂಚಡಿ
೮೩. ಪರದಾಕ್ಷನ, ಪ್ರದಕ್ಷಣ
೮೫. ಪಸುವುಲೇಟಿ
೮೭. ಪಟ್ರಿ
೮೯. ಪತ್ರ
೯೧. ಪ್ರಸಾದಂ
೯೨. ಪಾರ್ವತಂ
೯೩. ಪಾಕ
೯೫. ಪುಟ್ಟಿ
೯೭. ಪೇಳ್ಳುರಿ
೯೯. ಪೊಲಪೋರಿ

೧೦೦. ಪೊವ್ವನಂ
೧೦೧. ಬಲಗೋಲ
೧೦೨. ಬಂಡಾರಿ
೧೦೩. ಬಾರತ್‌ಕವಿ, ಬರಾತ್‌ಕಾಯಿ ಭಾರತಿ
೧೦೪. ಭೂತಂ, ಬೋತಂ
೧೦೫. ಬೆಂತಲ
೧೦೬. ಬೆತ್ತಾರಿ
೧೦೭. ಬೋಡಪರ್ತಿ
೧೦೮. ಬೈಲುಪಾಟೆ
೧೦೯. ಬೈಲು ಪಾಡೋಲ
೧೧೦. ಮದರಿಯೋಳು
೧೧೧. ಮಾದೇನ್, ಮಾದನ್ನಮ, ಮಾದನ್ನಿ
೧೧೨. ಮಾಕಿರೆಡ್ಡಿ
೧೧೩. ಮಾಮಿಡಿ
೧೧೪. ಮೆಕಲ, ಮ್ಯಾಕಲ
೧೧೫. ಮಿರಿಯಾಲ
೧೧೬. ಮೊಡೆಮ
೧೧೭. ಮೂವಲ, ಮೂಲ
೧೧೮. ಮೋಟಮ್, ಮೊಗಟಮ್
೧೧೯. ಮೋತಿ, ಮಾತಿ
೧೨೦. ಮೇಟ್ಕೂರಿ
೧೨೧. ಮೋಟು
೧೨೨. ಮುಗ್ಗೋಳು
೧೨೩. ರಚೂರಿ, ರಾಸುತಿ, ರಾಚುತಿ
೧೨೪. ಯಡಪಲ್ಲಿ, ಯಡವಲ್ಲಿ
೧೨೫. ಯಲಪರ್ತಿ
೧೨೬. ಯಲವರ್ತಿ, ಯಲಮರ್ತಿ
೧೨೭. ರಾಮಲೊಬ
೧೨೮. ರಾಸುಸೂರಿ
೧೨೯. ರೆವೆಲ್ಲ ರೆವಲೊಲು
೧೩೦. ರುದ್ರಾಕ್ಷಲ
೧೩೧. ವಡ್ಡಿ, ಒಡ್ಡಿ
೧೩೨. ವಕಡಂದಮ್
೧೩೩. ವನಂ
೧೩೪. ವನ್‌ಡ್ರಾಸಿ, ಆನ್‌ಡ್ರಾಸಿ, ಆನರಾಸಿ
೧೩೫. ವಾನರಾಶಿ
೧೩೬. ವೆಮುಲ, ವಿಮುಲ
೧೩೭. ವಿರನಪಲ್ಲಿ, ಇರ್ವಲ್ಲಿ
೧೩೮. ವೀರ್ನಪಲ್ಲಿ
೧೩೯. ವಿಭೂತಿ, ಉಭೂತಿ ಇಪ್ತಿ
೧೪೦. ವೀನಕೊಂಡ, ವಿನುಕೊಂಡ
೧೪೧. ಶೆಚೆರ್ಲ
೧೪೨. ಶಿವದೇವುನಿ
೧೪೩. ಶಿವರಾತ್ರಿ
೧೪೪. ಶಿರವಾಟ, ಸಿರುವಾಟ, ಸಿರುಪತಿ
೧೪೫. ಸಾಲ, ಚಾಲ
೧೪೬. ಸದುಲ
೧೪೭. ಸಂಕು, ಸಂಕುಲ
೧೪೮. ರಿಗೇರಿ ಶ್ರಿಗಿರಿ
೧೪೯. ಸಿರಿಗಿರಿ
೧೫೦. ಸಿರಿಸಾಲ, ಶ್ರಿಶೈಲ್
೧೫೧. ಸೊಮದನಿ
೧೫೨. ಹಪ್ಪ
೧೫೩. ಹಿಪ್ಪೋಳು
೧೫೪. ಹಂದಿ, ಹಂದ್ಯೋಳು
೧೫೫. ಅಂದಿ, ಅಂದ್ಯೋಮೊಳು

## ಮದುವೆ

ಮದುವೆ ಮಾನವ ಬದುಕಿನ ಹದಿನಾರು ಸಂಸ್ಕಾರಗಳಲ್ಲಿ ಅತ್ಯಂತ ಪವಿತ್ರ ಹಾಗೂ ಪ್ರಮುಖವಾದುದು. ಪ್ರತಿಯೊಂದು ಜೀವಕೋಟಿಗೂ ಗೃಹಸ್ಥಾಶ್ರಮ ಪ್ರಮುಖ ಘಟ್ಟ.

ಮಾನವನ ಇಂದ್ರಿಯ ಸಹಜ ಬಯಕೆಗಳನ್ನು ಸಕ್ರಮಗೊಳಿಸಿ ಅದಕ್ಕೆ ನೈತಿಕ ಚೌಕಟ್ಟನ್ನು ಒದಗಿಸುವಲ್ಲಿ ಬಹುಮುಖ್ಯ ಪಾತ್ರವನ್ನು ವಹಿಸುತ್ತದೆ. ಮೂಲತಃ ಅಲೆಮಾರಿಗಳಾದ ಇವರು ತಮ್ಮದೇ ಆದಂತಹ ವಿಶಿಷ್ಟವಾದಂತಹ ಮತ್ತು ಸರಳವಾದಂತಹ ವಿವಾಹ ಪದ್ಧತಿಯನ್ನು ರೂಢಿಸಿಕೊಂಡು ಬಂದಿದ್ದಾರೆ. ಹುಡುಗಿಯನ್ನು ತಮ್ಮದಾಗಿಸಿ ಕೊಳ್ಳುವುದು ವಿಚಿತ್ರ ದೇಶಾಟನೆಗೆ ಹೋದಾಗ, ಮೇಳ ಕಟ್ಟಿದಾಗ, ಬೇಟೆಗೆ ಹೋದಾಗ, ಸರಾಯಿ ಕುಡಿದ ಸಮಯದಲ್ಲಿ ಸ್ನೇಹ ಬೆಳೆದು ಒಬ್ಬರ ಮಗನಿಗೆ ಇನ್ನೊಬ್ಬರ ಮಗಳ ಕೊಡಬೇಕೆಂದು ನಿರ್ಣಯ ತೆಗೆದುಕೊಳ್ಳುತ್ತಾರೆ. ಇದು ಇಳೇವು ಇದಕ್ಕೆ ಮೊದಲು ತೆಗೆದುಕೊಂಡ ನಿರ್ಣಯ. ವರನ ಕಡೆಯವರು ವಧುವಿನ ಮನೆಗೆ ಬಂದು ವಧುವನ್ನು ನೋಡಿ ನಿಶ್ಚಯಿಸಿ ತಾಂಬೂಲ ಬದಲಾಯಿಸಿಕೊಳ್ಳುವರು ಮತ್ತು ಆ ಹುಡುಗಿಯ ತಂದೆ ತಾಯಿಗಳನ್ನು ಹೆಂಡದ ಅಂಗಡಿಗೆ ಕರೆದುಕೊಂಡು ಹೋಗಿ, ಅವರಿಗೆ ಹೆಂಡ ಕೊಟ್ಟು ನಿಮ್ಮ ಮಗಳನ್ನು ನಮ್ಮ ಮಗನಿಗೆ ಮದುವೆ ಮಾಡಿಕೊಳ್ಳುತ್ತೇವೆಂದು ಹೇಳುತ್ತಾರೆ. ಆ ಹುಡುಗಿಯ ತಂದೆ ತಾಯಿಗಳನ್ನು ಇಷ್ಟಪಟ್ಟರೆ ಹೆಂಡ ಕುಡಿಯುತ್ತಾರೆ. ಇದಕ್ಕೆ ವರನ ತಂದೆ-ತಾಯಿಗಳು ಒಬ್ಬ ಕುಲಸ್ಥನನ್ನು ಕರೆದುಕೊಂಡು ಹೋಗಿ ಹೆಂಡ ಕುಡಿಸಿ ತಮ್ಮ ಸಂಬಂಧದ ಖಾಯಂ ಮಾಡುವರು. ಒಂದುವೇಳೆ ಮಾತು ತಪ್ಪಿದರೆ ಪಂಚಾಯತಿ ಹಾಕಿ ಬಗೆಹರಿಸುವರು.

ಇವರಲ್ಲಿ ಬಾಲ್ಯ ವಿವಾಹ ಹೆಚ್ಚು ಆದುದರಿಂದ ಹುಡುಗಿ ಮೈನೆರೆತ ಮೇಲೆ ಆ ಹುಡುಗಿಯ ತಂದೆ ತಾಯಿಗಳು ಅವಳ ಗಂಡನ ಊರಿಗೆ ಹೋಗಿ ನಮ್ಮ ಹುಡುಗಿ ದೊಡ್ಡವಳಾಗಿ ತಿಂಡಿ ತಿನ್ನು ಹಾಗೆ ಆಗಿದ್ದಾಳೆ, ಬಟ್ಟೆ ಕಟ್ಟುವವಳು ಆಗಿದ್ದಾಳೆ ಎಂದು ಹೇಳಿ ಬರುತ್ತಾರೆ.

**ಇಡೆಂ (ಇಳೇವು)** ಮೊದಲ ತಾವು ಸಂಬಂಧ ಬೆಳೆಸಲು ಹೋಗುವ ಕುಟುಂಬದವರ ಗುಣಸ್ವಭಾವ ತಿಳಿದುಕೊಂಡು, ಮದುವೆಯಾದ ಮಕ್ಕಳಿದ್ದರೆ ಯಾವ ರೀತಿ ತಿರುಗಿ ಜೀವನ ನಡೆಸುತ್ತಿದ್ದಾರೆಂದು ವಿಚಾರಿಸಿ ಎಲ್ಲಾ ವಿಧದಲ್ಲಿ ಮೆಚ್ಚುಗೆಯಾದ ಮೇಲೆ ಸಂಬಂಧ ಬೆಳೆಸಲು ನಿರ್ಧರಿಸುತ್ತಾರೆ.

ಇಂಡೆಂ ಇಡುವ ದಿನ ತಿಳಿದ ಮೇಲೆ ಮುಂಜಾನೆ ವರನ ತಂದೆ-ತಾಯಿ ಕುಲದ ಹಿರಿಯರನ್ನು ಕರೆದುಕೊಂಡು ಹುಡುಗಿಯ ಮನೆಯ ಮುಂದೆ ಕುಳಿತ ಮೇಲೆ ಕುಲದ ಹಿರಿಯ ಗಂಡನ ತಂದೆಯನ್ನು ಕುರಿತು ಮನೆಯ ಹೆಸರು ಸಂಭೋದಿಸಿ ಉದಾ. ತೂರ್ಪಾಟೆ, ವಿಭೂತಿ, ಪಸ್ತಂ, ಯಡವಲ್ಲಿ ಮುಂತಾದವು. ಏನಪ್ಪ ತೂರ್ಪಾಟೆಯಾತ ಎಷ್ಟು ಮಂದಿ ಕುಲಸ್ಥರನ್ನು ವಿಭೂತಿಯವರ ಮನೆ ಮುಂದೆ ಕಲೆ ಹಾಕಿದ್ದಿ ಏನು ಸಂಗತಿ? ಆಗ ಹುಡುಗನ ತಂದೆ ಕುಲಕ್ಕೆ ಶರಣಾರ್ತಿ ಎಂದು ಹೇಳಿ ನಾನು ನಮ್ಮ ತಾತ ಮುತ್ತಾತಂದಿರ ಕಾಲದಿಂದ ಬಾಳುವೆ ಮಾಡುತ್ತಾ ಈ ಗಡ್ಡೆಗೆ ಬಂದಿದ್ದೇನೆ. ನಮ್ಮ ತಂದೆ ನಾವು ಬದುಕಿದ್ದು ನಿಮಗೆ ಗೊತ್ತಿದೆ. ನಾವು ಒಳ್ಳೆಯವರೋ ಇಲ್ಲವೋ ನಿಮಗೆ ತಿಳಿದಿದ್ದೆ ಇದೆ. ನಾವು ಹೊಡೆದಾಡಿದ್ದು, ದಂಡ ಕಟ್ಟಿದ್ದು ದ್ರೋಹ ಬಗೆದದ್ದು ಒಬ್ಬನನ್ನು ಕೈಯಿತ್ತಿ ಹೊಡೆದಿದ್ದು, ಕುಲವನ್ನು ಮುಳುಗಿಸಿದ್ದು

ಹತ್ತು ಮಂದಿಗೆ ಸಹಾಯ ಮಾಡಿದ್ದು ಎಲ್ಲಾ ನಿಮಗೆ ಗೊತ್ತಿದೆ. ನಮ್ಮ ಹೊಟ್ಟೆಯಲ್ಲಿ ಬುಡುಮೆ ಕಾಯಿಯಂತಹ ಮಗ ಹುಟ್ಟಿದ್ದಾನೆ. ಅವನಿಗೆ ಹುಡುಗಿಯನ್ನು ನೋಡಿ ಹೆಂಡ ಹಾಕಿಸೋಣ ಅಂತ, ಈ ವಿಭೂತಿಯಾತನ ಮನೆಯಲ್ಲಿ ಅಂಬಲಿ ಇದೆ ಎಂದು ಬಂದಿದ್ದೇನೆ.

ಆಗ ಕುಲದ ಹಿರಿ ವಧುವಿನ ತಂದೆಯನ್ನು ಉದ್ದೇಶಿಸಿ ಏನಯ್ಯಾ ವಿಭೂತಿಯಾತ, ತೂರ್ರೂಟಿಯಾತ ಬಂದಿದ್ದಾನೆ. ಇದಕ್ಕೆ ನೀನು ಏನು ಹೇಳುತ್ತೀಯ? ನಿಮ್ಮ ಮನೆಯಲ್ಲಿ ಅಂಬಲಿ ಇದೆಯಂತ ಬಂದಿದ್ದಾನೆ ಎಂದು ಕುಲಸ್ಥರು ವಿಚಾರಿಸಿದಾಗ ವಧುವಿನ ತಂದೆ ಕುಲಕ್ಕೆ ನಮಸ್ಕಾರ ಶರಣು ಶರಣಾರ್ತಿ, ಕುಲವಿಲ್ಲದೆ ಮನುಷ್ಯನಿಲ್ಲ. ವನವನ್ನು ಬಿಟ್ಟು ಕೋತಿ ಯಿಲ್ಲವೆಂದು ದೊಡ್ಡವರು ಹೇಳುತ್ತಾರೆ. ತೊರ್ರೂಟಿಯಾತ ನಮ್ಮ ಮನೆಗೆ ಬಂದಿದ್ದಾನೆ. ಒಳ್ಳೆಯದೇ ಆಯ್ತು. ನನಗೊಂದು ಬುಡಿಮೆಕಾಯಿಯಂತ ಮಗಳು ಇದ್ದಾಳೆ. ಹೆಣ್ಣು ಇದ್ದ ಮನೆಗೆ ನಾಲ್ಕು ಜನ ಬರುವುದು ಸಹಜ. ಎಷ್ಟಿದ್ದರೂ ಹೆಣ್ಣು ಬೇರೆ ಮನೆಯವರ ಆಸ್ತಿ. ನಮ್ಮ ಹುಡುಗಿಯನ್ನು ಕುಲಕ್ಕೆ ಕೊಡದಿದ್ದರೆ ಮನೆಯಲ್ಲಿ ಇಟ್ಟುಕೊಳ್ಳುತ್ತೇನೆಯೇ? ಕೊಟ್ಟ ಹುಡುಗಿಯ ತಲೆಗೆ ಎಣ್ಣೆ ಮೈಗೆ ಬಟ್ಟೆ, ಹೊಟ್ಟೆ ತುಂಬ ಊಟ ಕೊಟ್ಟರೆ ಸಾಕು ಎನ್ನುತ್ತಾರೆ.

ಒಂದು ವೇಳೆ ತಂದೆ ಒಪ್ಪಿದರೆ, ತಾಯಿಯನ್ನು ಕೇಳುತ್ತಾರೆ. ಅವಳು ನನ್ನ ಮಗಳಿಗೆ ಜಿದ್ದು ಇಲ್ಲ, ಕೆಟ್ಟ ಬುದ್ಧಿ ಇಲ್ಲ, ಸುಳ್ಳು ಪಾರಪತ್ಯ ತಿಳಿಯದು. ಮತ್ತೆ ನೀವು ನನ್ನ ಮಗಳನ್ನು ಹೇಗೆ ನೋಡಿಕೊಳ್ಳುತ್ತೀರಿ ಹೇಳಿ? ನಮ್ಮ ಹುಡುಗಿ ಈಗ ಕುಲದ ಹುಡುಗಿ ಅವಳನ್ನು ಕುಲದ ಕೈಯಲ್ಲಿ ಕೊಡುತ್ತಿದ್ದೇನೆ. ನಂತರ ಹಿರಿಯರು ಹುಡುಗಿಯ ಚಿಕ್ಕಪ್ಪ ಮತ್ತು ದೊಡ್ಡಪ್ಪ ಅವರನ್ನು ಕೇಳುತ್ತಾರೆ. ಅಯ್ಯಾ ಕೇಳುವುದೇನಿದೆ, ಹೇಳುವುದೇನಿದೆ ಅವರಾಡಿದ ಮಾತಿಗೆ ನಾವಿರುತ್ತೇವೆ ಎಂದು ಹೇಳುತ್ತಾರೆ.

ಬುದ್ಧಿ ಮಾತುಗಳು : ಹುಡುಗಿಯನ್ನು ಕುಲದ ಹಿರಿಯರ ಕೈಯಲ್ಲಿ ಕೊಟ್ಟ ಮೇಲೆ, ಹಿರಿಯರು ಹುಡುಗನ ಕಡೆಯವರಿಗೆ ಬುದ್ಧಿ ಮಾತುಗಳನ್ನು ಹೇಳುತ್ತಾರೆ. ಕೊಟ್ಟ ಹುಡುಗಿಗೆ ತಲೆಗೆ ಎಣ್ಣೆ, ಮೈಗೆ ಬಟ್ಟೆ, ಹೊಟ್ಟೆಗೆ ತಿಂಡಿ ಕಡಿಮೆ ಮಾಡಬಾರದು. ಹುಡುಗಿ ಸಣ್ಣಪುಟ್ಟ ತಪ್ಪು ಮಾಡಿದರೆ, ಹೊಟ್ಟೆಯಲ್ಲಿ ಹಾಕಿಕೊಂಡು ಮಗ ತಪ್ಪು ಮಾಡಿದರೆ ಮಗನಿಗೆ ಬುದ್ಧಿ ಹೇಳಬೇಕು. ಹುಡುಗಿಯ ಅತ್ತೆಯನ್ನು ಉದ್ದೇಶಿಸಿ ಹಾಲಿನ ಸೋರೆ ಒಡೆಯದಂತೆ ನೋಡಿ ಕೊಳ್ಳಬೇಕು. ಬುದ್ಧಿಹೇಳಿ ಸರಿಪಡಿಸಿಕೊಳ್ಳಬೇಕು. ಹುಡುಗಿ ಎಷ್ಟು ಹೇಳಿದರೂ ಕೇಳದಿದ್ದರೆ ಕುಲಕ್ಕೆ ಹೇಳಿ ಮುಖಕ್ಕೆ ಹೊಡೆಸಬೇಕು. ಮಾವ ತನ್ನ ಬಸ್ತಿಯಲ್ಲಿ ಅತ್ತೆ ತನ್ನ ಹದ್ದಿನಲ್ಲಿ ಇರಬೇಕು. ಆಮೇಲೆ ಮದುವೆಯ ಗಂಡು ಮಾವನಿಗೆ ಕೆಲಸದಲ್ಲಿ ಯಾವ ರೀತಿ ಸಹಾಯ ಮಾಡಬೇಕು ಎಂದು ಹೇಳುತ್ತಾರೆ.

ಕೈ ಸಾಕ್ಷಿ : ಕುಲದ ಹಿರಿಯ ಇಬ್ಬರಿಗೂ ಬುದ್ಧಿಮಾತು ಹೇಳಿದ ಬಳಿಕ ಹುಡುಗನ ತಂದೆ ಎದ್ದುನಿಂತು ತಮ್ಮ ಐದು ಮಂದಿ ಬೆಡಗಿನವರ ಕೈಯಲ್ಲಿ ಕೈಹಾಕಿ ಒಬ್ಬೊಬ್ಬರ ಹತ್ತಿರ ಸಾಕ್ಷಿ ಇಡುತ್ತಾರೆ. ಇದನ್ನೇ ಕೈಸಾಕ್ಷಿ ಎಂದು ಕರೆಯುತ್ತಾರೆ. ಕೈಸಾಕ್ಷಿ ಆದ ಮೇಲೆ ಕುಲಾಚಾರಕ್ಕೆ ವರನ ತಂದೆ ಐವತ್ತು ರೂಪಾಯಿ ಕೊಟ್ಟರೆ, ವಧುವಿನ ತಂದೆ ಇಪ್ಪತ್ತೈದು ರೂಪಾಯಿ ಕೊಡುತ್ತಾನೆ.

**ಹೆಂಡ ಹಾಕಿಸುವುದು :** ಕೈ ಸಾಕ್ಷಿ ಮುಗಿದ ಮೇಲೆ ಅಂದು ಸಾಯಂಕಾಲ ವಧುವಿನ ಸಂಬಂಧಿಕರಿಗೆಲ್ಲರಿಗೂ ಅವರು ಕೇಳಿದ ಊಟ ಹಾಕಿಸಿ, ಕೇಳಿದಷ್ಟು ಕುಡಿಯಲು ಕೊಡಬೇಕು. ಇಲ್ಲವೆಂದರೆ ಅವರನ್ನು ತಪ್ಪಿನಲ್ಲಿಡುತ್ತಾರೆ. ಅಷ್ಟರಲ್ಲಿ ಊರಾಡಲು ಹೋದ ವಧು ಬರುತ್ತಾಳೆ. ಅವಳಿಗೂ ಸಹ ಹೊಟ್ಟೆ ತುಂಬ ಊಟ ಮಾಡಿಸುತ್ತಾರೆ.

ಒಂದು ವೇಳೆ ಆ ಹುಡುಗಿಯನ್ನು ಮದುವೆ ಮಾಡಿಕೊಳ್ಳುವುದು ಇಷ್ಟವಿಲ್ಲದಿದ್ದರೆ ಈ ಹುಡುಗಿಯನ್ನು ಇಂತಹ ಸಮಸ್ಯೆಯಿಂದ ಮಾಡಿಕೊಳ್ಳುವುದಿಲ್ಲ ಎಂದು ಹೇಳಿ ಕುಲಾಚಾರದ ಪ್ರಕಾರ ಒಂದು ಕಡ್ಡಿಯನ್ನು ಮುರಿದು ಹಾಕಬೇಕು. ಇದನ್ನು ಸಂಬಂಧ ಕಡಿದು ಕೊಳ್ಳುವುದು (ಪುಲ್ಲವಿರುಪು) ಎಂದು ಕರೆಯುತ್ತಾರೆ. ವರನ ಪಕ್ಷದವರು ವಧುವಿನ ಸಂಬಂಧ ಕಡಿದುಕೊಂಡರೆ, ನಿಶ್ಚಿತಾರ್ಥದ ದಿನ ಆದ ಖರ್ಚು ಕೊಡಬೇಕು. ವಧುವಿನ ಪಕ್ಷದವರಿಗೆ ವಧುವಿನ ನಡತೆಗಳು ಮೆಚ್ಚದಿದ್ದರೆ ವರನ ಕಡೆಯವರು ಏನು ಕೊಡುವ ಹಾಗಿಲ್ಲ. ಹೀಗೆ ಸಂಬಂಧ ಮುರಿದುಕೊಳ್ಳುತ್ತಾರೆ.

### ವಿವಾಹ ಕಾರ್ಯಕ್ರಮಗಳು

ಇವರು ಮದುವೆಗೆ ಒಳ್ಳೆಯ ಕೆಟ್ಟದಿನಗಳನ್ನು ನೋಡುವುದಿಲ್ಲ. ಸಾಮಾನ್ಯವಾಗಿ ವಧುವಿನ ಮನೆಯ ಮುಂದೆಯೇ ವರನು ಬಂದು ಬಿಡಾರ ಹಾಕಿಕೊಂಡು ಮದುವೆ ನಡೆ ಸುತ್ತಾರೆ. ಈ ಸಮುದಾಯದವರು ಬಾಲ್ಯ ವಿವಾಹಗಳನ್ನೇ ಹೆಚ್ಚಾಗಿ ಮಾಡುತ್ತಾರೆ. ಒಂದೇ ಬೆಡಗಿನವರೊಂದಿಗೆ ವಿವಾಹ ಸಂಬಂಧ ನಿಷೇಧಿಸುವ ಭಿನ್ನಬೆಡಗಿನ ವಿವಾಹ ಪ್ರಗತಿಯನ್ನು ಅನುಸರಿಸುತ್ತಾರೆ. ಭಾರತದಲ್ಲಿ ಭಿನ್ನ ಬೆಡಗು ವಿವಾಹ ಸಂಬಂಧಗಳನ್ನು ರಕ್ತ ಸಂಬಂಧ ದೇವತೆ, ಪ್ರಾದೇಶಿಕ ಗುಂಪು ಮತ್ತು ಗೋತ್ರ ಎಂಬ ಪದಗಳಿಂದ ವಿವರಿಸಲಾಗಿದೆ.

ಚಾಪೆಯ ಮೇಲೆ ಮಾತು ಮದುವೆಗೆ ಒಂದು ದಿನ ಮುಂಚೆ ಬಿಡಾರದ ಮುಂದೆ ಮೂರು ಕಟ್ಟಿಗೆಗಳನ್ನು ಹೂಳಿ ಅದರ ಮೇಲೆ ಒಂದು ಚಾಪೆಯನ್ನು ಹೊದಿಸುತ್ತಾರೆ. ಅದನ್ನು ತಿಕ್ಕಟ್ಟೆ ಎಂದು ಕರೆಯುತ್ತಾರೆ. ಮದುವೆಯ ದಿನ ಮುಂಜಾನೆ ವಧುವಿನ ಮನೆಯ ಮುಂದೆ ಮುತ್ತೈದೆ ಯರು ಅಥವಾ ವರನ ತಂದೆ ಈಚಲು ಚಾಪೆಯನ್ನು ಹಾಸುತ್ತಾನೆ. ಮುಂದೆ ಯಾವುದೇ ತೊಂದರೆ ಬರಬಾರದೆಂದು ಹಿರಿಯರೆಲ್ಲರೂ ಕುಳಿತು ಮಾತನಾಡಿದ ಮಾತುಗಳೇ ಸದಾ ಇರುತ್ತವೆಂದು ನಂಬಿರುತ್ತಾರೆ. ಈ ಚಾಪೆಯ ಮೇಲೆ ಕೆಲವು ನಿರ್ಣಯಗಳನ್ನು ತೆಗೆದು ಕೊಳ್ಳುತ್ತಾರೆ.

ವಧುವಿನ ತಂದೆ ಕೆಲವು ಬೇಡಿಕೆಗಳನ್ನು ಮುಂದಿಡುತ್ತಾನೆ. ತನ್ನ ಮಗಳನ್ನು ಮದುವೆಯಾದ ಮೇಲೆ ಎರಡು ಮಕ್ಕಳಾಗುವವರೆಗೆ ನನ್ನ ಸೇವೆ ಮಾಡುತ್ತ ಇರಬೇಕೆಂದು ಬೇಡಿಕೆಯನ್ನು ಇಡುತ್ತಾನೆ. ಬುದ್ಧಿವಂತರಾದವರು ನಾವು ನಿಮ್ಮ ಮಗಳನ್ನು ಸರಿಯಾಗಿ ನೋಡಿಕೊಳ್ಳುತ್ತೇವೆಯೋ, ಇಲ್ಲವೋ ಒಬ್ಬ ಮಧ್ಯವರ್ತಿಯನ್ನು ನಿಯಮಿಸು ಗೊತ್ತಾಗುತ್ತದೆ ಎಂದು ಮರು ಸವಾಲು ಹಾಕುತ್ತಾನೆ. (ಮಧ್ಯವರ್ತಿ ಎಂದರೆ ಒಬ್ಬ ಮನುಷ್ಯ ಇವರ ಕುಟುಂಬ ಅಡ್ಡಾಡಿದಂತೆಲ್ಲ ಅವರ ತಪ್ಪು ಒಪ್ಪುಗಳನ್ನು ಪರೀಕ್ಷಿಸುತ್ತಿರುತ್ತಾನೆ. ಇಂತಹವರ ಖರ್ಚು ಕುಟುಂಬದವ

ರಾಗಿರುತ್ತದೆ). ಹಾಗೂ ಹೀಗೂ ಮಾತನಾಡಿ ಒಂದು ಮಗುವಾಗುವವರೆಗೂ ಅಥವಾ ಒಂದು ವರ್ಷಕ್ಕೂ ಒಪ್ಪಿಸುತ್ತಾನೆ. ಮನೆದೇವರು ಸುಂಕ್ಲಮ್ಮ ಆದರೆ ಒಂದು ಬೇಟೆ, ಜಂಬಲಮ್ಮ ಆದರೆ ಎರಡು ಬೇಟೆ ಮಾಡಿಸಿ ಪೂಜೆ ಸಲ್ಲಿಸುವ ಕ್ರಮ ಇದೆ.

ಮನೆದೇವರ ಪೂಜೆ ಜಂಬಲಮ್ಮಳ ಪೂಜೆಯಾದರೆ, ಜಂಬೆಯ (ಬನ್ನಿ) ಗಿಡದ ಸುತ್ತ ನಾಲ್ಕು ಕಟ್ಟಿಗೆ ಹೂಳಿ ಅದರ ಮೇಲೆ ಐದು ರೀತಿಯ ತಳಿರು ಕಟ್ಟುತ್ತಾರೆ. ಸ್ತಂಬಗಳಿಗೆ ಸುಣ್ಣ, ಕೆಮ್ಮಣ್ಣು ಹಚ್ಚಿ, ಮಾವಿನ ಎಲೆ ಬಾಳೆಯ ದಿಂಡುಗಳಿಂದ ಅಲಂಕರಿಸಿ ಹುತ್ತದಿಂದ ಮಣ್ಣು ತಂದು ಅದರಿಂದ ದೇವರನ್ನು ಮಾಡಿ ಆ ಗಿಡದ ಪಕ್ಕದಲ್ಲಿ ಕೂಡಿಸುವರು ಗೋಧಿ ಹಿಟ್ಟಿನಿಂದ ಗುಂಡಾದೀಪ ಮಾಡಿ ಆ ಬೊಂಬೆಗೆ ಪೂಜೆ ಸಲ್ಲಿಸಿ ಅದರ ಮುಂದೆ ಬೇಟೆ ಕಡಿಯುತ್ತಾರೆ. ತಲೆ ಕಡಿದ ತಕ್ಷಣ ಮುಂದಿನ ಒಂದು ಕಾಲನ್ನು ಕಡಿದು ಬಾಯಿಯಲ್ಲಿ ಇಟ್ಟು ಪೂಜಿಸಿದ ಬೊಂಬೆಯ ಎದುರಿಗೆ ಇರಿಸುತ್ತಾರೆ. ಈ ಪೂಜೆಯನ್ನು ಬೆಳಕಾಗುವದ ರೊಳಗಾಗಿ ಮಾಡುತ್ತಾರೆ.

ಸುಂಕ್ಲಮ್ಮಳ ಪೂಜೆಯಾದರೆ ಬೇವಿನ ಮರಕ್ಕೆ ಮೇಲಿನಂತೆ ಅಲಂಕರಿಸಿ ಅದರಲ್ಲಿ ಮಣ್ಣಿನ ಮಗಿಯಲ್ಲಿ ಹೆಂಡ ಅಥವಾ ಬೆಲ್ಲದ ನೀರು ತುಂಬಿಡುತ್ತಾರೆ. ಅದರ ಮೇಲೆ ಸುಲಿಯಲಾರದ ತೆಂಗಿನ ಕಾಯಿ ಇಟ್ಟು ಮೇಲೆ ಕುಪ್ಪಸದ ಕಣ ಏರಿಸುತ್ತಾರೆ. ಇನ್ನು ಪೂಜೆ ಎಲ್ಲಾ ಮೇಲಿನಂತೆಯೇ ಸಲ್ಲುತ್ತದೆ. ಇದನ್ನು ಮನೆದೇವರ ಪೂಜೆಯೆಂದು ಕರೆಯುತ್ತಾರೆ.

ಹಂದರ ಹಾಕುವದು: ಬಂಧು ಬಾಂಧವರೊಡಗೂಡಿ ತಮ್ಮ ದಿನ ನಿತ್ಯದ ಸಂಗೀತ ವಾದ್ಯಗಳೊಂದಿಗೆ ಮುತ್ತೈದೆಯರೊಡಗೂಡಿ ಹುತ್ತಿಗೆ ಹೋಗಿ ಐದು ಬೊಗಸೆ ಹುತ್ತದ ಮಣ್ಣು ತಂದು ಹಂದರದ ಸ್ಥಳದ ತಗ್ಗಿನಲ್ಲಿ ಹಾಕಿ ಹೂಳುತ್ತಾರೆ. ನಂತರ ಅದಕ್ಕೆ ಸುಣ್ಣ, ಕೆಮ್ಮಣ್ಣು ಹಚ್ಚಿ, ವಿವಿಧ ಬಗೆಯ ತಳಿರುಗಳಿಂದ ತೋರಣ ಕಟ್ಟುವದರ ಮದುವೆಯ ಕಾರ್ಯಕ್ರಮ ಪ್ರಾರಂಭಿಸುತ್ತಾರೆ.

ಓಲಿಕೊಡುವುದು : ಚಾಪೆಯ ಮೇಲೆ ಮಾತು ಮುಗಿದ ಬಳಿಕ ವರನ ತಂದೆ-ತಾಯಿಗಳು ತಾಳ ಮೇಳಗಳೊಂದಿಗೆ ವಧುವಿನ ಗುಡಾರ ಬಳಿಗೆ ಹೋಗಿ ಎಲೆ ಅಡಿಕೆ ಅದರಲ್ಲಿ ಒಂಬತ್ತು ರೂಪಾಯಿ ವಧುವಿನ ತಾಯಿಗೆ ಕುಂಕುಮ ಹಚ್ಚಿ ಕೊಡುತ್ತಾರೆ. ಅವಳು ನಾನು ಒಂಬತ್ತು ತಿಂಗಳು ಹೊತ್ತು ಸಂಬಾಳಿಸಿದಕ್ಕೆ ಒಂಬತ್ತು ಸಾವಿರ ರೂಪಾಯಿ ಕೊಟ್ಟಿದ್ದಾರೆ ಎನ್ನುತ್ತಾಳೆ. ಮುತ್ತೈದೆ ಎನಿಸಿಕೊಂಡವಳು ಮದುವೆಯಲ್ಲಿ ಪ್ರಮುಖ ಪಾತ್ರವಹಿಸುತ್ತಾಳೆ. ಹದಿನಾರು ದಿನಗಳ ಕಾಲ ಮದುವೆ ಶಾಸ್ತ್ರ ನೆರವೇರಿಸಿಕೊಂಡವಳು ದೊಡ್ಡ ಮುತ್ತೈದೆ ಎನಿಸಿಕೊಳ್ಳುತ್ತಾಳೆ. ಇಂತಹವರು ಮದುವೆಯ ಕಾರ್ಯಗಳಿಗೆ ಸಲಹೆ ನೀಡಲು ಅರ್ಹರೆಂದು ಪ್ರತೀತ ಇದೆ. ಕೆಲವು ಕಡೆ ಮದುವೆ ಯಾಗದ ಹುಡುಗರಿಗೆ ಕಂಕಣ ಕಟ್ಟಿ ಕಳಸ ಹಿಡಿಯುವ ಇನ್ನು ಮುಂತಾದ ಕಾರ್ಯಗಳಿಗೆ ಮುಂದಾಳತ್ವಕ್ಕೆ ಬಿಡುವ ಪ್ರತೀತಿ ಇದೆ. ಮದುವೆಗೆ ಯಾರೇ ಬರಲಿ ಬಂದವರಿಗೆ ರೈಲು, ಬಸ್ಸು ಚಾರ್ಜಕೊಟ್ಟು ಕಳುಹಿಸಿ ಕೊಡಬೇಕು.

ಕುಲಾಚಾರ ಪೂರ್ವದಲ್ಲಿ ಮದುವೆಗೆ ಅಡುಗೆ ಮಾಡಿಸುವ ಪದ್ಧತಿ ಇದ್ದಿಲ್ಲ. ತಮ್ಮ

ಬಿಡಾರದ ಸುತ್ತ ಮುತ್ತ ಎಷ್ಟು ಕುಲಸ್ಥ ಕುಟುಂಬಗಳಿವೆಯೋ ಲೆಕ್ಕ ಹಾಕಿಕೊಂಡು ಕುಲದ ಹಿರಿಯ ವರನ ತಂದೆಯಿಂದ ಅಕ್ಕಿ, ಬೇಳೆ, ಹೆಂಡಕ್ಕೆ ಎಷ್ಟು ಬೇಕೋ ಅಷ್ಟು ಹಣ ಪಡೆದು ಎಲ್ಲರಿಗೂ ಸಮಾನವಾಗಿ ಹಂಚುತ್ತಾರೆ. ಇದನ್ನು ಕುಲಾಚಾರ ಎಂದು ಕರೆಯುತ್ತಾರೆ.

ಇತ್ತೀಚೆಗೆ ಅಡುಗೆ ಮಾಡಿಸುವ ಪರಿಪಾಟ ಪ್ರಾರಂಭವಾಗಿದೆ. ಮುತ್ತೈದೆಯರೊಂದಿಗೆ ಒಲೆಗಳನ್ನು ಹಾಕಿಸಿ, ಒಲೆಯ ಹಿಂದೆ ಗಣಪನ ಮೂರ್ತಿಯನ್ನು ಮಾಡಿ ಪೂಜಿಸಿ ಅಡುಗೆ ತಯಾರಿಸಿ ಮೊದಲ ಎಡೆ ಗಣಪನಿಗೆ ಹಾಕುತ್ತಾರೆ. ಏನಾದರೂ ವಿಘ್ನಗಳು ಬಂದರೆ ಗಣಪನೆ ಪರಿಹರಿಸುವನು ಎಂದು ನಂಬಿದ್ದಾರೆ.

**ಬಳೆ ಹಾಕಿಸುವುದು :** ವಧು-ವಧುವಿನ ಕಡೆಯವರು ಒಂದಿಬ್ಬರು, ವರ-ವರನ ಕಡೆಯವರು ಒಂದಿಬ್ಬರು, ಮುತ್ತೈದೆಯರೊಡಗೂಡಿ ಬಳೆ ಹಾಕಿಸಲು ಪಕ್ಕದ ಬಳೆ ಅಂಗಡಿ ಇರುವ ಊರುಗಳಿಗೆ ಹೋಗುತ್ತಾರೆ. ಹಾಗೆ ಹೋಗುವಾಗ ವಧುವಿಗೆ ಕಂಬಳಿ ಇಲ್ಲವೇ ರಗ್ಗು ಹೊದಿಸಿಕೊಂಡು ಹೋಗುತ್ತಾರೆ. ಬಳೆ ಹಾಕಿಸಿಕೊಂಡು ನಂತರ ಎಲ್ಲರು ಸರಾಯಿ ಅಥವಾ ಹೆಂಡದ ಅಂಗಡಿಗೆ ಹೋಗಿ ವಧುವಿಗೆ ಕುಡಿಸಿ ತಾವು ಕುಡಿದು ಬರುತ್ತಾರೆ. ಹೀಗೆ ಅಡ್ಡಾಡಿ ಬರುವಷ್ಟರೊಳಗಾಗಿ ಸಾಯಂಕಾಲವಾಗಿರುತ್ತದೆ. ಅಷ್ಟರೊಳಗಾಗಿ ಕುಲಬಾಂದವ ರೆಲ್ಲ ಕೂಡಿ ಊಟ ಮಾಡಿ ಕುಡಿದು ಕುಳಿತಿರುತ್ತಾರೆ. ಅಲ್ಲಿಂದ ತಾಳಿಯ ಕಾರ್ಯಕ್ರಮ ಪ್ರಾರಂಭವಾಗುತ್ತವೆ.

**ಎಲೆ ಶಾಸ್ತ್ರ :** ಐದು ಎಲೆಗಳು ಮತ್ತು ಅಡಿಕೆ ತೆಗೆದುಕೊಂಡು ವಧು-ವರರ ಕೈಯಲ್ಲಿ ವಿನಿಮಯ ಮಾಡಿಸಿ ಅವುಗಳನ್ನು ಮೊದಲು ದೈವ, ಗುರು, ತಂದೆ-ತಾಯಿಯವರಿಗೆ ತಾಂಬೂಲ ನೀಡಿ ತಾಂಬೂಲ ನೀಡಿ ನಂತರ ತಾಳಿ ಕಾರ್ಯಕ್ರಮಕ್ಕೆ ಅಣಿಯಾಗುವರು.

**ತಾಳಿಯ ಕಾರ್ಯಕ್ರಮ :** ಬಳೆಯ ಕಾರ್ಯಕ್ರಮ ಮುಗಿದ ಬಳಿಕ ವಧುವಿನ ಮನೆಯ ಮುಂದೆ ಹೆಣ್ಣಿಗೆ, ಗಂಡಿನ ಮನೆಯ ಮುಂದೆ ಗಂಡಿಗೆ ಬಿಡಾರದ ಮುಂದೆ ಒನಕೆ ಇಟ್ಟು ಅದರ ಮೇಲೆ ಅವರನ್ನು ಕೂಡಿಸಿ ಮೈಗೆ ಎಣ್ಣೆ, ಅರಿಶಿಣ ಕೂಡಿಸಿ ಹಚ್ಚಿ, ಮುತ್ತೈದೆಯ ರೊಂದಿಗೆ ಸ್ನಾನ ಮಾಡಿಸುತ್ತಾರೆ. ತೊಟ್ಟು ಕೊಳ್ಳಲು ಹೊಸ ಬಟ್ಟೆ ಕೊಡುವರು. ಕೆಲವರು ಊರಲ್ಲಿ ಪಡೆದು ಅದರಲ್ಲಿ ಒಳ್ಳೆಯವನ್ನು ತೆಗೆದು ಇರಿಸಿಕೊಂಡಿರುತ್ತಾರೆ. ಅವುಗಳನ್ನು ಈ ಸಮಯದಲ್ಲಿ ಬಳಸುತ್ತಾರೆ. ಗಂಡಿನ ಕೈಯಲ್ಲಿ ಕೊಡುತ್ತಾರೆ.

ಸಿಂಗರಿಸಿಕೊಂಡ ವಧುವನ್ನು ವಧು ವರರನ್ನು ಬಚ್ಚಿಡುತ್ತಾರೆ. ಇಲ್ಲಿ ಕಂಬಳಿ ಹಾಸಿ ಅದರ ಮೇಲೆ ಅಕ್ಕಿಯಿಂದ ರಾಮನ ತೊಟ್ಟಿಲು ಬರೆದು ಆ ಕಡೆ ಈ ಕಡೆ ಸೂರ್ಯ, ಚಂದ್ರರನ್ನು ಬರೆದು ಸಜ್ಜುಗೊಳಿಸಿರುತ್ತಾರೆ. ಬಚ್ಚಿಟ್ಟುಕೊಂಡ ವಧು ಎಡಗಡೆಯಿಂದ ಪ್ರದಕ್ಷಿಣೆ ಹಾಕಿ. ವರರನ್ನು ಎಡಗಡೆಯಿಂದ ಪ್ರದಕ್ಷಿಣೆ ಹಾಕಿ ಅವರವರ ಸೋದರ ಮಾವಂದಿರು ಹೊತ್ತುಕೊಂಡು ದಿಬ್ಬಣದಲ್ಲಿ ಇಳಿಸಿ ಪೂರ್ವಾಭಿಮುಖವಾಗಿ ಕೂಡಿಸುವರು. ಸಾಸಿವೆ ಕಟ್ಟೆಯ ಮೇಲೆ ಗಂಡಿನವರು ತಾಳಿ, ಬೆಳ್ಳಿಯ ಕಡಗ, ಕಾಲುಂಗರ ಮತ್ತು ಕಂಚು ಮಿಶ್ರಮಾಡಿದ ಅಕ್ಷತೆ ಜೋಡಿ ತಾಳಿ (ಅದರಲ್ಲಿ ಒಂದು ತಾಳಿ ಖರ್ಚನ್ನು ಹೆಣ್ಣಿನವರು ಕೊಟ್ಟಿರುತ್ತಾರೆ). ತಂದು ಇಟ್ಟಿರುತ್ತಾರೆ.

ಕುಲದ ಹಿರಿಯ ಪೌರತ್ಯ ತಾರಾಬಲಂ ಚಂದ್ರಾ ಬಲಂ ದೀರ್ಘಮಾಯಾ ಎಂದು ಉಚ್ಚರಿಸುತ್ತಾ ಹಣ್ಣು, ಕಾಯಿ, ಪತ್ರಿ, ಎಲೆ-ಅಡಿಕೆ ಎಲ್ಲಾ ಮುಟ್ಟಿ, ಕುಂಕುಮ ಕಲಿಸಿದ ಅಕ್ಕಿ ಎಲ್ಲರ ಕೈಯಲ್ಲಿ ಹಂಚಲು ಹೇಳುತ್ತಾನೆ. ಕೊಬ್ಬರಿ ಬಟ್ಟಲಿನಲ್ಲಿ ಹಾಲು ಬೆಲ್ಲ ಕೂಡಿಸಿ ಕುಡಿಸುತ್ತಾನೆ. ಆ ಕೊಬ್ಬರಿ ಬಟ್ಟಲನ್ನು ವಧುವಿನ ಅಣ್ಣನಿಗೆ ಕೊಡುತ್ತಾರೆ. ನಂತರ ವಧುವಿನ ತಂದೆಯಿಂದ ಕನ್ಯಾಧಾನ ಮಾಡಿದೆ ಅನ್ನಿಸುತ್ತಾರೆ. ವರನ ತಂದೆಯಿಂದ ಕನ್ಯಾಧಾನ ತೆಗೆದು ಕೊಂಡೆ ಅನ್ನಿಸುತ್ತಾರೆ. ಅನ್ನಿಸಿ ವಧುವಿನ ಕಾಲಿಗೆ ಕಾಲುಂಗರ ಇಡಿಸಿ ಮಂಗಳ ಸೂತ್ರ ಕಟ್ಟಿಸುತ್ತಾನೆ. ವಧುವರರು ಪರಸ್ಪರ ಒಬ್ಬರಿಗೊಬ್ಬರು ಹೂ ಮಾಲೆ ಬದಲಿಸಿಕೊಂಡ ತಕ್ಷಣ ಎಲ್ಲರೂ ಅಕ್ಷತೆ ಹಾಕುವರು. ನಂತರ ಮಧುಮಗನ ದೋತುರವನ್ನು ಮಧುಮಗಳ ಸೀರೆಗೆ ಗಂಟು ಹಾಕುತ್ತಾರೆ ಅದನ್ನು ಬ್ರಹ್ಮಗಂಟು ಎಂದು ಕರೆಯುತ್ತಾರೆ.

ತಾಳಿಕಟ್ಟುವ ಕಾರ್ಯಕ್ರಮ ಮುಗಿದ ತಕ್ಷಣ ಮಧುಮಕ್ಕಳನ್ನು ಬಿಡಾರಕ್ಕೆ ಕರೆದುಕೊಂಡು ಹೋಗುತ್ತಾರೆ. ಬಿಡಾರದೊಳಕ್ಕೆ ಹೋಗುವ ಮೊದಲು ದೃಷ್ಟಿ ತೆಗೆದು ಓಕುಳಿ ನೀರನ್ನು ಆ ಕಡೆ ಈ ಕಡೆ ಚೆಲ್ಲುತ್ತಾರೆ. ಮಧುಮಗ ಬಲಗಾಲು, ಮಧುವಣಗಿತ್ತಿ ಎಡಗಾಲು ಮುಂದಿಟ್ಟು ಪ್ರವೇಶಿಸುತ್ತಾರೆ. ಒಳಗಡೆ ಉತ್ತಾರಾಭಿಮುಖವಾಗಿ ಕೂಡಿಸಿ ಸಾಸಿವೆ ಇಟ್ಟು ಅಕ್ಷತೆ ಹಾಕಿ, ಆರತಿ ಮಾಡುವರು. ಊಟಕ್ಕೆ ಕೆಲವರು ಹುಗ್ಗಿ, ಅನ್ನಸಾರು ಮಾಡಿದರೆ ಸಾಮಾನ್ಯವಾಗಿ ಅನ್ನ ಸಾರು ಮಾಡಿಸುವರು. ಆಗಿನ ಊಟದ ಖರ್ಚು ಹೆಣ್ಣಿನವರದಾಗಿರುತ್ತಿತ್ತು.

ಎರಡನೇ ದಿನದ ಕಾರ್ಯಕ್ರಮ : ಈ ದಿನ ವಧುವನ್ನು ಮನೆ ತುಂಬಿಸಿಕೊಳ್ಳುವ ಕಾರ್ಯ ಕ್ರಮವಿರುತ್ತದೆ. ಬೆಳಿಗ್ಗೆ ಫಲಹಾರ ಮುಗಿಸಿಕೊಂಡು ತಮ್ಮ ಸಂಪ್ರದಾಯಿಕ ವಾದ್ಯಗಳೊಂದಿಗೆ ಹಾಡುಗಳನ್ನು ಹಾಡುತ್ತಾ ಬಿಡಾರದ ಮುಂದೆ ಎಲ್ಲರೊಂದಿಗೆ ಒನಕೆಯ ಮೇಲೆ ಮಧು-ಮಕ್ಕಳನ್ನು ಕೂಡಿಸಿ ಮೈಗೆ ಎಣ್ಣೆ ಅರಿಶಿಣ ಕೂಡಿಸಿ ಹಚ್ಚಿ ನೀರು ಹಾಕಿ ಮುತ್ತೈದೆಯರು ಸ್ನಾನ ಮಾಡಿಸಿ ಹೊಸ ಬಟ್ಟೆ ತೊಡಿಸುತ್ತಾರೆ. ಬಳಿಕ ಬಿಡಾರದದೊಳಗೆ ಕರೆದುಕೊಂಡು ಹೋಗಿ ಚಾಪೆಯ ಮೇಲೆ ಕೂಡಿಸಿ ವಿಭೂತಿ, ಕುಂಕುಮ ಹಚ್ಚಿ ಐದು ಹಿಡಿ ಅಕ್ಕಿ, ಎರಡು ಎಲೆ, ಎರಡು ಅಡಿಕೆ, ಕಲ್ಲು ಸಕ್ಕರೆ, ಉತ್ತುತ್ತಿಗಳಿಂದ ಉಡಿ ತುಂಬುತ್ತಾರೆ. ತಮ್ಮ ಸಾಂಪ್ರದಾಯಿಕ ವಾದ್ಯಗಳೊಂದಿಗೆ ಗಂಡಿನ ಗುಡಾರಕ್ಕೆ ಹೋಗುವರು. ಆ ಸಮಯದಲ್ಲಿ ಮಧುಮಕ್ಕಳ ಮೇಲೆ ಬಿಸಿಲಿನ ಜಳ ಬೀಳಬಾರದೆಂದು ಒಂದು ವಸ್ತ್ರ ಅಥವಾ ಛತ್ರಿಯಿಂದ ನೆರಳು ಹಿಡಿದುಕೊಂಡು ಹೋಗುತ್ತಾರೆ.

ಕಲಿಕುಂಡ : ಮಧುಮಕ್ಕಳು ಗಂಡಿನ ಬಿಡಾರಕ್ಕೆ ಬರುವಷ್ಟರೊಳಗಾಗಿ ಬಿಡಾರದ ಮುಂದಿನ ಬಲಗಂಬದ ಹತ್ತಿರ ಸಗಣಿಯಿಂದ ಸಾರಿಸಿ ಅಲ್ಲಿ ಒಂದು ಗಡಿಗೆಯನ್ನು ಇಟ್ಟು ಅದರಲ್ಲಿ ಅಕ್ಕಿ ತೊಳೆದ ನೀರು, ಅನ್ನದ ಗಂಜಿ ಹಾಕಿರುತ್ತಾರೆ. ಪೂರ್ವದಲ್ಲಿ ಆ ಗಡಿಗೆಯಲ್ಲಿ ಈಚಲ ಹೆಂಡ ಹಾಕುತ್ತಿದ್ದರಂತೆ ಈಗ ಸಿಗದೆ ಇರುವುದರಿಂದ ಆ ಸಂಪ್ರದಾಯ ಹೀಗೆ ಬದಲಾಗಿದೆ. ಹೀಗೆ ತುಂಬಿದ ಗಡಿಗೆಗೆ ಪೂಜೆ ಸಲ್ಲಿಸಿ ಅದರಲ್ಲಿ ಬಂಗಾರ, ಬೆಳ್ಳಿ, ರಾಗಿಯ ಆಭರಣಗಳನ್ನು ಹಾಕಿ ಮಧುಮಕ್ಕಳನ್ನು ಹುಡುಕಲು ಬಿಡುವರು. ಆ ಮಧುಮಕ್ಕಳು ಕೈಹಾಕಿ ಹುಡಿಕಿ ಕೈಗೆ

ಬರುತ್ತದೆಯೋ ಅದನ್ನು ತೋರಿಸುವರು. ಇಬ್ಬರಿಗೂ ಬಂಗಾರದ ಆಭರಣ ಸಿಕ್ಕರೆ ಒಳ್ಳೆಯದು. ಗಂಡಿಗೆ ಬಂಗಾರದ್ದು, ಹೆಣ್ಣಿಗೆ ಬೆಳ್ಳಿಯದು ಸಿಕ್ಕರೆ ಒಳ್ಳೆಯದು. ಗಂಡಿಗೆ ಸಿಕ್ಕು ಹೆಣ್ಣಿಗೆ ಸಿಗದಿದ್ದರೂ ಒಳ್ಳೆಯದು. ಆದರೆ ಹೆಣ್ಣಿಗೆ ಸಿಕ್ಕು ಗಂಡಿಗೆ ಸಿಗದಿದ್ದರೆ ಮತ್ತು ಇಬ್ಬರಿಗೂ ಸಿಗದಿದ್ದರೂ ಕೆಟ್ಟದು. ಇದನ್ನು ಕಲಿಕುಂಡ ಎಂದು ಕರೆಯುತ್ತಾರೆ.

ವಡಿಬಾಲು (ಅನ್ನ ಪರೀಕ್ಷೆ) : ತವರು ಮನೆಯಿಂದ ತಂದ ಉಡಿ ಅಕ್ಕಿಯನ್ನು ಸೇರಿಸಿ ಅನ್ನ ಮಾಡುತ್ತಾರೆ. ಅದರಲ್ಲಿ ಸಾಂಬಾರು, ಪಲ್ಯ ಬದನೆಕಾಯಿ ಮಾಡಿ ಕುಲಿಕುಂಡದ ಮುಂದೆ ಮೂರು ಎಡೆ ಹಾಕುವರು. ಒಂದು ಮಧು ಮಕ್ಕಳಿಗೆ, ಒಂದು ಮುತ್ತೈದೆಯರಿಗೆ ಮತ್ತೆ ಮಕ್ಕಳಿಗೆ ಊಟ ಮಾಡಿಸುವರು. ಇದನ್ನು ಅನ್ನ ಪರೀಕ್ಷೆ ಎಂದು ಕರೆಯುತ್ತಾರೆ. ಅಥವಾ ಉಡಿಅಕ್ಕಿ ಊಟ ಎಂದು ಕರೆಯುತ್ತಾರೆ.

ಈ ದಿನದ ಊಟಕ್ಕೆ ಗಂಡಿನವರಿಗೆ ಏನು ಕೇಳಿದರೂ ಕೊಡಬೇಕು. ಅಂದು ಬೇಟೆಗೆ ಹೋಗಿ ಮುಂಗುಸಿ, ಉಡ, ಮೀನು, ನರಿ ಯಾವ ಪ್ರಾಣಿ ಸಿಕ್ಕರೂ ತಂದು ಅಡುಗೆ ಮಾಡಿ ಬಡಿಸಿ ಸಾಕಾಗುವಷ್ಟು ಕುಡಿಸಿ ಅವರನ್ನು ತೃಪ್ತಿಪಡಿಸಬೇಕು. ಇದನ್ನು ಚುಟ್ಟಾಲ ಬಂತಿ ಎಂದು ಕರೆಯುತ್ತಾರೆ.

ಮೂರನೇ ದಿನದ ಕಾರ್ಯಕ್ರಮ : ಹಿಂದಿನ ದಿನ ಚೆನ್ನಾಗಿ ತಿಂದು ಕುಡಿದು ತಲೆ ಹಿಡಿದಿರುತ್ತದೆ ಆ ಭಾರವನ್ನು ಇಳಿಸುವ ಕಾರ್ಯಕ್ರಮ ಇರುತ್ತದೆ. ಮೊದಲು ಸಂಪ್ರದಾಯಿಕ ವಾದ್ಯಗಳೊಂದಿಗೆ ಕಲಿಕುಂಡದ ನೀರನ್ನು ಜಂಬೆಯ ಗಿಡಕ್ಕೆ ಹಾಕಿ ಬರುತ್ತಾರೆ. ಹಂದರಕ್ಕೆ ಹಾಕಿದ ತಳಿರನ್ನು ತೆಗೆದು ನದಿ, ಬಾವಿಗಳಿಗೆ ಚಲ್ಲಿ ಬರುತ್ತಾರೆ. ಸಂಗೀತಗಾರರಿಗೆ, ಹಾಡುಗಾರಿಕೆ, ಮುತ್ತೈದೆಯರಿಗೆ ಪ್ರೀತಿಗೆ ತಿಳಿದಷ್ಟು ಕಾಣಿಕೆ ಕೊಡುವರು. ಮಾತು ಮುಗಿಸಲು ಚಾಪೆ ಹಾಸಿದವರಿಗೆ ಚಾಪೆ ಚಾರ್ಜ ಕೊಡುವರು. ಇವರಿಗೆಲ್ಲಾ ಕೊಟ್ಟ ದುಡ್ಡಿನಲ್ಲಿ ಒಂದು ಭಾಗ ಹೆಣ್ಣಿನವರು ಕೊಟ್ಟರೆ ಇನ್ನುಳಿದ ಎರಡು ಭಾಗ ಗಂಡಿನವರು ಕೊಡುವರು ಇದು ಪದ್ಧತಿ.

ನಾಗೋಲಿ ಊಟ (ಬೇಟೆ ಕೊಯ್ಯುವ ಕಾರ್ಯಕ್ರಮ) : ಮದುವೆಯ ಕೊನೆಯ ಕಾರ್ಯಕ್ರಮ ಇದು. ಮದುವೆಗೆ ಬಂದವರೆಲ್ಲರೂ ಈ ಕಾರ್ಯಕ್ರಮ ನೋಡಿಕೊಂಡೇ ಹೋಗಬೇಕು. ಮಧುಮಗ ಬೇಟೆ ಕೊಯ್ಯುವನು ಮಧುಮಗಳು ಅವನಿಗೆ ಸಹಕರಿಸುವಳು. ಒಂದು ಕುರಿಯನ್ನು ಕೊಯ್ದು ಸುಡುವವರಿಗೆ ಇವರಿಬ್ಬರೇ ಮಾಡುತ್ತಾರೆ. ಇದನ್ನು ನೆರೆದ ಬಂಧುಗಳೆಲ್ಲಾ ನೋಡುತ್ತಿರುತ್ತಾರೆ. ಈ ಬೇಟೆಯನ್ನು ಅಡುಗೆ ಮಾಡಿ ಬೀಗರು, ಕುಲಸ್ತರೆಲ್ಲರೂ ಸೇರಿ ಊಟ ಮಾಡುವರು, ಹೆಂಡ-ಸರಾಯಿ ಕುಡಿಸುವರು. ಇದರ ಖರ್ಚನ್ನೂ ಸಹ ಗಂಡಿನವರು ಎರಡು ಭಾಗ ಹೆಣ್ಣಿನವರು ಒಂದು ಭಾಗ ಭರಿಸುವರು. ಇದು ತಲ ತಲಾಂತರದಿಂದ ಬಂದ ರೂಢಿಯಾಗಿದೆ.

ಸೋಬಾನ : ಇವರಲ್ಲಿ ಬಾಲ್ಯವಿವಾಹ ಹೆಚ್ಚಿಗೆ ರೂಢಿಯಲ್ಲಿರುವದರಿಂದ ಸಾಮಾನ್ಯವಾಗಿ ಮದುವೆಯಾದ ಮೇಲೆಯೇ ಋತುಮತಿಯಾಗುವುದು ಹೆಚ್ಚು. ಋತುಮತಿಯಾದ ತಕ್ಷಣ

ಗಂಡನ ಮನೆಗೆ ಹೇಳಿ ಕಳುಹಿಸುತ್ತಾರೆ. ಇಲ್ಲವಾದರೆ ಸ್ವತಃ ಅವಳ ತಂದೆಯೇ ಗಂಡನ ಮನೆಗೆ ಹೋಗಿ ನನ್ನ ಮಗಳು ತಿಂಡಿ ತಿನ್ನುವವಳಾಗಿದ್ದಾಳೆ. ಬಟ್ಟೆ ಉಡುವವಳಾಗಿದ್ದಾಳೆ. ಅವಳನ್ನು ಉಡಿ ತುಂಬಿಕೊಳ್ಳಿರಿ ಎಂದು ಹೇಳಿ ಬರುತ್ತಾನೆ. ಒಂದು ಪ್ರಸಕ್ತದಿನ ನೋಡಿ ಸೋಬಾನ ದಿನವನ್ನು ಗೊತ್ತುಗೊಳಿಸುತ್ತಾರೆ. ಸೋಬಾನಕ್ಕೆ ಪ್ರತ್ಯೇಕ ಬಿಡಾರವನ್ನು ನಿರ್ಮಾಣ ಮಾಡಿರುತ್ತಾರೆ. ರಾತ್ರಿ ಮಾಂಸದ ಊಟದ ಅಡುಗೆ ಸಿದ್ಧವಾಗಿರುತ್ತದೆ. ಹುಡುಗಿಯ ಅತ್ತೆ, ಅತ್ತಿಗೆ ಇವರಲ್ಲಿ ಒಬ್ಬರು ಧೈರ್ಯ ಹೇಳಿ ಹುಡುಗಿಯನ್ನು ಒಳಗಡೆ ಬಿಟ್ಟು ಹೋಗುವರು. ಬೆಳಿಗ್ಗೆ ಹಾಸಿಗೆಗಳನ್ನು ಹುಡುಗಿಯ ತಂಗಿ ತೆಗೆಯುತ್ತಾಳೆ. ಪ್ರತ್ಯೇಕ ಬಿಡಾರ ನಿರ್ಮಿಸಿದ ಸೋದರ ಮಾವನಿಗೆ ಹೆಂಡ ಸರಾಯಿ ಕುಡಿಸಿ ಮಾರ್ಯದೆ ಮಾಡುವರು.

**ಮ್ಯಾರ :** ಮದುವೆಯಾದ ಮೇಲೆ ಚಾಪೆಯ ಮೇಲೆ ಮಾತಿನ ಪ್ರಕಾರ ಎಷ್ಟು ವರ್ಷ ಒಪ್ಪಿಕೊಂಡಿರುತ್ತಾನೆಯೋ ಅಷ್ಟು ದಿನ ಮಾವನ ಅದೀನದಲ್ಲಿರುಬೇಕಾಗುತ್ತದೆ. ಹೀಗೆ ಮಾವನ ಹಿಂದೆ ತಿರುಗುವದನ್ನು ಮ್ಯಾರ ಎಂದು ಕರೆಯುತ್ತಾರೆ. ಈ ಸಮಯದಲ್ಲಿ ಅತ್ತೆ ಮಾವಂದಿರಿಗೆ ಚಾಕರಿ ಮಾಡಬೇಕು. ವೇಷ ಕಟ್ಟಬೇಕು, ಬೇಟೆಗ್ಹೋಗಬೇಕು, ಸೌದೆ ತರಬೇಕು. ಅಡವಿಯಲ್ಲಿ ಸಿಕ್ಕ ಕಾಯಿಪಲ್ಯ ತಂದು ಕೊಡಬೇಕು. ಹೊಸದಾಗಿ ಬಂದ ದವಸ ಧಾನ್ಯ ತಂದು ಕೊಡಬೇಕು.

**ಪೂಟ :** ಮ್ಯಾರ ಸಮಯದಲ್ಲಿ ಅತ್ತೆ, ಮಾವ, ಹೆಂಡತಿಯನ್ನು ಸರಿಯಾಗಿ ನೋಡಿಕೊಳ್ಳದಿದ್ದರೆ, ಈ ವಿಷಯ ಅವನ ತಂದೆ ತಾಯಿಗಳಿಗೆ ಗೊತ್ತಾದರೆ ಕುಲ ಪಂಚಾಯಿತಿಗೆ ದಾವೆ ಹೂಡುವರು. ಅದು ರುಜುವಾಗಲು ಪೂಟ ಏರ್ಪಡಿಸುವರು. ಪೂಟ ಎಂದರೆ ಇಂತಹ ಪರೀಕ್ಷೆಗೊಳಗಾದ ಕುಟುಂಬದ ಹಿಂದೆ ಒಬ್ಬ ಕುಲದ ಹಿರಿಯನನ್ನು ಬಿಡುತ್ತಾರೆ. ಅವನು ಈ ಕುಟುಂಬದ ದೇಶ ತಿರುಗಿದಂತೆಲ್ಲಾ ಅವರ ಹಿಂದೆ ಹಿಂದೆ ಸುತ್ತುತ್ತಾ ಉಭಯರ ಗುಣ ಅವಗುಣಗಳನ್ನು ಪರೀಕ್ಷಿಸುತ್ತಾನೆ. ಆ ಹಿರಿಯನ ಊಟ ಉಪಚಾರದ ಖರ್ಚು ಮ್ಯಾರ ತಿರುಗುವ ಕುಟುಂಬದ್ದಾಗಿರುತ್ತದೆ. ಹೀಗೆ ಹಿಂದೆ ಸುತ್ತುವಾಗ ಯಾರದು ತಪ್ಪಿರುತ್ತದೆಯೋ ಅವರಿಗೆ ತಿದ್ದಿ ಬದ್ದಿ ಹೇಳುತ್ತಾರೆ. ಅಷ್ಟರಲ್ಲಿ ಮಾವನಿಗೆ ಅಳಿಯ ಚೆನ್ನಾಗಿ ನೋಡಿಕೊಳ್ಳುತ್ತಾನೆ. ಎಂದು ಖಾತ್ರಿಯಾದರೆ ಮ್ಯಾರವನ್ನು ಅಲ್ಲಿಗೆ ಕಡಿತಗೊಳಿಸಿ ಸ್ವೇಚ್ಛೆಯಾಗಿ ಗಂಡ ಹೆಂಡತಿಯನ್ನು ದೇಶಾಟನೆಗೆ ಕಳುಹಿಸುತ್ತಾರೆ. ಈ ಕುಟುಂಬದ ನ್ಯಾಯ ಅಲ್ಲಿಗೆ ಬಗೆ ಹರಿಯದಿದ್ದರೆ ವಿಚ್ಛೇಧನ ಅನಿವಾರ್ಯವಾಗುತ್ತದೆ.

**ವಿಚ್ಛೇಧನ :** ವಿವಾಹ ವಿಚ್ಛೇಧನ ಎರಡು ಕಾರಣಗಳಿಗೆ ಆಗಬಹುದು. ಒಂದು ಗಂಡಿನಲ್ಲಿರುವ ಯಾವುದಾದರೂ ಅತಿರೇಕತೆಯ ಬಗೆಗೆ ಉಂಟಾದ ದೈಹಿಕ ಜಿಗುಪ್ಸೆ, ಎರಡು ವೈವಾಹಿಕ ಸಂಬಂಧದಲ್ಲಿ ಬೇಸರ ಉಂಟಾದರೆ ದಂಪತಿಗಳು ಯಾವ ಒಂದು ಗಲಭೆ ಗಡಿಬಿಡಿ ಇಲ್ಲದೆ ಬೇರೆಯಾಗುತ್ತಾರೆ.

ಗಂಡನು ಹೆಂಡತಿಯನ್ನು ನಿರಾಕರಿಸಿದರೆ ಅದನ್ನು ಹೆಂಡತಿಯೂ ಒಪ್ಪಿಕೊಂಡರೆ, ಹೆಂಡತಿ ಕಡೆಯವರಿಗೆ ಮದುವೆಯ ಖರ್ಚು ಕೊಡುವ ಅವಶ್ಯಕತೆ ಇಲ್ಲ. ಕುಲದ ಹಿರಿಯರ ಮುಂದೆ

ಒಂದು ನಾಲ್ಕಾಣೆ ಸೆರಗಿನಲ್ಲಿ ಕಟ್ಟಿದರೆ ವಿಚ್ಛೇಧನ ಸಿಂಧುವಾದಂತೆ. ಹೆಂಡತಿ ಇಲ್ಲವೇ ಅವಳ ತಂದೆ ತಾಯಿಗಳು ಈ ಸಂಬಂಧ ಇಷ್ಟವಿಲ್ಲವೆಂದು ಹೇಳಿದರೆ ಗಂಡನ ಮದುವೆಯ ಖರ್ಚು ಹೆಂಡತಿ ಕಡೆಯವರು ಕಟ್ಟಿ ಕೊಡಬೇಕು. ಕುಲಪಂಚಾಯಿತಿಯ ದಂಡ ಹಿರಿಯರು ನಿರ್ಣಯಿಸಿದಂತೆ ಇಬ್ಬರೂ ಕೊಡಬೇಕು.

ಮರುವಿವಾಹ : ಕುಲ ಪಂಚಾಯತಿಯಲ್ಲಿ ವಿಚ್ಛೇಧನ ಸಿಂಧುವಾದರೆ ಗಂಡು ಹೆಣ್ಣುಮರು ಮದುವೆ ಯಾಗಬಹುದು. ವಿಚ್ಛೇಧನಗೊಂಡ ವರನಿಗೆ ಮದುವೆಯಾಗಲು ಕನ್ಯೆಯಾಗಿರ ಬಹುದು, ನಿಶ್ಚಿತಾರ್ಥ, ಬುದ್ಧಿಮಾತು, ಕೈಸಾಕ್ಷಿ, ಓಲಿಕೊಡುವ ವ್ಯವಸ್ಥೆ ಇದ್ದರೂ ಮದುವೆ ಮಾತ್ರ ಒಂದೇ ದಿನದಲ್ಲಿ ನಡೆದೇ ಹೋಗಿ ಬಿಡುತ್ತದೆ. ಇಂತಹ ಮದುವೆಗೆ ಸಣ್ಣ ಮಕ್ಕಳನ್ನು ಸೇರಿಸುವುದಿಲ್ಲ. ಸಾಮಾನ್ಯವಾಗಿ ಮದುವೆಯ ಕಾರ್ಯ ನೆರವೇರಿಸುವರು. ಇವರು ಮದುವೆಗಳಿಗೆ ಪುರೋಹಿತರನ್ನು ಸೇರಿಸುವುದಿಲ್ಲ. ತಾವೆ ಪೌರೋಹಿತ್ಯ ವಹಿಸುತ್ತಾರೆ.

ಬುಡ್ಗ ಜಂಗಮರಲ್ಲಿ ಅತ್ಯಂತ ಸರಳ ಮದುವೆ ಪದ್ಧತಿ ಕಂಡುಬರುತ್ತದೆ. ಜನಸಂಖ್ಯೆ ಅತ್ಯಂತ ಕಡಿಮೆ ಪ್ರಮಾಣದಲ್ಲಿರುವುದರಿಂದ ಗಂಡು ಮತ್ತು ಹೆಣ್ಣಿನ ಸಂಬಂಧದ ಆತಂಕ ಪ್ರತಿ ಕುಟುಂಬದಲ್ಲಿ ಇರುತ್ತದೆ. ಈ ಕಾರಣದಿಂದಾಗಿ ಅನೇಕ ಭಾಗಗಳಲ್ಲಿ ನಿರ್ದಿಷ್ಟ ಪ್ರದೇಶಕ್ಕೆ ಸೀಮಿತಗೊಳಿಸಿಕೊಂಡು ಅಲ್ಲೆ ಸುತ್ತು ಬಳಸಿ ವಂಶ ಬೆಳೆಸಲು ಕಾರಣಗಿದ್ದು, ಹೀಗಾಗಿ ಬಾಲಯ್ಯ ನಾಡು ಕಟ್ಟಾ, ಶೂಲಂ ಕಟ್ಟಾ, ಗೋಲ್ಕುಂಡ ಕಟ್ಟಾ, ಹರಪನಹಳ್ಳಿ ಕಟ್ಟಾ ಮುರಾಂಡಿ ಕಟ್ಟಾ ಮುಂತಾದ ಕಟ್ಟಗಳ ಮದ್ಯೆ ಕೊಟ್ಟು ತೆಗೆಯುವ ಸಂಬಂಧ ಅಷ್ಟಾಗಿ ನಡೆದಿಲ್ಲ. ಈ ಕಾರಣ ದಿಂದಲೇ ಈ ಗುಂಪುಗಳು ಒಂದಡೆ ಸೇರಲು ಸಾಧ್ಯವಾಗಿಲ್ಲ. ಮುರಂಡಿ ಕಟ್ಟಾದ ಕೊಮಾರಿ ಪೆನುಗೊಂಡ, ವಿಭೂತಿ ಬೆಡಗುಗಳಿಂದ ಬಾಲಯ್ಯ ಕಟ್ಟಾದ ತಿರುಬಾತಕಂ (ತೂರಪಾಟಿ) ಈರ್ಲಪಲ್ಲಿ, ಘಂಟೋಳ್ಳ ಇವರೊಂದಿಗೆ ಬಂಧುತ್ವ ಮತ್ತು ವಿವಾಹ ಸಂಬಂಧಗಳು ಏರ್ಪಟ್ಟಿದೆ.

ಗೋಲ್ಕಂಡ ಕಟ್ಟಾದವರು ಯಾವುದೇ ಬೇರೆ ಕಟ್ಟಾದ ಜೊತೆ ಬಂಧುತ್ವ ಮತ್ತು ವಿವಾಹ ಸಂಬಂಧ ಬೆಳೆಸಿಕೊಂಡಿಲ್ಲ. ಸೀಮಿತ ಬಂಧುಗಳಲ್ಲಿಯೇ ಕೊಟ್ಟು ತೆಗೆಯುವ ಪರಿಸ್ಥಿತಿಯಲಿದ್ದು, ಹೆಣ್ಣಲ್ಲಿ ಬಹಳಷ್ಟು ಬೇಡಿಕೆ ಇದೆ.

ಬುಡ್ಗ ಜಂಗಮರ ಮದುವೆಯ ದಿನ ಎರಡು ಮನೆತನದ ಗೋತ್ರಗಳು ಬಂಧುತ್ವಕ್ಕೆ ಹೊಂದಾಣಿಕೆ ಆದರೆ ಹುಡುಗ ಮತ್ತು ಹುಡುಗಿಯರ ತಂದೆ ತಾಯಿಯರು ಹೆಂಡದ ಅಂಗಡಿಗೆ ಹೋಗಿ ಜತೆಯಲ್ಲಿ ಕುಡಿದರೆಂದರೆ ಸಂಬಂಧ ಕುದರಿದಂತೆಯೇ ಸಹ ಸಾಮಾನ್ಯವಾಗಿ ಹಳೆ ಸಂಬಂಧಗಳಲ್ಲಿಯೇ ಕೊಟ್ಟು ತೆಗೆಯುವುದು ಹೆಚ್ಚು ವಾಡಿಕೆಯಲ್ಲಿದೆ.

ಒಂದು ಗೋತ್ರಕ್ಕೆ ನೆಂಟರಾಗುವ ಎಲ್ಲ ಗೋತ್ರಗಳು ಅಣ್ಣತಮಂದಿರು ಎನ್ನುವ ನಂಬಿಕೆ ಇದೆ. ಉದಾಹರಣೆಗೆ ತೂರುಪಾಟಿ ಇದು ಅಪಭ್ರಂಶವಾಗಿ ತಿರುಬಾತಕೂ ಆಗಿದೆ. ಇವರ ತಿರುಪಾಟಿ ಗೋತ್ರಕ್ಕೆ ಈರ್ಲಪಲ್ಲಿ ಘಂಟೋಳ್ಳ (ಪಾಲಿಂಕೋಳ್ಳು) ಪಾಲಿಕೊಳ್ಳು ಜಾತಿಕ ಜಾತಿಕರ್ತೋಳ್ಳು ಇವರೆಲ್ಲಾ ಅಣ್ಣತಮ್ಮಂದಿರಾಗುತ್ತಾರೆ. ಇವರಿಗೆ ಕೊಮಾರಿ, ತಿರುಪಕೋಳ್ಳು, ಪತ್ರಿ ಬಂಡೆತ್ತರೋಳ್ಳು ಒಂಟಿದ್ದು, ಈ ಬೆಡಗುಗಳಲ್ಲಿ ವಿವಾಹ ಸಂಬಂಧ ಏರ್ಪಡುತ್ತದೆ.

ಈ ಹಿಂದೆ ವಿವಾಹವು ಬುಡ್ಗಜಂಗಮರ ಸಮುದಾಯದಲ್ಲಿ ೫ ದಿನಗಳ ಕಾಲ ನಡೆಯುತ್ತಿತ್ತು. ಮದುವೆಯ ಮತ್ತು ಗಂಡಿನ ಎರಡನೆ ದಿನಗಳೆಂದು ಮದುವೆ ಹೆಣ್ಣು ಮತ್ತು ಗಂಡಿನ ಮನೆಯಲ್ಲಿ ೧೨-೧೨ ಕಂಬಗಳನ್ನು ನೆಟ್ಟು ಪೂಜೆಮಾಡಿ ಚಪ್ಪರ ಹಾಕುತ್ತಾರೆ. ನಂತರ ಗಂಡು ಹಾಗೂ ಹೆಣ್ಣಿಗೆ ಸೋದರ ಮಾವಂದಿರ ಕೈಯಿಂದ ಕಾಲುಂಗರ ಇಡುತ್ತಾರೆ. ಗಂಡಿನ ಕಡೆಯಿಂದ ಹೆಣ್ಣಿಗೆ ಅರಿಶಿಣವನ್ನು ಕಳುಹಿಸಿ ಅದೇ ಅರಿಶಿಣವನ್ನು ಹೆಣ್ಣಿಗೆ ಇಡುತ್ತಾರೆ. ಸಾಮಾನ್ಯವಾಗಿ ಗಂಡಿನ ಮನೆಯಲ್ಲೆ ಮದುವೆ ಕಾರ್ಯಗಳು ನಡೆಯುತ್ತದೆ. ಪ್ರಥಮವಾಗಿ ಗಂಡಿನ ಮನೆಗೆ ಹೆಣ್ಣು ಬಂದಾಗ ಸಾಂಪ್ರದಾಯಕವಾಗಿ ಮುತ್ತೈದೆಯರಿಂದ ಪಾನಕದ ೨ ಬಿಂದಿಗೆ ಹಾಗೂ ೧ ಬಿಂದಿಗೆ ನೀರಿನೊಂದಿಗೆ ಹೂವು ಹಣ್ಣು ಮತ್ತು ಸೀರೆ ಜಾಕೀಟು ಮುಂತಾದವನ್ನು ನೀಡಿ ಸ್ವಾಗತಿಸುತ್ತಾರೆ. ಇದನ್ನೆ ದಿಬ್ಬಣಿ ಎನ್ನುತ್ತಾರೆ ಅದೇ ರಾತ್ರಿ ತುಪ್ಪ ಕಜ್ಜಾಯ ವಿಭೂತಿ ಶಂಬು ಗಂಟೆ ಬಾರಿಸಿ ವೀರಭದ್ರನ ರುದ್ರಪಲ್ಕದ ಪೂಜೆ ನೆರವೇರಿಸುತ್ತಾರೆ. ಇದೇ ಸಮಯದಲ್ಲಿ ಹೆಣ್ಣು ಮತ್ತು ಗಂಡಿಗೆ ಸೋದರ ಮಾವನವರ ಕಡೆಯಿಂದ ಸಾಂಪ್ರದಾಯಕ ಲಿಂಗಧಾರಣೆ ಈಶ್ವರನ ಹೆಸರಿನಲ್ಲಿ ಆಗುತ್ತದೆ. ಗಂಡನು ಮಾತ್ರ ತಲೆಗೆ ಪೇಟಾ, ಕೈಯಲ್ಲಿ ಏಕದಂಥ, ಕುತಾಚಂಬು ಪೂಜಾ ಸಾಮಗ್ರಿಗಳನ್ನು ಕೊಟ್ಟು ಕಳುಹಿಸುವ ಶಾಸ್ತ್ರವು ಚಾಲ್ತಿಯಲ್ಲಿದೆ.

ಮೂರನೆ ದಿನ ಬೆಳಗಿನ ಜಾವ ಹೆಣ್ಣು ಮತ್ತು ಗಂಡಿಗೆ ಕಾಲು ಉಂಗುರ ತೆಗೆಯುವುದು, ಕುಂಬರನಿಂದ ಅರಿವೇಣಿ ಮಡಿಕೆ ತರುವುದು ಅವುಗಳನ್ನು ಚಪ್ಪರದ ಕೆಳಗೆ ಪಾಲುಕಂಬವನ್ನಿಟ್ಟು ಮೂಹರ್ತ ಮುಗಿಯುವವರೆಗೆ ಎಣ್ಣೆ ದೀಪವಿರಿಸಿ ಪೂಜಿಸುತ್ತಾರೆ. ಈ ಸಂದರ್ಭದಲ್ಲಿ ಹೆಣ್ಣಿನ ಕಡೆಯಿಂದ ಶಾಸೋತ್ರಕ್ತವಾಗಿ ಓಲಿ ಪಡೆದು ಗಂಡಿನ ಕಡೆಯಿಂದ ನೀಡುವ ಮೂಹರ್ತದ ಬಟ್ಟೆಗಳನ್ನು ಧರಿಸಿ ಮುಹೂರ್ತಕ್ಕೆ ಸಿದ್ಧರಾಗುತ್ತಾರೆ.

ಸಾಮಾನ್ಯವಾಗಿ ಈ ಜನಾಂಗದವರ ಮದುವೆಗಳಿಗೆ ಪುರೋಹಿತರು ಇರುವುದಿಲ್ಲ. ಕುಂದ ಹಿರಿಯರೆ ಮೂಹರ್ತದ ಪ್ರಕ್ರಿಯೆಗಳನ್ನು ನಿರ್ವಹಿಸುತ್ತಾರೆ. ಪುಟ್ಟ ಬಂಗಾರಂ ಶಾಸ್ತ್ರದ ಮುಖೇನ ತಂದ ಹುತ್ತದ ಮಣ್ಣನ್ನು, ೧೨ ಕಂಬಗಳ ಹತ್ತಿರ ಹಾಕಿ ಪೂಜೆ ಮಾಡುವ ಶಾಸ್ತ್ರ, ಅರವೇಣಿ ತುಳುಕುವ ಶಾಸ್ತ್ರದ ನಂತರ ಮದುವೆಗೆ ಬಂದ ಹಿರಿಯರ ಸಮ್ಮುಖದಲ್ಲಿ ಕಜ್ಜಾಯ ನೋಮು ಅಡಿಕೆ ಎಲೆ ಅಡಿಕೆ, ಕರಿ ಕಂಬಳಿ ಮುಂತಾದ ವಸ್ತುಗಳ ಪೂಜೆಗಿಟ್ಟು ಕುಲದ ಹಿರಿಯರು ಗುರುಗಳು, ಗೂಡಿಗಾರರು, ಬುದ್ಧಿವಂತರಿಗೆ ವಿಭೂತಿ ಹಣೆಗೆ ಹಚ್ಚುವುದರ ಮುಖಾಂತರ ಸಿಂಹಾಸನ ಪೂಜೆಯನ್ನು ನಿರ್ವಹಿಸುತ್ತಾರೆ. ಬಣ್ಣದ ನೀರಿನಿಂದ ವಸಂದತ ಆಟ ಆಡಿಸಿ ಸಂತೋಷಪಡುತ್ತಾರೆ.

ನಾಲ್ಕನೇ ದಿನ ವಿಘ್ನರಾಯನನ್ನು ಪೂಜಿಸಿ ಮೊಳಕೆ ಹಾಕುವ ಶಾಸ್ತ್ರ ಮುಗಿಸಿ ಹೆಣ್ಣಿನ ಮನೆಗೆ ಹೋಗಿ ಮಾಂಸಾಹಾರದ ಅಡಿಗೆ ಮಾಡಿಸಿ ಊಟೋಪಚಾರ ಮಾಡುತ್ತಾರೆ. ರಾತ್ರಿಗೆ ಶೋಬನ ಕಾರ್ಯವು ಹಿರಿಯರ ಆದೇಶದಂತೆ ನಡೆಯುತ್ತದೆ. ಐದನೇ ದಿನ ಹೆಣ್ಣುಗಂಡಿಗೆ ತಲೆಗೆ ಎಣ್ಣೆಸ್ನಾನ ಮಾಡಿಸಿ ಸಿಹಿ ಊಟವನ್ನು ಮಾಡಿ ನಂತರ ಮದುವೆಯಾದ ದಂಪತಿಗಳ ಗಂಡನ ಮನೆಗೆ ಕಳುಹಿಸಿಕೊಡಲಾಗುತ್ತದೆ.

೫

# ಆರಾಧನೆ ಆಚರಣೆ ನಂಬಿಕೆ

**ಸಂಪ್ರದಾಯಗಳು :** ಜನನ, ನಾಮಕರಣ, ಋತುಮತಿ ಆಚರಣೆಗಳನ್ನು ಬುಡ್ಗ ಜಂಗಮರು ಅಲೆಮಾರಿಗಳಾದರೂ ನಿಷ್ಠೆಯಿಂದ ಪಾಲಿಸುತ್ತಾರೆ. ಪೂಜೆ, ಮದುವೆ, ಜನನದ ಸಮಯದಲ್ಲಿ ಕೈಗೊಳ್ಳುವ ಹಾಗೂ ಮರಣದ ಸಮಯದಲ್ಲಿ ನಿರ್ವಹಿಸುವ ಕಟ್ಟುಪಾಡುಗಳು ಪ್ರಮುಖ.

ಜನನ : ಬುಡ್ಗ ಜಂಗಮರಲ್ಲಿ ಹೆರಿಗೆ ಕಾರ್ಯದಲ್ಲಿ ಮಂತ್ರಸಾನಿ ಎಂಬ ಅನುಭವಸ್ಥಳಾದವಳು ಇರುತ್ತಾಳೆ. ಹೆರಿಗೆಯ ಒಂದು ತಿಂಗಳ ಮುಂಚೆಯಿಂದ ಮಂತ್ರಸಾನಿ ಇರುವಲ್ಲಿಗೆ ಹೋಗಿ ಅವರ ಹತ್ತಿರ ಬಿಡಾರ ಹೂಡುತ್ತಾರೆ. ಮಂತ್ರಸಾನಿ ಕುಟುಂಬ ಮತ್ತೊಂದು ಊರಿಗೆ ಬದಲಾದರೆ ಅವರ ಹಿಂದೆ ಈ ಗರ್ಭಿಣಿ ಕುಟುಂಬ ಕೂಡ ಬದಲಾಗುತ್ತದೆ. ಹೆರಿಗೆ ನೋವು ಪ್ರಾರಂಭವಾದಾಗ ಮಂತ್ರಸಾನಿಯು ಹಿತ್ತಾಳೆಯ ಚಂಬಿನಲ್ಲಾಗಲಿ, ರಾಗಿಯ ಚಂಬಿನಲ್ಲಾಗಲಿ ಮಂತ್ರಿಸಿದ ನೀರು ತಂದು ಗರ್ಭಿಣಿಗೆ ಕುಡಿಯಿಸುತ್ತಾಳೆ. ಮಾನಸಿಕವಾಗಿ ಧೈರ್ಯ ತುಂಬುತ್ತಾ ಹೆರಿಗೆಗೆ ಉತ್ತೇಜಸುತ್ತಿರುತ್ತಾಳೆ. ಗರ್ಭಿಣಿಗೆ ನೋವು ಬಂದು ಪ್ರಸವ ಸಂಭವಿಸಿದಾಗ ಕುಲದ ಸ್ತ್ರೀಯರು ಬಿಡಾರದ ಸುತ್ತಲೂ ನಿಂತು ಶಿವುಡೊಚ್ಚೆ ಶಿವುಡೊಚ್ಚೆ... (ಶಿವಬಂದ ಶಿವಬಂದ...) ದೇವುಡೊಚ್ಚೆ ದೇವುಡೊಚ್ಚೆ... (ದೇವರ ಬಂದ ದೇವರು ಬಂದ...) ಸ್ವಾಮಿವಚ್ಚೆ ಸ್ವಾಮಿವಚ್ಚೆ... (ಸ್ವಾಮಿಬಂದ ಸ್ವಾಮಿ ಬಂದ...) ಎನ್ನುತ್ತ ಪ್ರಸವ ಸಂಭವಿಸುವವರೆಗೆ ನಿನಾದ ಮಾಡುತ್ತಿರುತ್ತಾರೆ.

ಹೆರಿಗೆಯಾದ ತಕ್ಷಣ ತೊಳೆದ ಈಳಿಗೆಯಿಂದ ಹೊಕ್ಕಳ ಹುರಿ ಕೊಯ್ಯುತ್ತಾರೆ. ಇಲಿಯ ಹಿಕ್ಕೆಗಳನ್ನು ಪುಡಿಗೊಳಿಸಿ ಅದರಲ್ಲಿ ಅರಿಶಿಣ ಕೊಬ್ಬರಿ ಎಣ್ಣೆ ಮಿಶ್ರಗೊಳಿಸಿ ಹೊಕ್ಕಳು ಹುರಿ ಕೊಯ್ದ ಭಾಗಕ್ಕೆ ಹಚ್ಚುತ್ತಾರೆ. ಹೀಗೆ ಹಚ್ಚುವುದರಿಂದ ತಾಯಿಯ ವಿಸರ್ಜಿತ ವಸ್ತು ಹೊರ ಬರುತ್ತದೆ ಎಂದು ಹೇಳುತ್ತಾರೆ. ಹೆರಿಗೆಯಾದ ನಂತರ ಬರುವ ಮಾಸವನ್ನು ಇವರು ಕೊಲ್ಲು ಎನ್ನುತ್ತಾರೆ. ಅದನ್ನು ಒಂದು ಹೊಸ ಗಡಿಗೆಯಲ್ಲಿ ತುಂಬಿ ಬಿಡಾರದ ಎದುರು ಹೂಳಿಡುತ್ತಾರೆ. ಹೆರಿಗೆಯಾದ ಮೇಲೆ ಬಾಣಂತಿ ಮತ್ತು ಮಗು ಇರುವ ಬಿಡಾರದಲ್ಲಿ ಭೂತ ಪ್ರೇತಗಳು ಸುಳಿಯಬಾರದೆಂದು ಬಾರಿಗೆ, ಮೀನಿನ ಬಲೆ ಇಟ್ಟು ಬಿಡಾರದ ಸುತ್ತಬೂದಿ ಮಂತ್ರಿಸಿ ಹಾಕುತ್ತಾರೆ. ಇದನ್ನು ಪೊತ್ತಿಕಟ್ಟಡಂ ಎಂದು ಕರೆಯುತ್ತಾರೆ.

ಹೆರಿಗೆಯಾದ ಮೇಲೆ ಸುತ್ತಮುತ್ತಲಿನ ಬಿಡಾರದವರು ಒಂದೊಂದು ಗಡಿಗೆ ನೀರು ಕಾಯಿಸಿಕೊಂಡು ಬರುತ್ತಾರೆ. ಮಾಯ ಅಥವಾ ಕೊಲ್ಲು ಹೂಳಿರುವ ಜಾಗದಲ್ಲಿ ಒಂದು ಕಲ್ಲನ್ನು ಹಾಕಿ ಅದರ ಮೇಲೆ ಬಾಣಂತಿಯನ್ನು ಕೂಡಿಸಿ ಅರೆದ ಬೇವಿನ ತಪ್ಪಲು ಮತ್ತು ಅರಿಶಿಣಪುಡಿ ಮೈಗೆ ಲೇಪಿಸಿ ಸ್ನಾನ ಮಾಡಿಸುತ್ತಾರೆ. ಸ್ನಾನ ಆದ ಮೇಲೆ ಸೂರ್ಯನಿಗೆ ನಮಸ್ಕಾರ ಮಾಡಿ ಒಳ ಪ್ರವೇಶಿಸುವಳು.

**ಪುರುಡು (ನಾಮಕರಣ) :** ಮಗು ಜನಿಸಿದ ಮೂರನೆಯ ದಿನವನ್ನು ಪುರುಡು ಎಂದು ಆಚರಿಸುತ್ತಾರೆ. ಆ ದಿನ ಸಮುದಾಯದ ಆಚಾರದ ಪ್ರಕಾರ ಹೆಂಡವನ್ನು ಹಂಚಬೇಕು. ಬಾಣಂತಿಗೆ ಕರಿಬೇವು, ಬೆಳ್ಳುಳ್ಳಿ, ಮೇಣಸಿನ ಪುಡಿ, ತುಪ್ಪವನ್ನು ಬಿಸಿ ಅನ್ನದಲ್ಲಿ ಮಿಶ್ರಣ ಮಾಡಿ ಸ್ವಲ್ಪ ಅರಿದ ನಂತರ ತಿನ್ನಲು ನೀಡುತ್ತಾರೆ. ಕೆಲವರು ಹೆಂಡವನ್ನು ಸಹ ಕುಡಿಸುತ್ತಾರೆ. ಜನಿಸಿದ ಮಗವನ್ನು ಮೊರದಲ್ಲಿ ಹುಲ್ಲನ್ನು ಹಾಸಿ ಮಲಗಿಸುತ್ತಾರೆ. ಗಂಡು ಅಥವಾ ಹೆಣ್ಣು ಮಗುವಿಗೆ ಬಜ್ಜಿಯ ತುಂಡುಗಳನ್ನು ದಾರಗಳಲ್ಲಿ ಪೋಣಿಸಿ ಕುತ್ತಿಗೆಗೆ ಹಾರವಾಗಿ ಹಾಕುತ್ತಾರೆ. ಇದರಿಂದ ಮಗುವಿಗೆ ಅಜೀರ್ಣ ದೂರವಾಗಿ ಹೊಟ್ಟೆ ನೋವು ಇಲ್ಲದಂತೆ ಆರೋಗ್ಯವಾಗಿ ಇರುತ್ತದೆ ಎಂಬ ನಂಬಿಕೆ. ಆ ದಿನ ಬೇಟೆಗೆ ಹೋಗಿ ಬೇಟೆಯಾಡಿದ ಪ್ರಾಣಿಗಳ ಮಾಂಸದಿಂದ ಅಡುಗೆ ಮಾಡಿ ಸಮುದಾಯದೆಲ್ಲರಿಗೂ ಊಟವನ್ನು ಹಾಕಿಸುತ್ತಾರೆ. ತರುವಾಯ ಮಗುವಿಗೆ ನಾಮಕರಣ ಮಾಡಲಾಗುತ್ತದೆ. ನೆರೆದ ಜನರೆಲ್ಲರೂ ನಿಮ್ಮ ಮಗುವಿಗೆ ಏನೆಂದು ಹೆಸರಿಟಿದ್ದೀರಿ ಎಂದು ಕೇಳುತ್ತಾರೆ. ಇಂತಹ ಹೆಸರನ್ನು ನಿಶ್ಚಯಿಸಿದ್ದೇವೆ ಎಂದು ಮಗುವಿನ ತಂದೆ ಹೇಳುತ್ತಾನೆ. ಇದೇ ಇವರಲ್ಲಿ ನಾಮಕರಣವಿದ್ದಂತೆ.

**ಕಲ್ಲು ಪೂಜೆ / ಕಳ್ಳು ಪೂಜೆ :** ಹೆರಿಗೆಯಾದ ಮಗು ಆರೋಗ್ಯವಾದರೆ ದೊರೆ ಕಲ್ಲು ಎಂದು. ಮಗು ಆರೋಗ್ಯವಾಗಿ ಇಲ್ಲದಿದ್ದರೆ ದೊಂಗ ಕಲ್ಲು ಎಂದು ಎರಡು ರೀತಿಯಲ್ಲಿ ಹೂಳುತಾರೆ. ದೊರೆ ಕಲ್ಲನ್ನು ಬಿಡಾರದ ಸಮೀಪ ದೊಂಗ ಕಲ್ಲನ್ನು ಬಿಡಾರಕ್ಕೆ ಸ್ವಲ್ಪ ದೂರ ಹೂಳುತ್ತಾರೆ. ಹಾಗೆ ಹೂಳಿದ ಜಾಗದಲ್ಲಿ ಒಂದು ಕಲ್ಲುನೆಟ್ಟು ಆ ಜಾಗವನ್ನು ಪೂಜಿಸುತ್ತಾರೆ. ಅದನ್ನು ಕಲ್ಲು ಪೂಜೆ ಅಥವಾ ಕಳ್ಳು ಪೂಜೆ ಎಂದು ಕರೆಯುತ್ತಾರೆ. ಅಂತಹ ಕಲ್ಲಿನ ಮುಂದೆ ಮೂರು ಬಿಂಗುಸಿ ಕಲ್ಲುಗಳನ್ನು ಇಟ್ಟು, ಅವುಗಳನ್ನು ತೊಳೆದು ವಿಭೂತಿ ಕುಂಕಮ ಹಚ್ಚಿ ಬೆಳ್ಳುಳ್ಳಿಯ ಹಾರವನ್ನು ಹಾಕಿ ಪೂಜೆ ಸಲ್ಲಿಸಿ ಮುಂದೆ ಮೂರು ಪತ್ರವಳ್ಳಿ ಹಾಕಿ ಅದರಲ್ಲಿ ಅಂದು ಮಾಡಿದ ಅಡುಗೆಯನ್ನು ಎಡೆಯಾಗಿ ಹಾಕಿ ಮುಂದೆ ದೀಪ ಹಚ್ಚುತ್ತಾರೆ. ಆ ಬಳಿಕ ಬಾಣಂತಿಗೆ ಉರಿವ ದೀಪ ಕೈಗೆ ಕೊಟ್ಟು ಮೈ ತುಂಬ ಬಟ್ಟೆ ಹೊದಿಸಿ, ಆ ಸ್ಥಳಕ್ಕೆ ಕರೆದುಕೊಂಡು ಹೋಗಿ ಮೂರು ಸಾರಿ ಪ್ರದಕ್ಷಿಣೆ ಹಾಕಿಸಿ ಆ ಕಲ್ಲಿನ ಮೇಲೆ ಕೂಡಿಸುತ್ತಾರೆ. ಪಕ್ಕದಲ್ಲಿ ಒಂದು ಸಣ್ಣ ಕುಣಿ ತೋಡಿ ಅದರಲ್ಲಿ ಪೂಜೆ ಸಲ್ಲಿಸಿದ ಒಂದು ಕಲ್ಲು, ಎಡೆ, ಬೆಳ್ಳುಳ್ಳಿಹಾರ ಹಾಕಿ ಹೂಳುತ್ತಾರೆ. ಇನ್ನೊಂದು ಎಡೆಯನ್ನು ಬಾಣಂತಿ ಸ್ವಲ್ಪ ತಿಂದು ಉಳಿದುದನ್ನು ಗಂಡು ಮಕ್ಕಳಾದರೆ ಹೆಣ್ಣುಮಕ್ಕಳಿಗೆ ಹೆಣ್ಣುಮಗುವಾದರೆ ಗಂಡು ಚಿಕ್ಕಮಕ್ಕಳಿಗೆ ಕೊಟ್ಟು, ಒಂದು ಬೆಳ್ಳುಳ್ಳಿ ಹಾರವನ್ನು ಅವಳು ಹಾಕಿಕೊಳ್ಳುತ್ತಾಳೆ.

ಮೂರನೆಯದನ್ನು ಹೆಣ್ಣುಮಗುವಾದರೆ ಗಂಡು ನಾಯಿಯನ್ನು, ಗಂಡು ಮಗು ಜನಿಸಿದ್ದರೆ, ಹೆಣ್ಣು ನಾಯಿಯನ್ನು ಕರೆತಂದು ಅದಕ್ಕೆ ಸ್ನಾನ ಮಾಡಿಸಿ ಪೂಜೆ ಸಲ್ಲಿಸಿ ಅದರ ಕೊರಳಲ್ಲಿ ಒಂದು ಬೆಳ್ಳುಳ್ಳಿ ಹಾರ ಹಾಕಿ ಒಂದು ಎಡೆಯನ್ನು ತಿನ್ನಿಸಿ ನಾಯಿಯನ್ನು ಅರಚುವಂತೆ ಹೊಡೆಯುತ್ತಾರೆ. ಇದನ್ನು ಮಲ್ಲಿಕಾರ್ಜುನ ನಾಯಿ ಎನ್ನುತ್ತಾರೆ. ಆಮೇಲೆ ಅಲ್ಲೇ ನೆಲದ ಮೇಲೆ ಬೆಂಕಿ ಹಾಕಿ ಅದರಲ್ಲಿ ಎಣ್ಣೆ ಹಾಕಿ ಹೊಗೆ ಏಳಿಸುತ್ತಾರೆ. ಆಗ ಬಾಣಂತಿ ಎಣ್ಣೆದಾರೆ ನೀನು ತಗೋ ಹಾಲುದಾರೆ ನನಗೆ ಕೊಡು ಎಂದು ಮೂರುಸಾರಿ ಕೈಮುಗಿದು ಒಳಗೆ ಹೋಗುತ್ತಾಳೆ. ಮಂಡಲವೆಂದು ಮಣ್ಣಿನಿಂದ ಒಡ್ಡು ನಿರ್ಮಿಸಿದುದನ್ನು ಕೀಳಿ ಮಣ್ಣಿನಿಂದ ಮುಚ್ಚುತ್ತಾರೆ. ನಾಲ್ಕನೆಯ ದಿನ ಕಲ್ಲು ಹೂಳಿದ ಜಾಗದಲ್ಲಿ ಬೂದಿ ಎರಚುತ್ತಾರೆ.

**ಗಂಗಾ ಸ್ನಾನ :** ಹೆರಿಗೆಯಾದ ಏಳನೆಯ ದಿನಕ್ಕೆ ಇಲ್ಲವೇ ಒಂಬತ್ತನೇ ದಿನಕ್ಕೆ ತಣ್ಣೀರು ಮುಟ್ಟಿಸುವ ಕಾರ್ಯಕ್ರಮ ಇರುತ್ತದೆ. ತಮ್ಮವರಲ್ಲಿ ಒಬ್ಬರೊಂದಿಗೆ ಉಡಿಯಲ್ಲಿ ನವ ದಾನ್ಯಗಳನ್ನು ತುಂಬಿಕೊಂಡು, ಬೇವಿನ ತಪ್ಪಲಿನಲ್ಲಿ ಬೆರಸಿಕೊಂಡು ದಾರಿಯಲ್ಲಿ ಉದುರಿಸಿ ಕೊಳ್ಳುತ್ತಾ ನೀರು ಇರುವ ಕೆರೆಗೋ ಬಾವಿಗೋ ಹೋಗುತ್ತಾರೆ. ಅಲ್ಲಿ ಮಣ್ಣಿನ ರಾಶಿ ಮಾಡಿ ಅದಕ್ಕೆ ಅರಿಶಿಣ, ಕುಂಕಮ ಹಚ್ಚಿ, ಹಂಗುನೂಲು ಏರಿಸಿ ತಾವು ತಂಬಿಗೆಯಲ್ಲಿ ನೀರು ತುಂಬಿ ಅದಕ್ಕೂ ಊದು ಬತ್ತಿ ಹಚ್ಚಿ, ತೆಂಗಿನಕಾಯಿ ಒಡೆದು ನೀರಿನಲ್ಲಿ ಎಲೆ, ಅಡಿಕೆ, ದಕ್ಷಿಣ ಹಾಕಿ ಆ ತಂಬಿಗೆಯನ್ನು ತಲೆಯ ಮೇಲೆ ಹೊತ್ತುಕೊಂಡು ನೀರು ಚಿಮುಕಿಸುತ್ತಾ ಬಿಡಾರಕ್ಕೆ ಬರುವರು. ಬಂದ ತಕ್ಷಣ ಮಗುವಿದ್ದ ಸ್ಥಳಕ್ಕೆ ಹೋಗಿ ಬಾಣಂತಿ ತನ್ನ ತಲೆಯ ಮೇಲೆ ನೀರು ಹಾಕಿಕೊಂಡು, ಮಗುವಿನ ಮೇಲೆ ಬೀಳುವಂತೆ ಮಾಡುತ್ತಾಳೆ. ನಂತರ ಮಗುವಿಗೆ ಸ್ನಾನ ಮಾಡಿಸಿ ಹುಣಿಸೆಯ ಮರದ ತೊಗಟೆಯಿಂದಾಗಲಿ, ಉತ್ತರಾಣಿ ಕಡ್ಡಿಯಿಂದಾಗಲಿ ಅಥವಾ ಸೂಜಿಯನ್ನು ಕೆಂಪಾಗಿ ಕಾಯಿಸಿ ಹೊಕ್ಕಳ ಬುಡ್ಡೆಯ ಎಡಪಕ್ಕದಲ್ಲಿ ಮತ್ತು ಬಲಪಕ್ಕ ಗುರುತು ಆಗುವ ಹಾಗೆ ಸುಡುತ್ತಾರೆ. ಹೀಗೆ ಸುಡುವುದರಿಂದ ಮಗುವಿನ ಗರ್ಭವಾಯು, ಹೊಟ್ಟೆ ಉಬ್ಬರ ಬರುವುದಿಲ್ಲವೆಂದು ಮತ್ತು ಮಗುವಿನ ಆರೋಗ್ಯ ಚೆನ್ನಾಗಿರುತ್ತದೆಂದು ನಂಬಿದ್ದಾರೆ.

**ಹೆರಿಗೆ ಆದಾಗ ಊಟದ ಪದಾರ್ಥಗಳು**

ಬಂಠಿ ಮಿರಿಯಾಲು ಹಿಪ್ಪಿಲ್ಲು, ಮೋಡಿ, ವಾಯುಲಂಗ, ಹಜವಾಂ, (ಹಜವಾನ) ಚೆಂದ್ರ ವಾಮ. ಸೂರ್ಯವಾನು ಮಂಟಿವಾಮ ಹಾಕುಪತ್ರಿ ಹಾಕಲಕರ್ರ ನೂಲಿಕಾಯ ಮಂಡ್ರಪಶುಪ್ರ ಅರಿಶಿಣ ಎಕೆಲ್ಲಿಪಾಲ (ಒಂಟಿಬೆಳ್ಳುಳ್ಳಿ) ಕುಂಕುಮಪುವ್ವು. ಜಾಜಿಕಾಯಿ ಜಾಪತ್ರಿ ರಸಕರ್ಪೂರ. ಅಥವಾ ಚೆಂಡೂರಂ ಕಾರ್ಕಯ ಮುಂತಾದವು.

**ತಯಾರಿಸುವ ವಿಧಾನ :** ಹಜುವಾನ, ಜಾಜಿಕಾಯಿ, ಜಾಪತ್ರಿ, ಕುಂಕುಮಪ್ರುವ್ವು, ಕಾರ್ಕಾಯಿ ತಾಟಗಿ ಬೆಲ್ಲ ಬೆಳ್ಳೂಳ್ಳಿ, ಇವುಗಳನ್ನು ಬಿಟ್ಟು ಉಳಿದ ಸಾಮಾನುಗಳನ್ನು ಹಂಚಿನ ಮೇಲೆ ಸ್ವಲ್ಪ ಬೆಚ್ಚಗೆ ಮಾಡಿ ಪುಡಿಮಾಡಬೇಕು. ಕುಸುಬೆ ಎಣ್ಣೆ ಅಥವಾ ಎಳ್ಳುಎಣ್ಣೆ ಅದರಲ್ಲಿ ಬೆಳ್ಳುಳ್ಳಿಯನ್ನು ಹಾಕಿ ನೆನಿಸಬೇಕು. ಸ್ವಲ್ಪ ಸಮಯದ ನಂತರ ಆ ಪುಡಿಯನ್ನು ಅದೇ

ಎಣ್ಣೆಯಲ್ಲಿ ಹಾಕಿ ದುಂಡಾಗಿ ಗೋಲಿ ತರಹ ಮಾಡಿ ಗಾಳಿಯಲ್ಲಿ ಹಾರಿಸಬೇಕು. ಇದನ್ನು ಪ್ರತಿದಿನ ಬೆಳಿಗ್ಗೆ ಸಾಯಂಕಾಲ ೪ ಅಥವಾ ೫ ದಿವಸದವರಿಗೆ ಸೇವಿಸುತ್ತ ಹೋಗುವುದು.

**ಋತುಮತಿ :** ಹೆಣ್ಣು ಬಾಲ್ಯಾವಸ್ಥೆಯನ್ನು ಕಳೆದ ಮುಂದಿನ ಯೌವನ ದಿಶೆ, ಕೌಮಾರ್ಯ, ಯೌವನಾವಸ್ಥೆ ಅಂದರೆ ಇದೆ. ಈ ದಿಶೆಯಿಂದ ಶಾರೀರಿಕ ಬದಲಾವಣೆ ಮತ್ತು ಮಾನಸಿಕ ಸ್ವಸ್ಥ ಕೂಡ ಬದಲಾಗುತ್ತದೆ. ಇದನ್ನು ಒಂದು ಮಹತ್ವದ ಅವಕಾಶವೆಂದು ಪೂಜೆ ಪುನಸ್ಕಾರ ಗಳೊಂದಿಗೆ ಈ ಜನಾಂಗದಲ್ಲಿಯೂ ಕೂಡ ನಡೆಸುತ್ತಾರೆ. ಋತುವಾದ ಕ್ಷಣದಿಂದಲೆ ಮೈನೆರದ ಹುಡುಗಿಯ ಮನೆಯವರಿಗೆ ಹಾಗೂ ರಕ್ತಸಂಬಂಧಿಗಳಿಗೆ ಸೂತಕ ತಲೆದೋರುತ್ತದೆ. ಶುಭಕಾರ್ಯ ನಡೆಯುವ ಹಾಗಿಲ್ಲ ಮತ್ತು ಪೂಜೆ ಕೂಡ ಮಾಡುವ ಹಾಗಿಲ್ಲ.

ಈ ಸಮುದಾಯದಲ್ಲಿ ಹೆಣ್ಣು ರಸಜ್ವಲೆ ಆದಳೆಂದರೆ ಸೋದರಮಾವ ಅಥವಾ ತಾತನಿಂದ ಪ್ರತ್ಯೇಕ ಬಿಡಾರ ಮಾಡಿಸುತ್ತಾರೆ. ಒಂಬತ್ತು ದಿನಗಳವರೆಗೂ ಅವಳು ಅಲ್ಲಿಯೇ ವಾಸವಾಗಿರ ಬೇಕು. ಈ ವಿಷಯ ತಿಳಿದ ತಕ್ಷಣ ಅವಳ ಸೋದರಮಾವ ಬಂದು ಅವಳ ಮುಖ ನೋಡದಂತೆ ಮುಂದಕ್ಕೆ ಹೋಗಿ ಸ್ನಾನ ಮಾಡಿ ಹನುಮಂತ ದೇವರ ದರ್ಶನ ಮಾಡಿಕೊಂಡು ಆಮೇಲೆ ಅವಳ ಮುಖ ನೋಡವನು. ಕುಂಬಾರನಿಂದ ತಂದ ಮಣ್ಣಿನ ಮಗಿ ಮತ್ತು ಪರ್ಯಾಣದಲ್ಲಿ ಊಟ ಮತ್ತು ನೀರು ಕೊಡುತ್ತಾರೆ. ಈ ಸಾಮಾನುಗಳನ್ನು ಯಾರು ಮುಟ್ಟಿಸಿಕೊಳ್ಳುವಂತಿಲ್ಲ. ಅಷ್ಟೇಕೆ ಅವಳ ಮುಖ ಕೂಡ ನೋಡುವಂತಿಲ್ಲ ಬೆಳಕು ಹರಿಯುವ ಮೊದಲೇ ಬೆಳಗಿನ ನಿತ್ಯ ಕರ್ಮಗಳನ್ನು ಮಾಡಿಕೊಳ್ಳಬೇಕು.

ಋತುಮತಿಯಾದವಳಿಗೆ ಆಹಾರದಲ್ಲಿ ಉಪ್ಪು ಹಾಕದೆ ಮಾಡಿದ ಕಿಚಿಡಿ, ಗೋಧಿ ಪಾಯಸ, ಕೊಬ್ಬರಿ-ಬೆಲ್ಲ-ಉತ್ತುತ್ತಿ ಕೂಡಿಸಿ ಪುಡಿಮಾಡಿ ತಿನ್ನಲು ಕೊಡುವರು. ಇಂತಹ ಆಹಾರ ತಿನ್ನುವದರಿಂದ ಸೊಂಟಕ್ಕೆ ಶಕ್ತಿಬರುತ್ತದೆ, ಸ್ತನದ ಬೆಳವಣಿಗೆ, ಶರೀರಕ್ಕೆ ನುಣುಪು ಬರುತ್ತದೆ ಎಂದು ಹೇಳುತ್ತಾರೆ. ಸುತ್ತಮುತ್ತಲಿನ ತಮ್ಮ ಸಮುದಾಯದವರು ಸಹ ಸಿಹಿ ಅಡುಗೆ ಮಾಡಿ ತಂದು ಉಣಬಡಿಸುವರು.

ಇವರಲ್ಲಿ ಐದು ಅಥವಾ ಏಳು ದಿನದಲ್ಲಿ ಸೂತಕ ಕಳೆಯುವುದು ಕಂಡುಬರುತ್ತದೆ. ಅಂದು ತಮ್ಮ ಗುಡಾರವನ್ನು ಸಾರಿಸಿ, ಗೋಮೂತ್ರ ಪ್ರೋಕ್ಷಿಸಿಕೊಳ್ಳುವರು. ಅಂದು ಆ ಹುಡುಗಿಗೆ ಸ್ನಾನ ಮಾಡಿಸಿ ಹನುಮಪ್ಪನ ಗುಡಿಗೆ ಹೋಗಿ ಎಣ್ಣೆಹಾಕಿ ದೀಪ ಹೊತ್ತಿಸಿ ಬರುತ್ತಾಳೆ. ಇನ್ನು ಕೆಲವು ಕಡೆ ಅವಳ ಸೋದರಮಾವ ಅವಳ ಮುಖದ ಮುಂದೆ ಕೋಳಿಯ ಕುತ್ತಿಗೆಯನ್ನು ಕೊಯ್ಯುವನು. ಕೆಲವರು ಹುಡುಗಿಗೆ ಸ್ನಾನ ಮಾಡಿಸಿ ಸರಾಯಿ ಅಂಗಡಿಗೆ ಕರೆದುಕೊಂಡು ಹೋಗಿ ಅವಳು ಕುಡಿದರೆ ಕುಡಿಸಿ ಇಲ್ಲವಾದರೆ, ಅವಳ ಮುಖಕ್ಕೆ ಪ್ರೋಕ್ಷಿಸಿ ತಾವೆಲ್ಲ ಕುಡಿದು ಬರುತ್ತಾರೆ. ಅಲ್ಲಿಂದ ಜೋಪಡಿಗೆ ಬಂದು ಆಮೇಲೆ ಗಂಗಾಳ-ತಂಬಿಗೆ, ಕಸಬರಿಗೆ ಮುಟ್ಟಿಸಿಕೊಳ್ಳುವರು. ನಂತರ ಅವಳಿಗೆ ಸಾಯಂಕಾಲ ಮಾಂಸದ ಆಹಾರ ಸಿದ್ಧಪಡಿಸಿ ಸುತ್ತ ಮುತ್ತಲಿನ ಕುಲಸ್ತರಿಗೆ ಊಟ ಮಾಡಿಸಿ, ಸರಾಯಿ ಕುಡಿಸಿ ಕಳುಹಿಸಬೇಕು. ರಸಜ್ವಾಲೆಯಾಗುವದಕ್ಕೆ ಮೊದಲೇ ಮದುವೆ ಆಗಿದ್ದರೆ ಗಂಡನ ಕಡೆಯವರು ಎರಡು ಭಾಗ

ಹುಡುಗಿಯ ತಂದೆಯದು ಒಂದು ಭಾಗ ಅಂದಿನ ಖರ್ಚನ್ನು ಭರಿಸಬೇಕು. ಮದುವೆಯಾದ ಮತ್ತು ಮದುವೆಯಾಗದ ಹೆಣ್ಣು ಮಕ್ಕಳು ಸಹ ಮೂರು ದಿನ ಗುಡಾರದ ಹೊರಗಡೆ ಇರಬೇಕು. ಊಟದ ತಾಟು, ತಂಬಿಗೆ ಸಹ ಪ್ರತ್ಯೇಕ ವಾಗಿರುವವು. ಈ ಅವಧಿಯಲ್ಲಿ ಭಿಕ್ಷೆಗೆ ಹೋಗುವಂತಿಲ್ಲ.

ಸಾವು : 'ಜಾತಸ್ಯಂ ಮರಣಂ ಧೃವಂ' ನಿಸರ್ಗದಲ್ಲಿ ಜನಿಸಿದ ಪ್ರತಿಯೊಂದು ಜೀವಿಗೂ ಹುಟ್ಟು ಎಷ್ಟು ಸಹಜವೊ ಸಾವೂ ಕೂಡ ಅಷ್ಟೇ ಸಹಜವಾದದ್ದು. ಹುಟ್ಟು ಕೆಲವೊಮ್ಮೆ ಬೇಕೆಂದರೆ ಬೇಕು. ಸಾವು ಮಾತ್ರ ಬೇಡವೆಂದರೂ ಬೇಕು. ಮಾನವನ ಜೀವಿತದ ಅವಧಿಯಲ್ಲಿ ಬೇರೆ ಬೇರೆ ಸಂದರ್ಭದಲ್ಲಿ ಮಾಡುವ ವಿವಿಧ ಕ್ರಿಯಾಚರಣೆಗಳು ಎಷ್ಟು ಮುಖ್ಯವೋ, ಆತ ಸತ್ತ ನಂತರ ಮಾಡುವ ಕ್ರಿಯಾಚರಣೆಗಳೂ ಅಷ್ಟೇ ಮುಖ್ಯ. ಕಾರಣ ಪಂಚ ಭೂತ ಗಳಿಂದಾದ ದೇಹ ಪಂಚಭೂತಗಳಿಗೇ ಒಪ್ಪಿಸುವದಲ್ಲದೆ, ದೇಹದಿಂದ ಹೊರಬಂದ ಆತ್ಮಕ್ಕೆ ಉತ್ತಮ ನೆಲೆಯನ್ನು ತೋರಿದಂತಾಗುತ್ತದೆಂಬ ವಿಶ್ವಾಸ. ಅಲ್ಲದೇ ಅದೊಂದು ನಿರಂತರ ಆಚರಣೆ. ಇದು ವ್ಯಕ್ತಿಯೊಂದಿಗಿನ ಜಗತ್ತಿನ ಸಂಬಂಧವನ್ನು ಕೊನೆಗೊಳಿಸುತ್ತದೆ.

ಈ ಸಮುದಾಯದಲ್ಲಿನ ರೂಢಿಯೆಂದರೆ ವ್ಯಕ್ತಿ ಸತ್ತನೆಂಬ ಸುದ್ದಿ ತಿಳಿದ ತಕ್ಷಣ ಸಮುದಾಯದ ಸುತ್ತಲಿನ ಜನರೆಲ್ಲರು ವೃತ್ತಿಯನ್ನು ತೊರೆದು ಅಲ್ಲಿ ಸೇರುವರು. ಮದುವೆ ಯಾದ ಗಂಡಸು ಸತ್ತರೆ ಹೆಂಡತಿಯ ಎಡ ಕೈಯಿಂದ ಎಣ್ಣೆಯನ್ನು ಹಚ್ಚಿಸ್ನಾನ ಮಾಡಿಸುತ್ತಾರೆ. ನಂತರ ಬಿಡಾರದ ಮುಂದಿನ ಗುಂಜಿಗೆ ಆನಿಸಿ ಪದ್ಮಾಸನದಲ್ಲಿ ಕೂಡಿಸಿ ಕೈಯಲ್ಲಿ ವಿಭೂತಿ ಉಂಡೆಯನ್ನು ಬಾಯಿಯಲ್ಲಿ ರುದ್ರಾಕ್ಷಿಯನ್ನು ಇಡುವರು. ಪಕ್ಕದಲ್ಲಿ ದೀಪ ಮೂಡಿಸಿ ಬತ್ತಿ ಹಚ್ಚುವರು.

ಸತ್ತ ಸುದ್ದಿಯನ್ನು ಹರಿಜನ ವಡ್ಡರಂತಹ ಕೆಳವರ್ಗದವರಿಂದ ಕಳುಹಿಸುವ ಹಾಗಿಲ್ಲ. ಆಕಸ್ಮಾತ್ ಕಳುಹಿಸಿದರೆ ಬರಬೇಕಾದವರು ಬರುವುದಿಲ್ಲ. ಮತ್ತು ಪಂಚಾಯಿತಿಗೆ ಹಾಕುವರು. ಸತ್ತ ಸುದ್ದಿಯನ್ನು ಮುಖಾ ಮುಖಿಯಾಗಿ ಹೇಳುವ ಹಾಗಿಲ್ಲ. ಸರಾಯಿ ಅಂಗಡಿಯಲ್ಲಿಯೋ, ಜಾತ್ರೆಯಲ್ಲಿಯೋ, ಸಂತೆಯಲ್ಲಿಯೋ ಕರೆದುಕೊಂಡು ಹೋಗಿ ತಿಳಿಸ ಬೇಕು. ಹೀಗೆ ತಿಳಿಸುವುದರಿಂದ ಸುದ್ದಿ ಕೇಳುವ ವ್ಯಕ್ತಿಗೆ ಭಯ-ದುಗುಡ ಆಗದಿರಲೆಂದು ಇರಬಹುದು. ಮುಖ್ಯವಾದ ವ್ಯಕ್ತಿಗಳು ಬರುವವರಿದ್ದರೆ ಶವವನ್ನು ರಾತ್ರಿ ಇಟ್ಟುಕೊಳ್ಳುತ್ತಾರೆ. ಇಂತಹ ರಾತ್ರಿಯ ಸಮಯದಲ್ಲಿ ರಾತ್ರಿಯೆಲ್ಲಾ ಭಕ್ತಿ ಗೀತೆಗಳನ್ನು ಹಾಡುತ್ತಾ ಭಜನೆ ಮಾಡುವರು.

ಇವರಲ್ಲಿ ಶವವನ್ನು ಹೂಳುವ ಪದ್ಧತಿ ರೂಢಿಯಲ್ಲಿದೆ. ಅಲೆಮಾರಿ ಬದುಕನ್ನು ಸಾಗಿಸುವ ಇವರ ವ್ಯಕ್ತಿಸತ್ತರೆ ಅದೇ ಊರಿನಲ್ಲಿ ಜಂಗಮರನ್ನು ಹೂಳುವ ಸ್ಮಶಾನದಲ್ಲಿಯೇ ಹೂಳುತ್ತಾರೆ. ಹೆಣ ಹೂಳಲು ಕುಣಿಯನ್ನು ತಾವೆ ತೋಡಿಕೊಳ್ಳುವರು. ಕುಣಿಯನ್ನು ಚೌಕಾಕಾರ ವಾಗಿ ತೆಗೆಯುತ್ತಾರೆ. ಅಳತೆ ಇಷ್ಟೇ ಇರಬೇಕೆಂದಿಲ್ಲ. ಹೆಣವನ್ನು ಕುಳ್ಳಿರಿಸಲು ಎಷ್ಟು ಸ್ಥಳಬೇಕೋ ಅಷ್ಟು ಅಂದಾಜಿನಲ್ಲಿ ತೆಗೆಯುತ್ತಾರೆ. ಕುಣಿ ತೆಗೆಯುವಾಗ ಮನುಷ್ಯ ಕುಳಿತರೆ

ತಲೆ ಎಲ್ಲಿ ಬರುತ್ತದೆಯೋ, ಅಲ್ಲಿ ತಲೆ ಕೂರುವಷ್ಟು ಗೂಡು ಬಿಟ್ಟಿರುತ್ತಾರೆ. ಹೆಣವನ್ನು ಹೊತ್ತುಕೊಂಡು ಹೋಗಲು ಒಂದು ಹಳೆಯ ಕೌದಿಗೋ ಅಥವಾ ಗೋಣಿಚೀಲಕ್ಕೋ ಅದರ ಹಿಂದಿನ ಮತ್ತು ಮುಂದಿನ ಅಂಚನ್ನು ಕತ್ತಿಗೆಗೆ ಹೊಲಿಯುತ್ತಾರೆ. ನಾಲ್ಕು ಮೂಲೆಗಳಿಗೆ ಹಿಡಿದುಕೊಳ್ಳಲು ಕಟ್ಟಿಗೆಗಳನ್ನು ಹೊರಬಿಟ್ಟಿರುತ್ತಾರೆ. ಇದನ್ನು ಗಳ ಎಂದು ಕರೆಯುತ್ತಾರೆ.

ಬರುವ ಬಂಧುಗಳೆಲ್ಲಾ ಬಂದ ಮೇಲೆ ಶವವನ್ನು ಸ್ಮಶಾನಕ್ಕೆ ಒಯ್ಯಲು ಏರ್ಪಾಡು ಮಾಡುತ್ತಾರೆ. ಗಳದಲ್ಲಿ ಹೆಣವನ್ನು ಕೂಡಿಸಿ, ನಾಲ್ಕು ಮೂಲೆಗಳಲ್ಲಿ ಹಿಡಿದುಕೊಂಡು ಹೋಗುವರು. ಶವ ಯಾತ್ರೆಯಲ್ಲಿ ಹೆಂಡತಿ ಸತ್ತರೆ ಗಂಡ ಮುಂದೆ, ಗಂಡ ಸತ್ತರೆ ಹಿರಿಯ ಪುತ್ರ ಮುಂದೆ ನಡೆಯುತ್ತಾರೆ. ವಿಧವೆ ಸತ್ತರೆ ಸಣ್ಣಮಗ ಮುಂದೆ ನಡೆಯಬೇಕು. ಒಬ್ಬ ಕುಲಸ್ಥ ಜಂಗಮ ಜಾಗಟೆ ಬಾರಿಸುತ್ತಾ ಗಂಟೆಯ ಶಬ್ದ ಮಾಡುತ್ತಾ ಶಂಖ ಊದುತ್ತಾ ಹರ ಹರಾ ಶಿವ ಶಿವಾ ಮಹದೇವ ಅನ್ನುತ್ತಾ ಶವದ ಮುಂದೆ ಸಾಗುತ್ತಾನೆ. ಹಿಂದೆ ಸಂಸ್ಕಾರಕ್ಕೆ ಬರುವವರ ಜಾತ್ರೆ ಬರುತ್ತಿರುತ್ತದೆ. ಸ್ಮಶಾನ ಸಮೀಪಿಸುತ್ತಿದ್ದಂತೆಯೇ ಒಂದು ಸ್ಥಳದಲ್ಲಿ ಶವವನ್ನು ಇಳಿಸುತ್ತಾರೆ. ಇದನ್ನು ದಿಂಪುಡುಕಳ್ಳಂ ಎಂದು ಕರೆಯುತ್ತಾರೆ. ಅಲ್ಲಿ ಹೆಂಡತಿ, ಮಕ್ಕಳು, ಬಂಧುಗಳು ಹೆಣದ ಬಾಯಿಯಲ್ಲಿ ನೀರು ಬಿಡುವರು. ಬಹುಶಃ ಇದೇ ಅಂತಿಮ ದರ್ಶನವೆಂದು ಮುಖ ನೋಡಲು ಮತ್ತು ಹಿಂದೆ ಇರುವ ನಿಶಕ್ತರು ಬಂದು ಗುಂಪಿನಲ್ಲಿ ಸೇರಲಿ ಎಂದು ಇರಬಹುದು. ಎಲ್ಲರು ಬಂದ ಮೇಲೆ ಮತ್ತೆ ಹೆಣವನ್ನು ಹೊತ್ತು ಮುಂದೆ ಸಾಗುವರು. ಸ್ಮಶಾನ ಬಂದ ಮೇಲೆ ದಾಯಾದಿಗಳು ಎಲ್ಲರೂ ಕುಣಿಯ ಸುತ್ತು ಮೂರು ಸುತ್ತು ಪ್ರದಕ್ಷಿಣೆ ಮಾಡಿ, ಮೊದಲೆ ಕುಣಿಯಲ್ಲಿ ಕೆಳಗಡೆ ಅಮರೇ ತಪ್ಪಲು ಹೂಗಳನ್ನು ಹಾಕುವರು. ಅದರಲ್ಲಿ ಉಪ್ಪು ಸಹ ಹಾಕುವರು. ಶವದ ಮೇಲಿದ್ದ ಬಟ್ಟೆ, ಹೂವು ತೆಗೆದು ಕುಣಿಯ ಹೊರಗಡೆ ಹಾಕುವರು. ಉತ್ತರಾಭಿಮುಖವಾಗಿ ಹೆಣವನ್ನು ಕುಣಿಯಲ್ಲಿ ಕೂಡಿಸಿ ಹಿಂದೆ ತಲೆ ಇಡಲು ಮಾಡಿದ ಜಾಗದಲ್ಲಿ ತಲೆ ಇಡುವರು. ಒಂದು ಹಿತ್ತಾಳೆ ಚೆಂಬಿನಲ್ಲಿ ತುಂಬಿದ ನೀರು ತಂದಿರುತ್ತಾರೆ. ಅದರಲ್ಲಿ ವಿಭೂತಿ ಕಲಿಸಿ ದಾಯಾದಿಗಳೆಲ್ಲರೂ ಶವದ ಮೇಲೆ ಚಿಮುಕಿಸುವರು. ಎಲ್ಲರೂ ಅಂತಿಮ ದರ್ಶನ ಮಾಡಿಕೊಂಡ ಮೇಲೆ ಹಿರಿಯ ಮಗ ಮೊದಲು ಮಣ್ಣುಕೊಡುತ್ತಾನೆ. ನಂತರ ಬಂದವರೆಲ್ಲಾ ಮಣ್ಣು ಕೊಡುವರು. ಹೂಳಿ ಮಣ್ಣಿನ ದಿಬ್ಬಮಾಡಿ ಮೇಲೆ ಕಲ್ಲನ್ನು ಹಾಕುವರು. ತಮ್ಮ ಕುಲ ಗುರುವಾದ ಶಂಖ ಜಂಗಮ ಅದರ ಮೇಲೆ ನಿಂತು ಜಾಗಟೆ ಭಾರಿಸಿ, ಶಂಖ ಊದುತ್ತಾಹರಹರಾ ಶಿವಶಿವಾ ಮಹದೇವ ಎಂದು ಹರಕೆ ಕೊಡುತ್ತಾನೆ. ಸತ್ತ ವ್ಯಕ್ತಿಯ ಹಿರಿಯ ಮಗ ಕಾಲಿಗೆ ಬಿದ್ದು ಕಾಣಿಕೆ ಸಲ್ಲಿಸವನು. ಆ ಜಂಗಮ ತಲೆಯ ಮೇಲೆ ವಿಭೂತಿ ಹಾಕಿ ಹಣೆಗೆ ಭಸ್ಮ ಹಚ್ಚಿ ಆಶೀರ್ವದಿಸುತ್ತಾನೆ.

ಎಲ್ಲರೂ ಆಶೀರ್ವಾದ ತೆಗೆದುಕೊಂಡ ಮೇಲೆ ಕುಲದ ಹಿರಿಯರು ಮತ್ತು ವಿಧವೆಯರು ಸತ್ತ ವ್ಯಕ್ತಿಯ ಹೆಂಡತಿಯ ತಾಳಿಯನ್ನು ಸಮಾಧಿಗೆ ಮುಟ್ಟಿಸಿ ಹರಿಯುವರು. ಬಳೆ ಒಡೆಸುವರು. ಅವಳ ಮುಖ ಕಾಣದಂತೆ ಸೆರಗಿನಿಂದ ಮುಚ್ಚಿಕೊಂಡು ಹಿಂದಿರುಗುವರು. ಸತ್ತವರು ಹೆಣ್ಣಾಗಿದ್ದರೆ ಗಂಡ ಉಡದಾರ ಹರಿದು ಹಾಕಬೇಕು. ಗಂಡಸಿಗೆ ಹರೆ ಇರುವಾಗಲೆ

ಹೆಂಡತಿ ಸತ್ತರೆ ಸೆರಗಿನಲ್ಲಿ ಒಂದು ರೂಪಾಯಿ ನಾಲ್ಕಾಣೆ ಸೆರಗಿಗೆ ಕಟ್ಟುವರು. ಹಾಗೆ ಕಟ್ಟುವುದರಿಂದ ಇನ್ನೊಂದು ಮದುವೆ ಮಾಡಿಕೊಳ್ಳಬಹುದು. ಸ್ಮಶಾನದಿಂದ ಹಿಂದಿರುಗಿ ಬರುವಾಗ ಯಾರು ಹಿಂದುರಿಗಿ ನೋಡುವ ಹಾಗಿಲ್ಲ. ಬರುವಾಗ ದಾರಿಯಲ್ಲಿ ಕೆರೆ, ಬಾವಿಗಳಿಗೆ ಹೋಗಿ ದಾಯಾದಿಗಳಿಗೆಲ್ಲಾ ಸ್ನಾನ ಮಾಡಿ, ಎಲ್ಲರೂ ಮತ್ತೆ ಮರಣಿಸಿದವರ ಮನೆಗೆ ಬರುತ್ತಾರೆ. ಎಲ್ಲರೂ ಸೇರಿ ಸರಾಯಿ ಹೆಂಡದ ಅಂಗಡಿಗೆ ಹೋಗುತ್ತಾರೆ. ಅಲ್ಲಿ ಕುಲಾಚಾರ ನಡೆಯುತ್ತದೆ. ಸತ್ತವ್ಯಕ್ತಿಯ ಮನೆಯವರು ಮದುವೆಯಾದ ಪ್ರತಿ ಕುಟುಂಬಕ್ಕೂ ತಲಾ ಒಂದು ಸರಾಯಿ ಪಾಕೆಟು ಕೊಡಬೇಕು. ಇದರ ಖರ್ಚು ಸತ್ತ ಮನೆಯವರದು. ಕುಲಸ್ತ ಸತ್ತ ವ್ಯಕ್ತಿಯ ಹಿರಿಯ ಮಗನಿಗೆ ಸರಾಯಿ ಕುಡಿಸುತ್ತಾರೆ. ಇದನ್ನು "ವಿಷಬಾಯಿ ತೊಳೆವುದು" ಎಂದು ಕರೆಯುತ್ತಾರೆ.

ಇದಾದ ಸ್ವಲ್ಪ ಸಮಯದ ನಂತರ ಮನೆಯವನು ಒಬ್ಬ ಅಥವಾ ಇಬ್ಬರು ಸಂಬಂಧಿಕರನ್ನು ಕರೆದುಕೊಂಡು ಹೆಣ ಹೂಳಿದ ಸ್ಥಳಕ್ಕೆ ಹೋಗಿ ಮಣ್ಣು ಮಾಡಿದ ದಿಮ್ಮೆಯ ಮೇಲೆ ಹೆಂಡೆಯ ಕುಳ್ಳಿನಿಂದಲೊ, ಕಸದಿಂದಲೋ ಬೆಂಕಿ ಹಚ್ಚಿ ಬಿಡಾರಕ್ಕೆ ಬರುತ್ತಾರೆ. ಹೀಗೆ ಬೆಂಕಿ ಹಾಕುವುದುನ್ನು ಇಂಗಳ ಹಾಕುವುದು ಎಂದು ಕರೆಯುತ್ತಾರೆ. ಈ ಸಂಪ್ರದಾಯ ಒಂದು ಕಾಲದಲ್ಲಿ ಅಗ್ನಿ ಸಂಸ್ಕಾರವೆಂದು ದಹನ ಕ್ರಿಯೆ ಇದ್ದುದರ ಪ್ರತೀಕ ಇರಬಹುದು. ಮತ್ತು ಇಂಗಳ ಹಾಕುವುದರಿಂದ ಸತ್ತುಹೋದ ವ್ಯಕ್ತಿ ದೆವ್ವವಾಗಿ ಕಾಡುವುದಿಲ್ಲವೆಂದು ಇವರು ನಂಬಿದ್ದಾರೆ. ಶವಯಾತ್ರೆಗೆ ಬಂದ ಬಂಧು-ಬಳಗದವರು ಸತ್ತಸಂಬಂಧಿಕರಿಗೆ ಧೈರ್ಯ ಹೇಳಿ ಹೋಗುತ್ತಾರೆ.

ದಿನಕರ್ಮ (ಮುರುಗೂಳು): ಮೂರನೆಯದಿನ ಕರ್ಮ ಮಾಡುತ್ತಾರೆ. ಇದನ್ನು ಮುರುಗೂಳು ಅಥವಾ ದಿನ ಕರ್ಮ ಎಂದು ಕರೆಯುತ್ತಾರೆ. ಪುಂಡಿಪಲ್ಯ, ಗುನುಗು ಪಲ್ಯ, ಮೊದಲಾದ ಹಸಿರು ಪಲ್ಯ ಹರಿದು ತರುವರು, ಸತ್ತ ಜಾಗದಲ್ಲಿ ಸಂಬಂಧಿಕರಿಂದ, ಎಡಗೈಯಿಂದಲೇ ಪುಚ್ಚ ಕಿತ್ತಿ ಕೊಯ್ಯುವನು, ಸಂಬಂಧಿಕರು ಮತ್ತು ಸತ್ತ ವ್ಯಕ್ತಿಯ ಹೆಂಡತಿ ಸೇರಿ ಹೊಸ ಕಲ್ಲುಗಳಿಂದ ಒಲೆ ಮಾಡಿ, ಹೊಸ ಗಡಿಗೆಯಲ್ಲಿ ಯಾರಿಗೂ ಕಾಣದಂತೆ ಅಡುಗೆ ತಯಾರಿಸುವರು. ಅವುಗಳನ್ನೆಲ್ಲಾ ಬಟ್ಟೆಯಲ್ಲಿ ಕಟ್ಟಿಕೊಂಡು ಸತ್ತವ್ಯಕ್ತಿ ಮೊದಲು ಏನೇನು ಇಷ್ಟಪಡುತ್ತಿದ್ದ ಆ ಆಹಾರವೆಲ್ಲಾ ಇರಬೇಕು. ಬೀಡಿ ಸೇದುವ ಚಟವಿದ್ದರೆ ಬೀಡಿ ಪೆಟ್ಟಿಗೆ, ಸರಾಯಿ ಕುಡಿಯುವ ಚಟವಿದ್ದರೆ ಸರಾಯಿ ಪಾಕೆಟು ಒಂದೂ ಬಿಡದಂತೆ ಬಂಧುಗಳೆಲ್ಲರೂ ಒಂದೊಂದು ಹೊತ್ತುಕೊಳ್ಳುವರು. ಶಂಖ ಜಂಗಮ ಮುಂದೆ ಜಾಗಟೆ ಬಾರಿಸುತ್ತಾ ಶಂಖ ಊದುತ್ತಾ ಎಲ್ಲರೂ ಹೊತ್ತು ಸ್ಮಶಾನಕ್ಕೆ ಹೋಗುವರು. ಮೊದಲು ಎಲ್ಲಿ ಹೆಣ ಇಳಿಸಿದ್ದರೂ ಆ ಸ್ಥಳದಲ್ಲಿ ಸ್ವಲ್ಪ ಹೊತ್ತುನಿಂತು, ಹಿಂದಿದ್ದವರೆಲ್ಲಾ ಗುಂಪಿನಲ್ಲಿ ಸೇರಿಕೊಂಡ ಮೇಲೆ ಮುಂದೆ ಸಾಗುವರು. ಕುಣಿಯ ಹತ್ತಿರ ಬಂದು ಎಲ್ಲರೂ ಮೂರು ಸುತ್ತು ಸಮಾಧಿಯ ಸುತ್ತಸುತ್ತವರು. ಸಮಾಧಿಯಲ್ಲಿ ತಲೆ ಇರುವ ಭಾಗದಲ್ಲಿ ಸ್ವಲ್ಪ ಕುಣಿ ತೆಗೆದು ಅದರಲ್ಲಿ ತಂದ ಆಹಾರ ಪದಾರ್ಥವನ್ನೆಲ್ಲಾ ಎಡಗೈಯಿಂದ ನೀಡುವರು. ಮತ್ತೇ ಬೀಡಿ, ಸಿಗರೇಟು,

ಕಡ್ಡಿ ಪೆಟ್ಟಿಗೆ, ಸರಾಯಿ ಪಾಕೆಟು ಹಾಕಿ ಊದುಬತ್ತಿ ಹಚ್ಚಿ ಪೂಜೆ ಸಲ್ಲಿಸಿ ನಮಸ್ಕರಿಸಿ ಮನದಲ್ಲಿ ಬೇಡಿಕೊಳ್ಳುವರು. ನಂತರ ಎಲ್ಲರೂ ಸ್ವಲ್ಪ ದೂರ ಹೋಗಿ ಕುಳಿತುಕೊಳ್ಳುವರು.

ಸತ್ತುಹೋದ ವ್ಯಕ್ತಿಯ ಆತ್ಮ ಪಕ್ಷಿ ರೂಪದಲ್ಲಿ ಬಂದು ತಿಂದು ಹೋಗುತ್ತದೆ ಎನ್ನುವ ವಿಶ್ವಾಸವೇ ಇದಕ್ಕೆ ಕಾರಣ. ಪಕ್ಷಿಗಳು ಬರದಿದ್ದರೆ ಸತ್ತ ಕುಟುಂಬದ ವ್ಯಕ್ತಿಗಳು ಬಂದು ಸಮಾಧಿಯ ಪಕ್ಕಹೋಗಿ, ನಮಸ್ಕರಿಸುತ್ತಾ ಹೀಗೆ ಬೇಡಿಕೊಳ್ಳುತ್ತಾರೆ. ಆ ಕಡೆ ಈ ಕಡೆ ಎಲ್ಲಿಗೆ ಹೋಗಲಾರದಂತೆ, ಯಾರ ಮನೆಯಲ್ಲಿ ಹೋಗದಂತೆ, ಕನಸನಲ್ಲಿ ನೆರಳಿನಲ್ಲಿ ಬಾರದಂತೆ ನೇರವಾಗಿ ಸ್ವರ್ಗವನ್ನು ಸೇರಿಕೊ, ನಮ್ಮನ್ನು ಬಾದಿಸಬೇಡ ಎಂದು ಕೈ ಮುಗಿಯುತ್ತಾರೆ. ದೆವ್ವವಾಗಿ ಯಾರನ್ನು ಬಾದಿಸದೆ ಸ್ವರ್ಗಕ್ಕೆ ನೇರವಾಗಿ ಹೋಗಿ ದೇವರಾಗಬೇಕೆಂದು ಇವರ ನಂಬಿಕೆ.

ಆಹಾರವನ್ನು ಯಾವ ಪಕ್ಷಿಗಳೂ ತಿನ್ನಲು ಬಾರದೆ ಇದ್ದರೆ, ಅಂತರ್ ಪಿಶಾಚಿಯಾಗಿದ್ದಾನೆಂತಲೂ, ಮೊದಲು ಹೊಟ್ಟೆ ತುಂಬ ಊಟ ಹಾಕುತ್ತಿದ್ದರೋ ಇಲ್ಲವೋ, ಅನ್ಯಾಯದವನ್ನು ಎಂತಲೂ ತನ್ನ ಸಂಸಾರದ ಮೇಲೆ ಇನ್ನು ಮಮಕಾರ ಬಿಟ್ಟಿಲ್ಲವೆಂದೂ ತಾನು ಬದುಕಿದ್ದಾಗಿನ ನೋವು ಇನ್ನು ಮರೆತಿಲ್ಲವೆಂದೂ ತಿಳಿಯುತ್ತಾರೆ. ಬದುಕಿದ್ದಾಗ ಮನಸ್ಸಿಗೆ ಶಾಂತಿ ಇಲ್ಲದಿದ್ದರೆ ದೆವ್ವ ಆಗುತ್ತಾರೆ ಎಂದು ಬಾಧಿಸುವುದು. ಇವರಲ್ಲಿ ಹದ್ದು ಬಂದು ಆಹಾರ ಮುಟ್ಟಿದರೆ ಒಳ್ಳೆಯದೆಂದು ಕಾಗೆ ಬಂದು ಆಹಾರ ತಿಂದರೆ ಒಳ್ಳೆಯದು, ಆತ್ಮ ನೇರವಾಗಿ ಸ್ವರ್ಗಕ್ಕೆ ಹೋಗಿದೆ ಎಂದು ತಿಳಿಯುತ್ತಾರೆ.

ಯಾವುದೇ ಪಕ್ಷಿಯಾಗಲಿ ಬಂದು ಆಹಾರ ತಿಂದ ಮೇಲೆ ಆಹಾರ ಹಾಕಿದ ಕುಣಿಯ ಮೇಲೆ ಬಂಡೆ ಎಳೆದು ಮುಚ್ಚುವರು. ಗಂಡ ಸತ್ತರೆ ಹೆಂಡತಿ ಬಳೆ ಒಡೆದು, ಕುಂಕುಮ ತೆಗೆದು ವಿಧವೆಯಾಗಿ ಮಾಡುತ್ತಾರೆ. ವಿಧವೆಯರು ಅವಳಿಗೆ ಬಿಳಿಯ ಸೀರೆ ಉಡಿಸಿ ತಲೆ ತುಂಬ ಸೆರಗು ಹಾಕಿಸಿ ಮನೆಗೆ ಕರೆದುಕೊಂಡು ಹೋಗುತ್ತಾರೆ. ಮನೆಯ ಹೆಣ್ಣುಮಗಳು ಎಲ್ಲರಿಗಿಂತಲೂ ಮೊದಲೇ ಬಂದು ಸಗಣಿ ನೀರು ಹಾಕಿ, ಸಾರಿಸಿ, ಗುಡಾರವನ್ನು ಶುದ್ಧಗೊಳಿಸಿರುತ್ತಾಳೆ. ಅನ್ನ ಬೇಯಿಸಲು ಅಂಬಲಿ ಕುಡಿಸಲು ಒಲೆ ಹೊತ್ತಿಸುತ್ತಾಳೆ. ಒಂದು ಮೂಲೆಯಲ್ಲಿ ದೀಪವನ್ನು ನೋಡಿ ಕೈ ಮುಗಿಯುತ್ತಾರೆ. ದೀಪವು ಅಲ್ಲಾಡದಂತೆ ಉರಿಯುತ್ತಿದ್ದರೆ, ಮರಣಿಸಿದ ವ್ಯಕ್ತಿ ನೇರವಾಗಿ ಸ್ವರ್ಗಕ್ಕೆ ಹೋಗಿದ್ದಾನೆಂದು, ಆ ಕಡೆ ಈ ಕಡೆ ಅಲ್ಲಾಡುತ್ತಿದ್ದರೆ ದೆವ್ವವಾಗುತ್ತಾರೆಂದು ಇವರು ನಂಬಿರುತ್ತಾರೆ.

ಅದೇ ಸಮಯದಲ್ಲಿ ಭಾರ ಇಳಿಸುವ ಕಾರ್ಯಕ್ರಮ ನಡೆಯುತ್ತದೆ. ಶವವನ್ನು ಯಾರು ಯಾರು ಹೊತ್ತಿರುವರೋ ಅವರ ಹೆಗಲಿನ ಭಾರವನ್ನು ಆ ಮನೆಯವರು ಇಳಿಸುವರು. ಎಳ್ಳು, ಔಡಲ, ಕೊಬ್ಬರಿ ಎಣ್ಣೆ ಮೂರನ್ನು ಸೇರಿಸಿ ಅದರಲ್ಲಿ ಗರಕಿ ಹುಲ್ಲನ್ನು ಎದ್ದಿ ಹುಲ್ಲಿನಿಂದ ಭುಜದ ಮೇಲಿನಿಂದ ಕೆಳಗೆ ಎಣ್ಣೆಯನ್ನು ಹಚ್ಚುವರು. ಹೀಗೆ ಮೂರು ಸಲ ಹಚ್ಚುವರು, ಹೀಗೆ ಹಚ್ಚುವುದರಿಂದ ಅವರ ಭಾರ ಇಳಿಸಿದಂತಾಗುತ್ತದೆ ಎಂದು ನಂಬಿರುತ್ತಾರೆ. ಆ ಬಳಿಕ ಅವರು ಅಲ್ಲಿಯೇ ಸ್ನಾನ ಮಾಡುವರು.

**ಐದನೇ ದಿನದ ಕಾರ್ಯ (ದೇವತಾಕಾರ್ಯ):** ಐದನೆಯ ದಿನದ ಕಾರ್ಯಕ್ಕೆ ಸ್ಮಶಾನಕ್ಕೆ ಹೋಗುವುದಿಲ್ಲ. ಎಲ್ಲಾ ಕಾರ್ಯಗಳನ್ನು ತಮ್ಮ ಬಿಡಾರದ ಹತ್ತಿರವೇ ನೆರವೇರಿಸುತ್ತಾರೆ. ಅಂದು ರಾತ್ರಿ ಸುಮಾರು ಒಂಬತ್ತರಿಂದ ಹತ್ತು ಗಂಟೆಯ ಒಳಗೆ ಮಾಡುತ್ತಾರೆ. ಸುಡುಗಾಡಿನ ದಾರಿಯ ಕಡೆ ದೀಪ ಆರದಂತೆ ಒಂದು ಗೂಡೂ ಕಟ್ಟಿ ಅದರಲ್ಲಿ ಎಣ್ಣೆ ಹಾಕಿ ಹಚ್ಚಿ ಉರಿಸುತ್ತಾರೆ. ಒಂದು ಹೊಸ ಮೊರದಲ್ಲಿ ಒಂದು ಪಾವಿನಷ್ಟು ಅಕ್ಕಿ, ರಾಗಿ, ಗೋಧಿ, ತೊಗರಿಬೇಳೆ, ಒಂದು ಕೆಂಪು ವಸ್ತ್ರ ಇಟ್ಟು ಪೂಜೆ ಸಲ್ಲಿಸುತ್ತಾರೆ. ನಂತರ ಈ ಮೊರವನ್ನು ಗಣಾಚಾರಿಗೆ ಕೊಟ್ಟು ತರುವಾಯ ಅವರ ಸಂಬಂಧಿಕರೆಲ್ಲರೂ ಗಣಾಚಾರಿಯ ಪಾದಗಳನ್ನು ಹಿಡಿದುಕೊಂಡು, ಸತ್ತ ವ್ಯಕ್ತಿಯ ಆತ್ಮವನ್ನು ದೇವಲೋಕಕ್ಕೆ ಕಳುಹಿಸಿ ಕೊಡುವಂತೆ ಕೇಳಿಕೊಳ್ಳುತ್ತಾರೆ. ಆ ಗಣಾಚಾರಿಯು ತನ್ನೊಂದಿಗೆ ಒಂದು ಗಂಟೆ ತಂದಿರುತ್ತಾನೆ. ಅದನ್ನು ಕೈಯಲ್ಲಿ ಹಿಡಿದುಕೊಂಡು ಅದರ ನಾಲಿಗೆ (ಲೋಲಕ)ವನ್ನು ಸತ್ತ ವ್ಯಕ್ತಿಯ ಸಂಬಂಧಿಕರೆಲ್ಲರೂ ಹಿಡಿಯುಂತೆ ಹೇಳುತ್ತಾನೆ. ಎಲ್ಲರೂ ಒಟ್ಟಿಗೆ ಹಿಡಿದಾಗ ನಿಮ್ಮಾತನನ್ನು ದೇವಲೋಕಕ್ಕೆ ಕಳುಹಿಸುತ್ತೇವೆ, ಎನ್ನುತ್ತಾ ಗಟ್ಟಿಯಾಗಿ ಹೋದ ಹೋದ ಎನ್ನುತ್ತಾ ಕತ್ತಲಿನ ಆಕಾಶದ ಕಡೆಗೆ ನೋಡುತ್ತಾನೆ. ಆಗ ಎಲ್ಲರೂ ಅವನು ನೋಡಿದ ಕಡೆಗೆ ನೋಡುತ್ತಾರೆ. ಅದಾದ ಮೇಲೆ ಶಂಖ ಜಂಗಮ ತನ್ನ ಗಂಟೆಯಲ್ಲಿ ಬೆಲ್ಲ, ವಿಭೂತಿ, ನೀರಿನಲ್ಲಿ ಮಿಶ್ರಮಾಡಿ ಎಲ್ಲರಿಗೂ ತೀರ್ಥದ ರೂಪದಲ್ಲಿ ಹಂಚುವನು. ಅವರ ಗುಡಾರಕ್ಕೂ ಸ್ವಲ್ಪ ಚಿಮುಕಿಸಿ ಸೂತಕ ಕಳೆಯುವನು. ಅಷ್ಟರಲ್ಲಿ ಅಡುಗೆ ಸಿದ್ಧವಾಗಿರುತ್ತದೆ. ಮೊದಲು ಶಂಖ ಜಂಗಮನಿಗೆ ಎರಡು ಎಡೆ ಹಾಕಿ ಉಣ ಬಡಿಸಿ ನಂತರ ಉಳಿದ ಕುಲಬಾಂಧವರಿಗೆ ಊಟ ಮಾಡಿಸುವರು. ಈ ಆಚರಣೆಯ ಶವಸಂಸ್ಕಾರಕ್ಕೆ ಹೋದವರೆಲ್ಲರೂ ಸೇರಿಸುತ್ತಾರೆ. ಇದನ್ನು ದೇವತಾಕಾರ್ಯ ಎಂದು ಕರೆಯುತ್ತಾರೆ. ಅಂದು ಊಟಕ್ಕೆ ಸಸ್ಯಹಾರ ಮಾತ್ರ ಮಾಡಿರುತ್ತಾರೆ. ಮಾಂಸಹಾರ ಇರುವುದಿಲ್ಲ.

**ವಯಸ್ಕ ಹೆಣ್ಣು ಅಥವಾ ಗಂಡು ಸತ್ತಾಗ:** ಮದುವೆಯಾಗದೆ ತಿಳುವಳಿಕೆಗೆ ಬಂದ ಹೆಣ್ಣಾಗಲಿ, ಗಂಡಾಗಲಿ ಸತ್ತರೆ ಮೇಲಿನ ಆಚರಣೆಗಳೆಲ್ಲವೂ ಮಾಡುತ್ತಾರೆ. ಆದರ ಕುಣಿಯಲ್ಲಿ ಹುಗಿಯುವಾಗ ಕುಳ್ಳಿರಿಸುವುದಿಲ್ಲ. ಅಡಿ ಮುಖ ಮಾಡಿ ಇಲ್ಲವೆ ಮುಖಮಾಡಿ ಮಲಗಿಸಿ ಮಣ್ಣು ಮುಚ್ಚುವರು.

**ಶಿಶು ಸತ್ತರೆ:** ಶಿಶು ಸತ್ತರೆ ಅರಿವೆ ಹೊದಿಸಿಕೊಂಡು, ತೋಳ ತೆಕ್ಕೆಯಲ್ಲಿ ಅಥವಾ ಹೆಗಲ ಮೇಲೆ ಹಾಕಿಕೊಂಡು ಸ್ಮಶಾನಕ್ಕೆ ಒಯ್ದು ಸಣ್ಣ ಕುಣಿ ತೋಡಿ ಮಲಗಿಸಿ ಮಣ್ಣು ಮಾಡುವರು. ಮೂರನೆಯ ದಿನ ಹಾಲು, ಹಣ್ಣುಹೊಯ್ದು ಕುಣಿಯ ಮೇಲ್ಭಾಗದಲ್ಲಿ ಸ್ವಲ್ಪ ತಗ್ಗುತೆಗೆದು ಅದರಲ್ಲಿ ಹಾಕಿ ಮೇಲೆ ಕಲ್ಲುಮುಚ್ಚಿ ಬರುವರು

**ಗರ್ಭಿಣಿ, ತೊನ್ನು ಹತ್ತಿದವರು ಸತ್ತರೆ :** ಗರ್ಭಿಣಿ ಮತ್ತು ತೊನ್ನು ಹತ್ತಿದವರು ಸತ್ತರೆ ಮೇಲೆ ಹೇಳಿದ ಆಚರಣೆಗಳನ್ನೇ ಮಾಡುತ್ತಾರೆ. ಆದರೆ ಅವರನ್ನು ಹೂಳದೇ ಬೆಂಕಿಯಲ್ಲಿ ಹಾಕಿ ಸುಡುತ್ತಾರೆ. ಇವರ ಸಂಸ್ಕಾರ ಪದ್ಧತಿಯಲ್ಲಿ ಮತ್ತು ಶೈವರಲ್ಲಿರುವ ಶವ ಸಂಸ್ಕಾರ

ಪದ್ಧತಿಗೂ ಸಾಮ್ಯತೆಯನ್ನು ಕಾಣಬಹುದು. ಆದರೆ ಪೂಜೆ ಕ್ರಿಯೆಗಳಿಗೆ ಊರ ಜಂಗಮರನ್ನು ಮತ್ತು ಬ್ರಾಹ್ಮಣರನ್ನು ಕರೆಸಿಕೊಳ್ಳುವುದಿಲ್ಲ. ತಮ್ಮಲ್ಲಿಯೇ ಇರುವ ವಿಭೂತಿ ಬಳಿಯವರು ಅಂತಹ ಸಂದರ್ಭಗಳಲ್ಲಿ ಪ್ರಮುಖ ಪಾತ್ರ ವಹಿಸುತ್ತಾರೆ.

**ಧಾರ್ಮಿಕ ವಿಧಿ-ವಿಧಾನಗಳು, ದೇವರು ಧಾರ್ಮಿಕ ಕೇಂದ್ರ,**

ಅಲೆಮಾರಿ ಬುಡ್ಗ ಜಂಮರು ತಾವು ವಾಸಿಸುವ ಸ್ಥಳದಲ್ಲಿ ಧಾರ್ಮಿಕ ವಿಧಿವಿಧಾನಗಳನ್ನು ನೆರವೇರಿಸುತ್ತಾರೆ. ಆಯಾ ಗೋತ್ರ (ಬೆಡಗಿನವರು) ದೇವರು ಪೂಜೆ ಮಾಡುವ ದೇವರುಗಳಿಗೆ ವಾರದ ಒಂದು ದಿನ ವಿಶೇಷವಾಗಿ ಪೂಜೆ ಮಾಡುತ್ತಾರೆ. ಸಮುದಾಯದವರು ಗಂಗಮ್ಮ, ಈಶ್ವರ, ಮಾರೆಮ್ಮ ಗುರುಮೂರ್ತಿ, ಮೌನೇಶ್ವರ, ಸಂಕೂಳ್ಳ ಮತ್ತು ದೇಶ ಮಾರೆಮ್ಮ ಸತ್ಯಲಮ್ಮ ಮುಂತಾದ ದೇವರಗಳನ್ನು ಪೂಜಿಸುತ್ತಾರೆ. ದಕ್ಷಿಣ ಕರ್ನಾಟಕದ ಆಂಧ್ರ ಗಡಿಭಾಗ ದಲ್ಲಿ ಬುಡ್ಗಜಂಗಮರು ಹೆಚ್ಚಾಗಿ ಕೈವಾರಯೋಗಿನಾರಾಯಣ ತಾತರವರ ಪೂಜೆಯನ್ನು ಸಹ ನಿರ್ವಹಿಸುತ್ತಾರೆ. ಈ ಜನಾಂಗದರಿಗೆ ತಮ್ಮದೇ ಆದ ಯಾವುದೇ ಧಾರ್ಮಿಕ ಕೇಂದ್ರಗಳು ಇರುವುದಿಲ್ಲ. ಸ್ಥಳೀಯ ದೇವಾಲಯಗಳಿಗೆ ವಾರ್ಷಿಕ ಒಂದೆರಡು ಬಾರಿ ಸಂದರ್ಶಿಸಿ ದೇವರ ಕೃಪೆಗೆ ಪಾತ್ರರಾಗುತ್ತಾರೆ.

ಇಂತಹ ನಂಬಿಕೆಗಳನ್ನು ಗುರುತಿಸಿ ಕುಲದೇವತೆಗಳು, ಮಾತೃ ದೇವತೆಗಳು, ಸಂತಾನ ದಯಪಾಲಿಸುವ ದೇವರುಗಳು, ರೋಗ ನಿವಾರಿಸುವ ದೇವರುಗಳು ಈ ಆರಾಧನೆಗಳನ್ನು ಅನುಕರಿಸಿ, ದೇವತಾರಾಧನೆ ಮತ್ತು ಪ್ರೇತಾರಾಧನೆ ಎಂದು ವಿಭಾಗಿಸಿಕೊಳ್ಳಲಾಗಿದೆ.

**ದೇವತಾರಾಧನೆ:** ಈ ಸಮುದಾಯದಲ್ಲಿ ಧಾರ್ಮಿಕ ಭಾವನೆ ಕುಲದೈವದ ಪಾತ್ರ ಬಹು ಮುಖ್ಯವಾಗಿದೆ. ಇವರ ಕುಲದೈವ ಜಂಬಲಮ್ಮ ಸುಂಕ್ಲಮ್ಮ, ಜಂಬ್ಲಮ್ಮ ಭಂಡಾರದ ಭರಣಿ ಯಲ್ಲಿರುವಳೆಂದು, ಸುಂಕ್ಲಮ್ಮ ಕುಂಕುಮ ಭರಣಿಯಲ್ಲಿರುವಳೆಂದು ನಂಬಿದ್ದಾರೆ. ಈ ದೇವತೆ ಗಳನ್ನು ಮನೆಯಲ್ಲಿ ವರ್ಷಕ್ಕೆ ಒಂದು ಸಾರಿ ಮತ್ತು ಮನೆಯಲ್ಲಿ ಮದುವೆ ನಡೆಯುವ ಪ್ರತಿ ಸಾರಿಯೂ ಆಚರಿಸುತ್ತಾರೆ.

**ಜಂಬಲಮ್ಮಳ ಪೂಜೆ :** ಮದುವೆಯ ಮುಂಚೆ ಒಂದು ಮಂಗಳವಾರ ಬೆಳಕರಿಯುವ ಮೊದಲು ಯಾರು ನೋಡದ ಹಾಗೆ ಹಾವಿನ ಹುತ್ತದ ಮಣ್ಣನ್ನು ತಂದು ಒಂದು ಗೊಂಬೆ ಯನ್ನು ಮಾಡಿ ಯಾವುದಾದರೂ ಒಂದು ಜಂಬೆಯ ಗಿಡಕ್ಕೆ ಮಾವಿನ ಎಲೆ, ಬಾಳೆಯ ಎಲೆಯ ತಳಿರು ಕಟ್ಟಿ ಆ ಗಿಡಕ್ಕೆ ಕೆಮ್ಮಣ್ಣು-ಸುಣ್ಣದ ಪಟ್ಟೆಯನ್ನು ಬರೆದು ಆ ಗಿಡದ ಮುಂದೆ ಹುತ್ತದ ಮಣ್ಣಿನಿಂದ ಮಾಡಿದ ಬೊಂಬೆಯನ್ನಿಟ್ಟು, ಅದರ ಮುಂದೆ ಗೆಂಡಾ ದೀಪವನ್ನಿಟ್ಟು ಅದರಲ್ಲಿ ತುಪ್ಪವನ್ನಾಕಿ ದೀಪ ಮೂಡಿಸುತ್ತಾರೆ. ಆ ಬೊಂಬೆಗೆ ಅರಿಶಿಣ, ಕುಂಕುಮ ಹಚ್ಚಿ, ಊದುಬತ್ತಿ ಹಚ್ಚಿ, ಕಾಯಿ ಒಡೆದು ನಂತರ ಆ ಬೊಂಬೆಯ ಮುಂದೆ ಅವರ ಶಕ್ತಾನುಸಾರ ಬೇಟೆ ಕಡಿದು, ಕಾಲನ್ನು ಕಡಿದು ಅಡ್ಡಲಾಗಿ ಬಾಯಿಯಲ್ಲಿ ಇಟ್ಟು, ಬೊಂಬೆಯ ಮುಂದಿಡುತ್ತಾರೆ. ಅದರಲ್ಲಿರುವ ಕೊಬ್ಬನ್ನು ತೆಗೆದು ಗಂಡಾ ದೀಪದಲ್ಲಿ ಹಾಕಿ ಉರಿಸುತ್ತಾರೆ.

ಆಮೇಲೆ ಅಡುಗೆ ಮಾಡಿಸಿ ಬಂಧು ಬಾಂಧವರಿಗೆಲ್ಲಾ ಊಟ ಹಾಕಿಸುವರು. ಇದನ್ನು ಜಂಬಲಮ್ಮಳ ಪೂಜೆ ಎಂದು ಕರೆಯುತ್ತಾರೆ.

**ಸುಂಕ್ಲಮ್ಮಳ ಪೂಜೆ :** ಜಂಬೆಯ ಗಿಡಕ್ಕೆ ಕೆಮ್ಮಣ್ಣು ಸುಣ್ಣದ ಪಟ್ಟಿ ಬಳಿದು ಅದಕ್ಕೆ ತೋರಣ ಕಟ್ಟಿ ಒಂದು ಹೊಸ ಮಗಿಯಲ್ಲಿ ಬೆಲ್ಲದ ನೀರು ಹಾಕಿ ಮೇಲೆ ತುಂಬಿದ ಕಾಯಿಯನ್ನು ಇಟ್ಟು, ಅದರ ಮೇಲೆ ಒಂದು ಕುಪ್ಪಸದ ಕಣ ಹಾಕಿ, ಗೋಧಿ ಹಿಟ್ಟಿನಿಂದ ಗಂಡಾ ದೀಪ ಮಾಡಿ ಅದರಲ್ಲಿ ತುಪ್ಪ ಹಾಕಿ ದೀಪ ಮೂಡಿಸುತ್ತಾರೆ. ನಂತರ ಆ ಮಗಿಗೆ ವಿಭೂತಿ, ಕುಂಕುಮ, ಅರಿಶಿಣ ಹಚ್ಚಿ ಕಾಯಿ ಒಡೆದು ಪೂಜೆ ಸಲ್ಲಿಸಿ, ಒಂದೇ ಬೇಟೆ ಕಡಿಯುವರು. ನಂತರ ಒಂದು ಕಾಲು ಕಡಿದು ಅದರ ಬಾಯಲ್ಲಿಟ್ಟು ಮಗಿಯ ಎದುರಿಗೆ ಇಡುವರು. ಆ ಬೇಟೆಯ ಕೊಬ್ಬುತೆಗೆದು ಗಂಡಾದೀಪದಲ್ಲಿ ಹಾಕಿ ಉರಿಸುವರು. ಬೇಟೆಯನ್ನು ಅಡುಗೆ ಮಾಡಿ ಸುಂಗ್ಲಮ್ಮನಿಗೆ ಎಡೆ ಇಟ್ಟು ನಂತರ ಎಲ್ಲರೂ ಊಟ ಮಾಡುವರು.

ಬುಡ್ಗ ಜಂಗಮರ ಆರಾಧನೆ ಪದ್ಧತಿಯ ಎರಡು ವಿಧ ೧. ದೇವತಾರಾಧನೆ ೨. ಭೂತಾರಾಧನೆ.

**ದೈವಗಳು**

| | |
|---|---|
| ಮಾರೆಮ್ಮ | ಜಂಬುಲಮ್ಮ |
| ಸುಂಕ್ಲಮ್ಮ | ಪೆದ್ದಮ್ಮ |
| ಜಮ್ಮಕ್ಕ | ಸಾರಕ್ಕ |
| ಗಾಳೆಮ್ಮ | ಚೌಡಮ್ಮ |
| ಉಲಗಮ್ಮ | ಪೋಷಮ್ಮ |
| ಮಾರೆಮ್ಮ | ದುರ್ಗಮ್ಮ |

**ಭೂತಗಳು**

| | |
|---|---|
| ದೆವ್ವಗಳ ಪೂಜೆಯಲ್ಲಿ | ಕೊಡದ ಶಕುನ |
| ಚೆಂಬು ತಾಟುಸಕಿನೆ (ತೆಡ್ಡು) | ಕುಂಡ ಸಕಿನೆ (ಗಡಿಗೆ) |

ಶಿಷ್ಟದೇವತೆಗಳು ಶಿವ, ಆಂಜಿನೇಯಸ್ವಾಮಿ, ತಿರುಪತಿ, ವೆಂಕಟರಮಣ ಗುರುಮೂರ್ತಿ ಸ್ವಾಮಿ

ಮುಸ್ಲಿಂ ದೇವರು ಗೂಗೂಟಿ ಕುಲ್ಲಯ್ಯ ಗುಂತಕಲ್ಲು ಮಸ್ತಾನ್‌ಸ್ವಾಮಿ, ಕುದುರೆಮೋತಿ ಹುಸೇನ್ ಸ್ವಾಮಿ, ಕಡಿಮೆಳ್ಳ ಪೆದ್ದಯ್ಯ ಸ್ವಾಮಿ ಮೋಹರಂ

**ಕುಲದೇವರುಗಳ ಆಚರಣೆ :** ಶಕ್ತಿ ಮಾರೆಮ್ಮದೇವಿ ಜಂಬುಲಮ್ಮದೇವಿ ಸುಂಕ್ಲಮ್ಮದೇವಿ, ಪೆದ್ದಮ್ಮದೇವಿ ಗಾಳೆಮ್ಮದೇವಿ ಚೌಡಮ್ಮದೇವಿ ಈ ದೇವರು ಹೆಸರುಗಳ ಮೇಲೆ ಅವರು ವಾಸಿಸುವ ಬಯಲು ಜಾಗದ ಪಕ್ಕದಲ್ಲಿ ಬೇವಿನಗಿಡ ಅಥವಾ ಬನ್ನಿಗಿಡ ಇದ್ದರೆ ಅದೇ ಗಿಡಗಳನ್ನು ದೇವರೆಂದು ನಂಬಿ ಅದಕ್ಕೆ ಕುಂಕುಮ ಅರಿಶಿಣ ಇಟ್ಟು ವಿಧಿ ವಿಧಾನಗಳನ್ನು

ಅನುಸರಿಸಿ ಕುರಿ ಕೋಳಿಗಳನ್ನು ಬಲಿಕೊಟ್ಟು ಹೆಂಡ ಸಾರಾಯಿಗಳನ್ನು ಪ್ರೋಕ್ಷಿಸುತ್ತ ಹಾಗೂ ಎಲ್ಲಾ ಕುಲಬಾಂಧವರುಗಳನ್ನು ಸೇರಿಸಿ ಪೂಜೆಮಾಡುವರು.

ಅಯ್ಯೋ ಜನಗಳೇ ನಮ್ಮ ಮಾರಮ್ಮದೇವಿಗೆ ಏನು ತಂದಿರ
ಅರಿಶಿಣ ಕುಂಕುಮದಿಂದ ಹೂವುಗಳನ್ನು ತನ್ನಿ
ಹೆಂಡ ಬೆಲ್ಲದಿಂದ ಪೂಜೆಯನ್ನು ಮಾಡುವೆವು ॥ ಅಯ್ಯೋ ॥
ಕೋಳಿ ಹುಂಜಗಳನ್ನು ಬಲಿತ ಕುರಿಗಳನ್ನು
ದೇವಿಗೆ ನೈವೇಧ್ಯ ಮಾಡಲು ತನ್ನಿ ॥ ಅಯ್ಯೋ ॥

ಕೆಲವು ಬೆಡಗಿನ ಇದೇ ಸಮುದಾಯದವರು ಪ್ರಾಣಿಗಳನ್ನು ಪೂಜಿಸುತ್ತಾರೆ. ಉದಾಹರಣೆಗೆ ಸಿರುವಾಟವಾಳ್ಳ ಬೆಡಗಿನವರು ಆಮೆಯನ್ನು ಪೂಜಿಸುತ್ತಾರೆ. ಆಮೆ, ಅವರ ಮನೆದೇವರು. ರೇವಲ್ಲ ಬೆಡಗಿನವರು ವರಹವನ್ನು ಪೂಜಿಸುತ್ತಾರೆ. ಮುಗ್ಗ, ಬೆಡಗಿನವರು ನರಿಯನ್ನು ಪೂಜಿಸುತ್ತಾರೆ. ಅವರು ಯಾವತ್ತು ನರಿಯನ್ನು ತಿನ್ನುವುದಿಲ್ಲ.

ಬಾಪನಿಂಟಿ ಯಲ್ಲಮ್ಮ ಬ್ರಾಹ್ಮಣ ಮನೆದೇವರು ಈ ದೇವತೆಗೆ ಯಾವತ್ತು ಕುರಿ ಕೋಳಿ ಬಲಿಕೊಡುವುದಿಲ್ಲ. ಬೆಳ್ಳಿಯ ಮುಖವಾಡ ಮನೆಯಲ್ಲಿ ಇದ್ದರೆ ಪ್ರತಿ ವರ್ಷಕ್ಕೆ ಒಂದು ಸಲ ಹಲಸಂದಿಗುಗ್ಗರಿ ಸಜ್ಜೆ ಕಡುಬು ನೈವೇದ್ಯ ಮಾಡಿ ಒಂದ್ಹೊತ್ತು ಇದ್ದು ಹಣ್ಣು ಕಾಯಿಗಳಿಂದ ಸಮರ್ಪಿಸಿ ಈ ದೇವತೆಗೆ ಪೂಜೆ ಮಾಡುವಾಗ ಮನೆಯವರು ಎಲ್ಲರು ಪೂಜೆಯಲ್ಲಿ ಪಾಲ್ಗೊಳ್ಳುತ್ತಾರೆ. ಬೇರೆ ಸಮುದಾಯದ ಯಾವುದೇ ವ್ಯಕ್ತಿಗಳು ಈ ಪೂಜೆಯಲ್ಲಿ ಪಾಲ್ಗೊಳ್ಳುವಂತಿಲ್ಲ.

**ಪ್ರೇತಾರಾಧನೆ ಅಥವಾ ಭೂತರಾಧಾನೆ :** ಸತ್ತ ದೇಹದಿಂದ ಬಿಡುಗಡೆಯಾದ ಜೀವವು ಪುನರ್ಜನ್ಮವನ್ನು ತಾಳದೆ, ಬೇರೆ ಲೋಕಕ್ಕೆಲ್ಲಾ ಹೋಗದೆ ಇಲ್ಲಿಯೇ ಅಲೆದಾಡುತ್ತಿರುತ್ತದೆ ಎಂಬ ನಂಬಿಕೆ ಜೀವಾರೋಪವಾದದ್ದು ಹೀಗೆ ಬಿಡುಗಡೆಯಾದ ಆತ್ಮಗಳು ತಮ್ಮ ವಿಶಿಷ್ಟ ಶಕ್ತಿಯಿಂದಾಗಿ ತಮಗೆ ಬೇಕಾದ ಆಕಾರ ಮತ್ತು ಗಾತ್ರಗಳನ್ನು ಪಡೆದು ಅಥವಾ ಯಾರ ನ್ನಾದರೂ ಹಿಡಿದುಕೊಂಡು ತಮ್ಮ ಆಸೆಗಳನ್ನು ಪೂರೈಸಿ ಕೊಳ್ಳುಬಲ್ಲವು ಎಂಬ ನಂಬಿಕೆ ಈ ಸಮುದಾಯದವರಿಗೆ ಪರಿಚಿತ ಇಂತಹ ಆತ್ಮಗಳಿಗೆ ದೆವ್ವ, ಭೂತ, ಪ್ರೇತ, ಪಿಶಾಚಿ ಎಂದು ಕರೆಯುತ್ತಾರೆ.

ಮರಣ ಹೊಂದಿದ ವ್ಯಕ್ತಿಯ ಆತ್ಮ ತಿರುಗಿ ಮತ್ತೆ ಮನೆಯಲ್ಲಿ ಸೇರಿ ದೆವ್ವವಾಗುತ್ತದೆ. ಹೀಗೆ ಬಂದರೆ ಗುಡಾರವನ್ನು ಸುಟ್ಟುಹಾಕುವುದು ಇಲ್ಲವೆ ಊರಿನಿಂದ ಬೇರೆ ಊರಿಗೆ ಹೋಗುತ್ತಾರೆ. ದೆವ್ವ ಹಿಡಿಯಿತು. ಎಂದು ತಿಳಿದರೆ ಏತಕ್ಕಾಗಿ ಬಂದಿದ್ದೀ ಎಂದು ಕೇಳಿ ತೃಪ್ತಿ ಪಡಿಸುತ್ತಾರೆ. ಇಲ್ಲವೆ ಭೂತ, ಬಿಡಿಸುವ ವೈದ್ಯರಿಂದ ದೆವ್ವವನ್ನು ಕೊಲ್ಲಿಸುತ್ತಾರೆ. ಹೀಗೆ ಬುಡುಗ ಜಂಗಾಲರು ಎನಿಸಿಕೊಂಡ ಇವರು ಹೆಚ್ಚು ಭೂತಗಳನ್ನು ಪೂಜಿಸುವುದು ಕಂಡುಬರುತ್ತದೆ. ಸಣ್ಣ ವಯಸ್ಸಿನಲ್ಲಿ ಸತ್ತವರು, ಕೊಲೆಯಾದವರು, ರೋಗಿಷ್ಟರು, ಬಾಣಂತಿ, ತೊನ್ನು ಇದ್ದವರು ಸತ್ತರೆ ದೆವ್ವವಾಗುತ್ತಾರೆಂದು ಭಾವಿಸಿದ್ದಾರೆ. ಆದ ಕಾರಣ ಇಂತಹ ವ್ಯಕ್ತಿಗಳು

ಸತ್ತ ಸಂದರ್ಭದಲ್ಲಿ ಶವವನ್ನು ಒಯ್ಯುವುದಕ್ಕೆ ಮೊದಲು ಕುಲದ ಹಿರಿಯ ಶವದ ಕಣ್ಣಲ್ಲಿ ಸೂಜಿ ಚುಚ್ಚುತ್ತಾರೆ. ಕೆಲವು ಸಾರಿ ಕೇರು ಕಾಯಿ ಸುಣ್ಣಕಲಿಸಿ ಕಣ್ಣಿನಲ್ಲಿಡುತ್ತಾರೆ. ಹೀಗೆ ಇಡುವುದರಿಂದ ಸತ್ತವರು ದೆವ್ವವಾಗುವುದಿಲ್ಲವೆಂದು ನಂಬಿದ್ದಾರೆ.

ಗುಡಾರದ ಸುತ್ತ ಮುತ್ತಲಿನವರಿಗೆ ಯಾರಿಗಾದರೂ ಸ್ವಪ್ನದಲ್ಲಿ ಕಂಡು ನನಗೆ ಹಸಿವೆಯಾಗಿದೆ, ಒಂದು ಮುದ್ದೆನೀಡು ಎಂದು ಕೇಳಿದರೆ, ಕುತ್ತಿಗೆ ಇಸುಕಿದಂತಾದರೆ, ಕೈ ಹಿಡಿದು ಎಳೆದಂತೆ ಆದರೆ ಸತ್ತ ವ್ಯಕ್ತಿದೆವ್ವವಾಗಿದ್ದಾನೆಂದು ನಿಶ್ಚಿಯಿಸಿಕೊಳ್ಳುತ್ತಾರೆ. ಕೆಲವೊಂದು ಸಾರಿ ಸತ್ತು ಹೋದ ವ್ಯಕ್ತಿ ಕಂಡಂತೆ, ಮಾತನಾಡಿಸಿದಂತೆ, ನಿನ್ನ ತೆಗೆದುಕೊಂಡು ಹೋಗುತ್ತೇವೆ ಎಂದು ಹೇಳಿದಂತಾದರೆ ಕುಲದ ಹಿರಿಯನಿಗೆ ಫಿರ್ಯಾದಿ ಸಲ್ಲಿಸುತ್ತಾರೆ. ಕೆಲವು ಸಾರಿ ಹೊಟ್ಟೆ ನೋವು ಬರುತ್ತದೆ. ಎದೆ ಹಿಡಿದಂತಾಗುತ್ತದೆ. ಒಂದೊಂದು ಸಲ ಮನಸ್ಸು ಸ್ಥಿಮಿತದಲ್ಲಿ ಇಲ್ಲದಂತೆ ಹುಚ್ಚುಚ್ಚಾಗಿ ಮಾತನಾಡುವುದು ಬೇರೆ ಬೇರೆ ಭಾಷೆಯಲ್ಲೂ ಸಹ ಮಾತನಾಡುತ್ತಾರೆ. ಅಂತಹ ಸಂದರ್ಭದಲ್ಲಿ ಕುಲದ ಹಿರಿಯ ಯಾವ ಕುಟುಂಬದ ವ್ಯಕ್ತಿ ಭೂತವಾಗಿರುತ್ತಾನೋ, ಆ ಮನೆಯ ವ್ಯಕ್ತಿಯನ್ನು ಕರೆಯಿಸಿ ಶಾಂತಿ ಮಾಡಿಸುವಂತೆ ಹೇಳುತ್ತಾನೆ. ಆತನೂ ಕುಲದ ಹಿರಿಯರನ್ನೆಲ್ಲಾ ಸೇರಿಸಿ ಶಕುನ ನೋಡಿ ದೆವ್ವ ಯಾರದೆಂದು ತಿಳಿದುಕೊಳ್ಳುತ್ತಾರೆ.

ಶಕುನವೆಂದರೆ ಬಾದಿಸುತ್ತಿರುವ ಮನುಷ್ಯನಿಗೆ ದೆವ್ವವೋ, ದೇವರೋ ಎಂದು ತಿಳಿದು ಕೊಳ್ಳುವುದಕ್ಕೆ, ದೆವ್ವ ಅಥವಾ ದೇವರ ಹತ್ತಿರ ಮುಖಾಮುಖಿಯಾಗಿ ಮಾತನಾಡಿ ಅಭಿಪ್ರಾಯ ತಿಳಿದುಕೊಳ್ಳುವುದು. ಈ ಸಮುದಾಯವು ಈ ಶಕುನ ಒಂದು ಪ್ರತಿಷ್ಠೆಯ ಪ್ರತಿಕ್ರಿಯೆಯಾಗಿ ಆಚರಿಸುತ್ತಾರೆ. ಅಂತಹ ಶಕುನಗಳು ಅನೇಕ ರೀತಿಯಾಗಿರುತ್ತದೆ.

**ಶಕುನ ಹಿತ್ತಾಳೆ ಚಂಬು ಶಕುನ :** ಭೂತ ಪ್ರೇತದಿಂದ ಬಾಧಿಸುವವರ ಗುಡಾರದ ಮುಂದೆ, ಗಜಸ್ಥಳದಲ್ಲಿ ಸಗಣಿಯಿಂದ ಸಾರಿಸಿ, ಆ ಸ್ಥಳದಲ್ಲಿ ಸ್ವಲ್ಪ ಜೋಳ ಹಾಕಿ ಅದರ ಮೇಲೆ ನೀರು ತುಂಬಿದ ಹಿತ್ತಾಳೆ ಚಂಬನ್ನು ಇಟ್ಟು ಈ ಸಮುದಾಯದ ಒಬ್ಬ ಯಜಮಾನರು ಮುಖ ತೊಳೆದು ಅರಿಶಿಣ, ಕುಂಕುಮ ಹಚ್ಚಿ ಪೂಜಿಸಿ ಒಬ್ಬ ಕುಲಸ್ಥನನ್ನು ಆ ಚಂಬಿನ ಕಂಠದ ಮೇಲೆ ಕಾಲಿಟ್ಟು ತುದಿಗಾಲಲ್ಲಿ ಕುಳ್ಳಿರಿಸಿ ಎರಡು ಕೈಗಳನ್ನು ಆ ಕಡೆ ಈ ಕಡೆ ನೆಲಕ್ಕೆ ಊರಿಸಿ ಆಗ ಒಬ್ಬ ಯಜಮಾನ ಕೇಳುತ್ತಾನೆ. ನೀನು ದೇವತೆಯೋ? ದೆವ್ವವೋ? ಹೇಳು ತಾಯಿ. ಈ ಬಾಲಕನನ್ನು ಏಕೆ ಕಾಡುತ್ತೀ? ನಿನಗೆ ಏನೇನು ಬೇಕೋ ಅದು ತೆಗೆದುಕೊಂಡು ಹೋಗುವಿಯಂತೆ, ಎನ್ನುತ್ತ ಎಡಕ್ಕೆ ಬಲಕ್ಕೆ ಎಂಬ ಮಾತಿನಿಂದ ಕಂಡುಕೊಳ್ಳುತ್ತಾರೆ. ಎಡಗಡೆ ತಿರುಗಿದರೆ ದೇವರೆಂದು ಬಲಗಡೆ ತಿರುಗಿದರೆ ದೆವ್ವವೆಂದು ನಿರ್ಧರಿಸುತ್ತಾರೆ. ತಿರುಗದಂತೆ ತಟಸ್ಥವಾಗಿ ನಿಂತರೆ ಶರೀರದಲ್ಲಿ ರೋಗವಿದೆ ಎಂದು ನಂಬುತ್ತಾರೆ. ಆದರೆ ಯಾವ ಕಡೆಯಾದರೂ ಒಂದು ಕಡೆ ತಿರುಗುವುದು ಸಾಧಾರಣ.

ತಿರುಗುವುದರಿಂದ ದೇವತೆ ಎಂದು ತಿಳಿದರೆ ಅಮ್ಮ! ತಾಯಿ! ಎಲ್ಲಮ್ಮನಾ ಇಲ್ಲ ಸುಂಕ್ಲಮ್ಮನಾ ಜಂಬಲಮ್ಮನಾ? ಎಲ್ಲಮ್ಮ ಆದರೆ ಎಡಗಡೆ ತಿರುಗು ಜಂಬಲಮ್ಮ ಆದರೆ

ಬಲಗಡೆ ತಿರುಗು ಎಂದು ಕೇಳುತ್ತಾನೆ. ಎತ್ತಲೂ ತಿರಗದೆ ಇದ್ದರೆ ಮತ್ತೆ ಇಬ್ಬರ ದೇವರುಗಳ ಹೆಸರುಗಳನ್ನು ಹೇಳುತ್ತಾನೆ. ಅಷ್ಟರಲ್ಲಿ ಮನೆಯವನು ಅಮ್ಮ ನಿನಗೆ ಕೊಡುತ್ತೇನೆಂದು ಮುಡುಪು ೨೫ ಪೈಸೆ ಕಟ್ಟುತ್ತಾರೆ. ಕೈಯಲ್ಲಿ ಹಣವಿಲ್ಲದೆ ಕಾರಣ ಬರಲಾಗಲಿಲ್ಲ. ನನ್ನದು ತಪ್ಪಾಗಿದೆ ಎಂದು ದವಡೆಗೆ ಬಡಿದುಕೊಳ್ಳುತ್ತಾನೆ. ಅದಕ್ಕಾಗಿ ಕೋಪಗೊಂಡಿರುವೆಯಾ ತಾಯಿ ತಪ್ಪೋ ಒಪ್ಪೋ ಈಗ ಕೊಡುತ್ತೇನೆ ಎಂದು ಕೈ ಮುಗಿಯುತ್ತಾನೆ. ಆಗ ಕುಲದ ಹಿರಿಯ ತಾಯಿ ನಿಮ್ಮ ಮನುಷ್ಯನಿಗೆ ಚೆನ್ನಗಾ ಆಗಲಿ ಕೋಳಿಯೊ, ಜೋಡು ಕಾಯಿಯೊ ಒಡೆಸುತ್ತೇನೆ. ಒಪ್ಪಿಕೋ ಎಂದು ಕೇಳಿಕೊಳ್ಳುತ್ತಾನೆ. ಆ ಮನುಷ್ಯ ಎರಡು ದಿನದಲ್ಲಿ ಎದ್ದು ಕುಳಿತುಕೊಳ್ಳುತ್ತಾನೆ. ಆಗ ನಿನ್ನ ಮಹಿಮಾ ತೋರಿಸಿದಿ ನೋಡು ತಾಯಿ ಎಂದು ಒಪ್ಪಿಕೊಂಡ ಪ್ರಕಾರ ಕೋಳಿ, ಕುರಿ, ಬಲಿಕೊಟ್ಟು ಪೂಜಿಸಿ ತೃಪ್ತಿ ಪಡಿಸುತ್ತಾರೆ.

ದೇವತೆ ಆಗದೆ ದೆವ್ವವಾದರೆ, ಪ್ರತಿಸಾರಿ ಎರಡು ಹೆಸರು ಹೇಳಿ ತಿರುಗು ಎಂದು ಹೇಳುತ್ತಾರೆ. ಸಾಧಾರಣವಾಗಿ ಸ್ವಲ್ಪ ದಿನದ ಹಿಂದೆ ಸತ್ತಂತಹ ವ್ಯಕ್ತಿಯ ಹೆಸರೇ ಸೂಚಿಸುತ್ತದೆ. ಅನುಮಾನವಿದ್ದು ಸತ್ತವರ ಹೆಸರುಗಳನ್ನೆಲ್ಲಾ ಹೇಳುತ್ತಾರೆ. ಎಷ್ಟು ದೆವ್ವ ಹಿಡಿದಿರುತ್ತದೆಯೇ ಅಷ್ಟು ಬಲಿಕೊಡಬೇಕಾಗುತ್ತದೆ. ಹೆಂಡ, ಸರಾಯಿ ಕುಡಿಸಿ ದೇವರು ದೆವ್ವವನ್ನು ಹೀಗೆ ತೃಪ್ತಿಪಡಿಸುತ್ತಾರೆ.

**ಕೊಡದ ಶಕುನ :** ಸ್ವಲ್ಪ ಅಕ್ಕಿಯನ್ನು ರಾಸಿ ಹಾಕಿ ಅದರ ಮೇಲೆ ಕೊಡ ಅಥವಾ ಗಡಿಗೆ ಇಡುತ್ತಾರೆ. ಅದಕ್ಕೆ ಅರಿಶಿಣ, ಕುಂಕುಮ ಹಚ್ಚಿ, ಪೂಜೆ ಸಲ್ಲಿಸಿ ಕೈ ಮುಗಿಯುತ್ತಾರೆ. ಇಬ್ಬರು ಕುಲಸ್ತರು ಆ ಗಡಿಗೆಯನ್ನು ಆ ಕಡೆ ಈ ಕಡೆ ಅದಿಮಿಟ್ಟು ಬಗ್ಗಿ ನಿಂತುಕೊಳ್ಳುತ್ತಾರೆ. ಮೊದಲಿನ ಹಾಗೆ ಕುಲದ ಹಿರಿಯ ಎಡಗಡೆ, ಬಲಗಡೆ ತಿರುಗು ಎಂದು ಹೇಳುತ್ತಾರೆ. ದೇವರಾದರೆ ಎಡಗಡೆ, ದೆವ್ವವಾದರೆ ಬಲಗಡೆ ಆಮೇಲೆ ದೆವ್ವವಾದರೆ ಯಾರು ಎಂದು ಹೆಸರುಗಳನ್ನು ಹೇಳುವುದು, ದೇವರಾದರೆ ಯಾವ ದೇವರೆಂದು ಹೇಳಿ ಈ ಕಡೆ ಆ ಕಡೆ ತಿರುಗು ಎಂದು ಹೇಳುವುದು, ಉಳಿದಿದ್ದು ಮೊದಲಿನಂತೆ ನೆರವೇರಿಸುವರು.

**ಹೇನು ಶಕುನ :** ಒಬ್ಬ ಕುಲಸ್ತನಕೈಯಲ್ಲಿ ಬೂದಿ ಹಾಕುತ್ತಾರೆ. ದೆವ್ವ, ದೇವರೋ ಹಿಡಿದವರ ತಲೆಯಲ್ಲಿಂದ ಒಂದು ಹೇನು ತೆಗೆದು ಆ ಬೂದಿಯಲ್ಲಿ ಹಾಕಿ ಕಲಿಸುವರು. ಆ ಬೂದಿಯಲ್ಲಿಂದ ಹೇನು ಹೊರಗೆ ಬರುವ ದಿಕ್ಕುಗಳನ್ನು ನೋಡಿ ನಿರ್ಣಯಿಸುತ್ತಾರೆ. ದೇವತೆಯಾದರೆ ಎಡಗಡೆ ನಡೆಯಬೇಕು. ದೆವ್ವವಾದರೆ ಬಲಗಡೆಗೆ ನಡೆಯಬೇಕು ಎಂದು ಹೇನು ಹೊರಗೆ ಬರುವ ದಿಕ್ಕನ್ನು ನೋಡುತ್ತಾರೆ. ಆ ಹೇನಿನ ನಡಿಗೆಯನ್ನೇ ಜವಾಬಾಗಿ ತೆಗೆದುಕೊಳ್ಳುತ್ತಾರೆ. ಮತ್ತೊಂದು ಪ್ರಶ್ನೆಯನ್ನು ಹಾಕಿ ಆ ಹೇನನ್ನು ಬೂದಿಯಲ್ಲಿ ಕಲಿಸುತ್ತಾರೆ. ಹೊರಗೆ ಬರುವುದನ್ನೇ ನೋಡುತ್ತಾರೆ. ಆ ಶಕುನದಿಂದ ದೆವ್ವವೆಂದು ತಿಳಿದರೆ, ಹಿಡಿಯುವುದಕ್ಕೆ ಕಾರಣ, ತನಗೆ ಅನ್ಯಾಯ ಮಾಡಿದ್ದಾನೆಂದು, ತನ್ನ ಶತ್ರುವಾದುದಕ್ಕೆ ಅತನ ಮೇಲೆ ಸೇಡು ತೀರಿಸಿಕೊಳ್ಳಲು ಹಿಡದಿದ್ದೇನೆಂದು ಸಾಯಿಸಿಕೊಂಡೇ ಹೋಗುತ್ತೇನೆಂದು ದೆವ್ವ ಅಭಿಪ್ರಾಯ ಪಡುತ್ತದೆಂದು ಶಕುನದಿಂದ ತಿಳಿಯುತ್ತದೆ. ಹೀಗೆ ತಿಳಿದ ಮೇಲೆ ಏನು ಬೇಕೋ ಕೇಳಿ ಶಾಂತಿ

ಮಾಡಿಸುತ್ತಾರೆ. ಬೇಟೆ ಕೇಳಿದರೆ ಬೇಟೆಯನ್ನು ಸಿಹಿ ಊಟವನ್ನು ಮಾಡಿಸಿ ಪೂಜೆ ಸಲ್ಲಿಸಿ ಆಮೇಲೆ ಎಲ್ಲರೂ ಊಟ ಮಾಡುವರು.

ಭೂತಕ್ಕೆ ಆಹಾರ : ಭೂತಕ್ಕೆ ಆಹಾರ ಹಾಕುವ ಪದ್ಧತಿ ಊರು ಬಿಟ್ಟು ಹೊರಗಡೆ ಒಂದು ಪ್ರಸಕ್ತವಾದ ಸ್ಥಳವನ್ನು ಆಯ್ದುಕೊಂಡು ಬಲಿಕೇಳಿದ ಪ್ರಾಣಿ ಕೋಳಿ, ಮೇಕೆ, ಕುರಿ, ಹಂದಿ, ಇವುಗಳಲ್ಲಿ ಕೇಳಿದಷ್ಟು ಒಂದೋ, ಎರಡೋ ತೆಗೆದುಕೊಂಡು ಬಂದು ಹೊಸ ಗಡಿಗೆಯನ್ನು ಮತ್ತು ಬೇಕಾದ ಅಡುಗೆಯ ವಸ್ತುಗಳನ್ನು ತೆಗೆದುಕೊಂಡು ಆ ಸ್ಥಳಕ್ಕೆ ಬರುತ್ತಾರೆ. ಸಾಮಾನ್ಯವಾಗಿ ಕೆರೆ, ಬಾವಿಯ ಪಕ್ಕದಲ್ಲಿಯ ಸ್ಥಳವನ್ನೇ ಆಯ್ಕೆಮಾಡಿ ಕೊಂಡಿರುತ್ತಾರೆ. ದೊಡ್ಡಗಿಡದ ಕೆಳಗಡೆಯೇ ಆಗಿರಬಹುದು. ''ಅಲ್ಲಿ ಸೀತಾಫಲ ಗಿಡದ ತಪ್ಪಲಿನಿಂದಲೋ, ಅಮರೇ ಗಿಡದ ತಪ್ಪಲಿನಿಂದಲೋ ಇವು ಸಿಗದಿದ್ದರೆ ಬೇವಿನ ಗಿಡದ ಕೊಂಬೆ ತಂದು ಅದರಿಂದ ದೆವ್ವಕ್ಕೆ ಸಣ್ಣ ಗುಡಿ ಕಟ್ಟುತ್ತಾರೆ. ಅದರಲ್ಲಿ ದೀಪ ಮಾಡಿಸುತ್ತಾರೆ. ನೆಲದ ಮೇಲೆ ಅರಿಶಿಣ, ಕುಂಕುಮದಿಂದ ಬಟ್ಟು ಇಟ್ಟು ಊದುಬತ್ತಿಹಚ್ಚಿ ಅಲ್ಲಿ ಪ್ರಾಣಿಯನ್ನು ಬಲಿ ಕೊಟ್ಟು ತೆಂಗಿನಕಾಯಿ ಒಡಯುತ್ತಾರೆ. ನಿಂಬೆ ಕಾಯಿಯನ್ನು ಕತ್ತರಿಸಿ ಇಟ್ಟು ಅನ್ನವನ್ನು ರಾಶಿ ಹಾಕಿ ಎಡೆ ಮಾಡುತ್ತಾರೆ.'' ಬಲಿಕೊಟ್ಟ ಪ್ರಾಣಿಯನ್ನು ಬೇಯಿಸಿ ಮಾಂಸದಲ್ಲಿಯ ಮುಖ್ಯ ಅವಯವಗಳನ್ನು ಎಡೆ ಅರ್ಪಿಸುತ್ತಾರೆ. ಇಂತಹ ದೇವತೆ, ದೆವ್ವಗಳಿಗೆ ಪ್ರಿಯ ಎಂದು ಭಾವಿಸಿ ಹೆಂಡ, ಸರಾಯಿ ಇಡುತ್ತಾರೆ. ಗಂಡು ದೆವ್ವವಾದರೆ ಬೀಡಿಯನ್ನು ಹಚ್ಚಿ ಮಣ್ಣಿನಲ್ಲಿ ನಿಲ್ಲಿಸುತ್ತಾರೆ. ಹೆಣ್ಣು ದೆವ್ವವಾದರೆ ಎಲೆ ಅಡಿಕೆ ಇಡುತ್ತಾರೆ.

ಎಡೆ ಸಿದ್ಧವಾದ ಮೇಲೆ ದೆವ್ವ ಹಿಡಿದವನಿಂದ ಕೈ ಮುಗಿಸುತ್ತಾರೆ. ನೀನು ಕೇಳಿದ್ದನ್ನು ಇಟ್ಟಿದ್ದೇವೆ ಚೆನ್ನಾಗಿ ತಿಂದು ತೃಪ್ತಿಹೊಂದಿ ಹೋಗಿಬಿಡು ನನ್ನನ್ನು ಈ ಬಂಧನದಿಂದ ಮುಕ್ತಿಗೊಳಿಸು ಎಂದು ಕೇಳಿದ ನಂತರ ದೆವ್ವ ಹಿಡಿದವರಿಗೆ ಎಡೆಯಲ್ಲಿಯ ಆಹಾರ ತಿನ್ನಿ ಸುತ್ತಾರೆ. ಕುಟುಂಬದವರೆಲ್ಲಾ ಊಟ ಮಾಡುತ್ತಾರೆ. ನಂತರ ಬಂದ ಕುಲಸ್ತರೆಲ್ಲಾ ಊಟ ಮಾಡುತ್ತಾರೆ. ಉಳಿದಿದ್ದು ಮನೆಗೆ ಒಯ್ಯುವ ಹಾಗಿಲ್ಲ. ಒಯ್ದರೆ ಹಿಂದೆ ಬರುತ್ತದೆಂದು ನಂಬುಗೆ ಇದೆ. ಮಾಡಿದ್ದೆಲ್ಲಾ ಉಳಿಯದಂತೆ ಎಲ್ಲರನ್ನು ಕರೆದು ಊಟ ಮಾಡಿಸುತ್ತಾರೆ. ಊಟ ಮಾಡಿದ ಮೇಲೆ ಎಲ್ಲರೂ ಸ್ವಲ್ಪ ದೂರ ಹೋಗಿ ನಿಂತುಕೊಂಡು ಕುಲದ ಹಿರಿಯ ಹಿಂದಕ್ಕೆ ತಿರುಗಿ ಮುಳ್ಳಿನ ಬೇಲಿಯನ್ನು ಹಾಕುತ್ತಾನೆ. ಹೀಗೆ ಹಾಕುವುದರಿಂದ ದೆವ್ವಕ್ಕೆ ದಾರಿ ತಪ್ಪಿ ಹಿಂದೆ ಬಾರದೆಂದು ಇವರ ಭಾವನೆ. ಅವರು ನಿಂತಲ್ಲಿ ಒಂದು ಕೊಬ್ಬರಿ ಬಟ್ಟಲನ್ನು ಒಡೆದು ಸಣ್ಣ ಸಣ್ಣ ತುಂಡು ಮಾಡಿ ಎಲ್ಲರೂ ತಿಂದು ಹೋಗಬೇಕು. ಹೀಗೆ ಮಾಡುವುದರಿಂದ ದೆವ್ವ ಅವರ ಹಿಂದೆ ಬರುವುದಿಲ್ಲ. ಅಲ್ಲಿಂದ ನೇರವಾಗಿ ಸರಾಯಿ ಅಂಗಡಿಗೆ ಹೋಗಿ ಎಲ್ಲರೂ ಸರಾಯಿ ಕುಡಿಯುತ್ತಾರೆ. ಅದರ ಖರ್ಚು ಕೂಡ ದೆವ್ವ ಬಡಿದವರದೇ, ಅಷ್ಟರಲ್ಲಿಯೇ ಅವನಿಗೆ ದೆವ್ವ ಬಿಟ್ಟು ಹೋಗಿರುತ್ತದೆ.

ಭೂತ ವೈದ್ಯನು ಒಬ್ಬೊಬ್ಬರು ಒಂದೊಂದು ವಿಧವಾಗಿ ಭೂತಗಳನ್ನು ಕೊಲ್ಲಿಸುತ್ತಾರೆ. ಕೆಲವರು ಭೂತವನ್ನು ಹಿಡಿದುಕೊಂಡು ಬಂದು ಹೊಸ ಗಡಿಗೆಯಲ್ಲಿ ಹಾಕಿ, ಅದರಲ್ಲಿ

ಗೋಧಿಹಿಟ್ಟು, ನೀರು ಹಾಕಿ ಮುಚ್ಚಳ ಗಟ್ಟಿಯಾಗಿ ಮುಚ್ಚಿ ಮೇಲೆ ಒಂದು ಬಟ್ಟೆ ಕಟ್ಟಿ ಅದನ್ನು ಚೆನ್ನಾಗಿ ಕಾಯಿಸಿ ಬೆಂದ ಮೇಲೆ ಮಸೆದು ಬೆಂಕಿಯಲ್ಲಿ ಬೇಯಿಸುತ್ತಾರೆ. ಇನ್ನೂ ಕೆಲವರು ಹುಂಜವನ್ನು ಬಲಿಕೊಟ್ಟು ಅದರ ಕಂಠದಲ್ಲಿರುವ ಸರವನ್ನು ತೆಗೆದು ಅದರಲ್ಲಿ ಭೂತವನ್ನು ಇಳಿಸಿ, ಸಣ್ಣ ಮಣ್ಣಿನ ಗಡಿಗೆಯಲ್ಲಿ ಹಾಕಿ, ಮೂತಿ ಗಟ್ಟಿಯಾಗಿ ಕಟ್ಟಿ, ಬೆಂಕಿಯಲ್ಲಿ ಬೇಯಿಸಿ ಸುಟ್ಟು ಹಾಕುತ್ತಾರೆ.

ಒಬ್ಬ ಭೂತವೈದ್ಯನು ಭೂತವನ್ನು ಸೀಸದಲ್ಲಿ ಇಳಿಸಿ, ಊರಿಗೆ ದೂರ ತೆಗೆದುಕೊಂಡು ಹೋಗಿ ಭೂಮಿಯಲ್ಲಿ ಹೂತು ಹಾಕಿಸುತ್ತಾನೆ. ಕೆಲವರು ದೆವ್ವವನ್ನು ದೇವರೆಂದು ತಿಳಿದುಕೊಂಡು ಅದನ್ನು ಶಾಂತಿಪಡಿಸುವ ಪದ್ಧತಿಯಿದೆ. ಈ ಪದ್ಧತಿ ಪೂರ್ವದ ಈಜಿಪ್ಟ್ ನಾಗರಿಕತೆಯನ್ನು ನೆನಪಿಗೆ ತರುತ್ತದೆ. ಇನ್ನು ಕೆಲವರು ದೆವ್ವವನ್ನು ಕೊಲ್ಲಿಸುತ್ತಾರೆ. ಆ ಕೆಲಸ ಮಾಡಲು ಒಬ್ಬ ಮಾಂತ್ರಿಕ ಇರುತ್ತಾನೆ. ಈತನು ಸುಡಾಗಾಡಿನಲ್ಲಿ ಹೋಗಿ ಕೊಲ್ಲಿಸಿ ಬರುತ್ತಾನೆಂದು ಹೇಳುತ್ತಾರೆ. ಭೂತ ಬಿಡಿಸುವ ವೈದ್ಯರಿದ್ದಾರೆ.

ಹಗಲು ವೇಷಗಾರರು ತಾವು ಜೀನದಲ್ಲಿ ಎಂತಹ ಬವಣೆಗಳನ್ನು ಅನುಭವಿಸುತ್ತಿದ್ದರೂ ಕಟ್ಟಿಕೊಂಡ ಹರಕೆಯನ್ನು ಮಾತ್ರ ತಪ್ಪದೇ ತೀರಿಸುತ್ತಾರೆ. ಆ ಸಮಯದಲ್ಲಿ ತಮ್ಮಲ್ಲಿ ಹಣ ಇಲ್ಲದಿದ್ದರೆ ಸಾಲ ಸೋಲ ಮಾಡಿಯಾದರೂ ತೃಪ್ತಿಪಡಿಸುತ್ತಾರೆ. ಆದರೆ ಎಲ್ಲರೂ ಆಚರಿಸುವ ಹಬ್ಬಗಳಾದ ಯುಗಾದಿ, ದಸರಾ, ಸಂಕ್ರಾತಿಗಳನ್ನು ಆಚರಿಸುವುದು ಕಂಡು ಬರುವುದಿಲ್ಲ.

'ಕಂಡ ದೇವರಿಗೆ ಕೈ ಮುಗಿಯುವಾತನೇ ಭಕ್ತ' ಎನ್ನುವ ರೀತಿಯಲ್ಲಿ ನೀರ ಕಂಡಲ್ಲಿ ಮುಳುಗುವರು. ಕಂಡ ದೇವರಿಗೆ ಕೈ ಮುಗಿಯುವರು. ಆದರೆ ತಮ್ಮ ಕಷ್ಟ ನಿಷ್ಠುರಗಳು ಮಾತ್ರ ಇಂದಿಗೂ ತೀರಿಲ್ಲ. ಇವರು ಆ ಸಮಸ್ಯೆಗಳಿಗೆ ಪರಿಹಾರ ಹುಡುಕುವ ಪ್ರಯತ್ನವನ್ನು ಸಹ ಮಾಡಿಲ್ಲ. ಏಕೆಂದರೆ ಇಷ್ಟು ದಿನ ಸ್ವಚ್ಛಂದವಾದ ಬದುಕನ್ನು ಬದುಕಿದ್ದಾರೆ. ಮೊದಲೆಲ್ಲಾ ವೇಷಗಾರಿಕೆಗೆ ರಾಜ ಮರ್ಯಾದೆಯಿದ್ದಿತು. ಅದನ್ನೇ ನಂಬಿ ಇವರು ಎಂದೂ ಮುಂದಿನ ದಿನಕ್ಕೆ ಬಚ್ಚಿಡುವುದನ್ನು ಕಲಿಯದೇ ಅಂದಿನದನ್ನು ಅಂದೇ ಕುಡಿದು ತಿಂದು ಖಾಲಿ ಮಾಡಿದರು. ಆದರೆ ಇಂದು ಆಧುನಿಕ ಮಾಧ್ಯಮಗಳಿಂದ ಇವರ ಕಲೆ ಮೂಲೆ ಗುಂಪಾಗ ಹತ್ತಿದೆ. ಬಹುಶಃ ಇಂದು ಇವರಿಗೆ ಆಧುನಿಕ ಸಮಸ್ಯೆ ದಟ್ಟವಾಗಿ ಕಾಡ ಹತ್ತಿದೆ. ಆದುದರಿಂದ ಪರ್ಯಾಯ ಬದುಕಿಗಾಗಿ ತಡಕಾಡುತ್ತಿದ್ದಾರೆ. ಇಲ್ಲಿಯವರೆಗೆ ಸರ್ಕಾರವು ಯೋಚಿಸಿರುವ ಯಾವ ಅಭಿವೃದ್ಧಿ ಕಾರ್ಯಕ್ರಮಗಳೂ ಇವರನ್ನು ಎಂದು ಕೂಡ ತಿಳಿದಿಲ್ಲ ಎಂದು ಹೇಳುತ್ತಾರೆ. ಇವರಿಗೆ ಇದ್ದ ಮೀಸಲಾತಿಯನ್ನು ಇತರೆ ಮುಂದುವರೆದ ಪಂಗಡಗಳು ಪಡೆದುಕೊಂಡಿರುವುದು ವಾಸ್ತವ ಸಂಗತಿಯಾಗಿದೆ. ಇನ್ನು ಮುಂದೆಯಾದರೂ ಈ ಸಮುದಾಯಕ್ಕೆ ಸಾಮಾಜಿಕ ನ್ಯಾಯ ದೊರೆತು ಇತರೆ ಸಮುದಾಯಗಳಂತೆ ಪ್ರಮುಖವಾಹಿನಿಗೆ ಸೇರಿಕೊಳ್ಳಬೇಕಾದ ಅನಿವಾರ್ಯತೆ ಇದೆ.

## ಹಬ್ಬಗಳು

ಬುಡ್ಗ ಜಂಗಮರು ಭಿಕ್ಷಾಟನೆ ಮಾಡುವುದೆ ವೃತ್ತಿ ಆದ್ದರಿಂದ ಅವರು ಹಬ್ಬಗಳು ಮಾಡುವುದೆ ಅಪರೂಪ. ವರ್ಷಕ್ಕೊಂದೆ ಸಾರಿ ಅಥವಾ ಎರಡು ಸಾರಿ ಶಕ್ತಿ ದೇವತೆಗೆ ಬಲಿ ಕೊಟ್ಟು ಜಾತ್ರೆಗಳನ್ನು ಮಾಡುವುದು ಒಂದು ಹಬ್ಬ ನಾಗರಿಕರ ಮನೆಗಳಲ್ಲಿ ನೀಡಿದ ಹಬ್ಬದ ಊಟವೆ

ಈ ಜನರಿಗೆ ಒಂದು ಹಬ್ಬ, ಹೊಸ ಧಾನ್ಯಗಳು ಬಂದಾಗ ಆ ಧಾನ್ಯಗಳನ್ನು ಪಡೆದು ಅಕ್ಕಿ ಅನ್ನವ ಮಾಡಿ ಅದರಲ್ಲಿ ಬೆಲ್ಲವನ್ನು ಹಾಕಿ ಪಾಯಸ (ಪಾಶ್ಯ) ಮಾಡಿ ಅದನ್ನು ಊಟ ಮಾಡುವುದೆ ಒಂದು ಹಬ್ಬ. ಇದಕ್ಕೆ ವಿಶೇಷ ದಿನಗಳಲ್ಲಿ ಇವರು ಮೇಳಗಳನ್ನು ಕಟ್ಟಿ ಹೋಗಿ ಸಂಪಾದನೆ ಮಾಡಿ ಮನೆಗೆ ಬಂದಾಗ ಅವರು ಕೋಳಿ ಅಥವಾ ಕುರಿಯನ್ನು ತಂದು ತಿನ್ನುವುದು ಒಂದು ಹಬ್ಬ.

ಷ್ಯಂಡ್ರ : ಮೂಲ ಕುಟುಂಬದಿಂದ ಇಬ್ಬರು ಅಥವಾ ಮೂವರು ವ್ಯಕ್ತಿಗಳು ದೂರದ ಊರುಗಳಿಗೆ ಹೋಗಿ ತಮ್ಮ ವೃತ್ತಿಯಿಂದ ಧನಧಾನ್ಯ ಸಂಪಾದಿಸಿಕೊಂಡು ಮತ್ತೇ ಮನೆಗೆ ಬರುವುದಕ್ಕೆ ಷ್ಯಂಡ್ರ ಎಂದು ಕರೆಯುತ್ತಾರೆ.

ನಂಬಿಕೆಗಳು : ನಾಲಿಗೆಗೆ ಒಂದೊಂದು ರುಚಿ ಮೆದುಳಿಗೆ ಒಂದೊಂದು ಬುದ್ಧಿ ಅದೇ ರೀತಿಯಲ್ಲಿ ನಮ್ಮ ಸಮುದಾಯದಲ್ಲಿ ಅನೇಕ ನಂಬಿಕೆಗಳಿವೆ. ಅನೇಕ ಆಚಾರಗಳು ಈ ನಂಬಿಕೆಯ ಮೇಲೆ ಕಾಣುತ್ತೇವೆ ಕುಲ ದೇವತಾರಾಧನೆ ಪದ್ಧತಿಯಲ್ಲಿ ಕೆಲವು ವಸ್ತುಗಳನ್ನು ತಿನ್ನಬಾರದು ಕೆಲವು ಶಕುನಗಳಿಂದ ನಂಬಿಕೆ ಅವಲಂಬಿಸಿರುತ್ತದೆ. ಕೆಲವು ವ್ಯಕ್ತಿಗಳು ಕಾಗೆಯ ಶಕುನ ನಂಬುತ್ತಾರೆ. ಕಾಗೆ ಕೂಗಿದರೆ ಯಾರಾದರೂ ಬಂದುಗಳು ಬರುವರು ಎಂಬುದು ಒಂದು ನಂಬಿಕೆ ಇದಕ್ಕೆ ಅತ್ತೆಯ ಮನೆಗೆ ಒಂದು ಸೊಸೆಯ ಕಾಗೆಯನ್ನು ಈ ರೀತಿ ಕೂಗಲು ಬೇಡಿಕೊಳ್ಳುತ್ತಾರೆ.

ಕಾಗವ್ವ ನಿನ ಕಾಲಿಗೆ ಕಟ್ಟಿನಾ ಗೆಜ್ಜೆಯ
ರತ್ನ ಮಾಲೆಯ ಕಾಗೆ ಕರೆ ಹೇಳು
ನಮ್ಮವರನ್ನು
ಕಾಗೆವ್ವ ನಿನ ಸ್ವರವು ಗಾವುದಾರೆ ಕೇಳಸಲಿ
ಹೆತ್ತವರ ಕಿವಿಗೆ ಅದು ಬೀಳಲಿ
ಕಾಗವ್ವಾ ಕಾಗವ್ವ ನನ್ನ ತವರವರ
ಬಂದರ ತಿಳಿಸು ಬಾ ಕಾಗವ್ವ

ಬುಡ್ಗ ಜಂಗಮರ ನಂಬಿಕೆಗಳು

೧. ಹೆರಿಗೆ ಆದ ಮನೆಯಲ್ಲಿ ತಾಯಿ ಮಗುವಿನ ಸುತ್ತಿ ಬೂದಿಯಿಂದ ಟೆಂಟ್ಟಿನ ಸುತ್ತಲು ಗೆರೆ ಹಾಕಿ ಕುಡುಗೋಲು ಹಾಸಿಗೆ ಕೆಳಗೆ ಹಿಡುತ್ತಾರೆ. ಕಾರಣ ಭೂತಪ್ರೇತಗಳು ತಾಯಿ ಮಗುವಿನ ಹತ್ತಿರ ಬರದಂತೆ ನೋಡಿಕೊಳ್ಳಲು.
೨. ಶವ ಸಂಸ್ಕರ ಮಾಡಿದ ಜಾಗದಲ್ಲಿ ರಾತ್ರಿ ವೇಳೆ ಬೆಂಕಿಯನ್ನು ಹಾಕಿದರೆ ಸತ್ತವರು ದೆವ್ವವಾಗುವುದಿಲ್ಲ. ಎಂಬುದು ನಂಬಿಕೆ.
೩. ದೆವ್ವ ಹಿಡಿದಿರುವರೆಗೆ ಹೊಟ್ಟೆ ಹಿಸಿಕೆದಂಗೆ ಮತ್ತು ಎದೆನೋವು ಬರುತ್ತಿದೆ ಎಂಬುದು ಒಂದು ನಂಬಿಕೆ.
೪. ಕೋಳಿ ಕುರಿ ಬಲಿ ನೀಡಿದರೆ ದೆವ್ವಗಳು ದೂರವಾಗುತ್ತವೆಂದು ನಂಬಿಕೆ.

೫. ಒಂದು ಮನೆಯಲ್ಲಿ ಯಾರದಾರೂ ಸತ್ತರೆ ಅವರು ದೆವ್ವವಾಗಿ ಅದೆ ಸಮುದಾಯದಲ್ಲಿ ಇನ್ನೊಬ್ಬರು ಬಂದರೆ ಅವರನ್ನು ಹಿಡಿಯುತ್ತವೆ ಎಂಬುದು ಒಂದು ನಂಬಿಕೆ.

೬. ಹಾವಿನ ಮಂತ್ರ ಹಾಕುವವರು ಊಟ ಮಾಡುವಾಗ ಯಾರದಾರೂ ಬಂದು ಅವರ ಎದುರಲ್ಲಿ ಹಾವು ಚೇಳು ಅನ್ನುವ ಮಾತನ್ನು ಆಡಿದರೆ ತಕ್ಷಣ ಊಟವನ್ನು ಬಿಟ್ಟು ಕೈತೊಳೆದು ಕೊಳ್ಳುವರು.

೭. ಹಾವು ಕಡಿದವರಿಗೆ ಮಂತ್ರ ಹಾಕುವವರ ಹತ್ತಿರ ಯಾರದರೂ ಬಂದು ಇಂತವರಿಗೆ ಕಡಿದಿದೆ ಎಂದು ಹೇಳಿದಾಗ ಆ ಮಂತ್ರಗಾರ ಬಂಧು ಕಪಳಕ್ಕ ಓಡೆಯುವನು. ಆಗ ಕಡಿದವನಿಗೆ ವಿಷ ಇಳಿಯುತ್ತದೆ ಎಂದು ಒಂದು ನಂಬಿಕೆ.

೮. ಕುಲ ಪಂಚಾಯಿತಿಯಲ್ಲಿ ಕುದಿಯುವ ಎಣ್ಣೆಯಲ್ಲಿ ಕೈಯಿಟ್ಟು ಸಾಕ್ಷಿ ಹೇಳಿದಾಗ ತಪ್ಪು ಮಾಡದಿದ್ದರೆ ಕೈ ಸುಡುವುದಿಲ್ಲ ಎಂಬುದು ಒಂದು ನಂಬಿಕೆ.

೯. ಬಾರಿಗೆ ಹೊಳ್ಳ, ಒಣಕೆ ಮರ, ಕಾಲಿನಿಂದ ತುಳಿಯಬಾರದು.

೧೦. ಯಾರಿಗಾದರೂ ಏನನ್ನಾದರೂ ಕೊಡುತ್ತೇನೆ ಎಂದು ಆಸೆ ಇಟ್ಟಂತೆ ಆ ವಸ್ತು ಕೊಡದೆ ಇದ್ದಾಗ ಕಣ್ಣಿಗೆ ಕುರುಬುಗಲು ಆಗುತ್ತವೆ ಅದಕ್ಕೆ ಆಸೆ ಕುರುಬು ಎಂಬುದು ಒಂದು ನಂಬಿಕೆ.

೧೧. ಮುಳ್ಳಹಂದಿಯ ಮುಳ್ಳನ್ನು ಮನೆಯಲ್ಲಿ ಇಟ್ಟಾರೆ ಆ ಮನೆಯಲ್ಲಿ ಜಗಳಗಳು ಆಗುತ್ತವೆ.

೧೨. ಕೊಲ್ಲು ಪೂಜೆ ಅಂದರೆ ಮಾಸ ಸರಿಯಾಗಿ ಅದನ್ನು ಹಿಡಿದಿದ್ದರೆ ಮಕ್ಕಳು ಹಾಲು ವಾಂತಿ ಮಾಡಿಕೊಳ್ಳುತ್ತಾರೆ. ಎಂಬುದು ಒಂದು ನಂಬಿಕೆ.

ಶಕುನಗಳು

ಸೀನು ಶಕುನ

ನಾಗರಹಾವು ಕೇರೆ ಹಾವು ಅಡ್ಡ ಬಂದರೆ

ಕುಂಬಾರ ಹೊಸ ಗಡಿಗೆಗಳನ್ನು ಅಡ್ಡಬಂದರೆ.

ನರಿ ಕೂಗು ಕೇಳಿಸಿದರೆ

ಬ್ರಹ್ಮಣ ಎದುರಾದರೆ.

ಬಂದೂಕಿನ ಸಪ್ಪಳ ಕೇಳಿಸಿದರೆ

ಹೆಂಗಸು ಕೂದಲನ್ನು ಬಿಟ್ಟು ಅಳುತ್ತಾ ಎದುರಾದರೆ

ಸಲಿಕೆ ಹಾರಿ ಹಿಡಿದು ಎದುರಾದರೆ

ಶವ ಸಂಸ್ಕಾರ ಮಾಡಿ ಜನರು ಎದುರಾದರೆ

ಅಗಸರು ಹೊಗೆದ ಬಟ್ಟೆಗಳೊಂದಿಗೆ ಎದುರಾದರೆ

ಊಡಾ ಅಡ್ಡ ಬಂದರೆ

ನರಿ ಅಡ್ಡ ಬಂದರೆ

ಇವೆಲ್ಲಾ ಈ ಸಮುದಾಯ ನೆಚ್ಚಿಕೊಂಡು ಬಂದ ನಂಬಿಕೆಗಳು.

ಮಂತ್ರ ತಂತ್ರ ವೈದ್ಯ ಬುಡ್ಗಜಂಗಮರಲ್ಲಿ ಇಂಚು ಮಿಂಚು ಪ್ರತಿ ಹೃದಯದಲ್ಲಿ ಒಂದು ನಾಟಿವೈದ್ಯದ ಜೊತೆಗೆ, ಭೂತವೈದ್ಯವು ಸಹ ಇರುವುದು. ನಾಟಿವೈದ್ಯ ಮಾಡುವವನೇ ಭೂತವೈದ್ಯ ಕೂಡ ಮಾಡುತ್ತಾನೆ. ದೃಷ್ಟಿದೋಷಕ್ಕೆ, ಹಾವು ಕಡೆದಿದ್ದಕ್ಕೆ, ಚೇಳು ಕಡೆದಿದ್ದಕ್ಕೆ ಮೊದಲಾದವುಗಳಿಗೆ ಔಷಧ ಮಾಡುವವನು. ಗೃಹ ಭಾಧೆಗಳಿಗೆ ಭೂತ ಪ್ರೇತ ಪಿಶಾಚಿಗಳ ಬಿಡುಗಡೆಗೆ ಮುಗ್ಗುಲತೊ ಯಂತ್ರಾಲು ಹಾಕಿ ಮಂತ್ರಗಳು ಹೇಳಿ ಉಪಚಾರ ಮಾಡುತ್ತಾರೆ. ಕಾಗದ ಮೇಲೆ ಯಂತ್ರ ಬರೆದು ಮಂತ್ರೋಪಚಾರದಿಂದ ತಾಯಿತ ಇಟ್ಟು ಕಟ್ಟುತ್ತಾರೆ.

ಇವರು ಅನುಭವ ಮಂತ್ರಶಾಸ್ತ್ರದೊಳಗಿನ ಮಂತ್ರಗಳನ್ನು, ಯಂತ್ರಗಳನ್ನು ಅಭ್ಯಾಸಮಾಡಿ ಉಪಯೋಗಿಸುತ್ತಾರೆ. ಒಬ್ಬರಿಂದ ಒಬ್ಬರಿಗೆ ಕುರಿತುಕೊಳ್ಳುವುದರಿಂದ ಅನುಭವ ಮಂತ್ರಶಾಸ್ತ್ರದೊಳಗಿನ ಇರುವ ಯಂತ್ರಬಂದಾದರೆ ಇವರು ಬರೆದುಕಟ್ಟುವ ಯಂತ್ರ ಮತ್ತೊಂದು ಆಗಿರುತ್ತದೆ. ಅನೇಕ ದೋಷಗಳು ಹೋಗುತ್ತವೆ. ನಂಬಿಕೆಯೇ ಇಲ್ಲಿ ಪ್ರಧಾನ ಆಗಿದ್ದರಿಂದ ಇವರ ಭೂತವೈದ್ಯ ನಿರಾಧಾರವಾಗಿ ಸಾಗುತ್ತಲೇ ಇರುವುದು ದೇವತಾ ಆರಾಧನೆಕ್ಕಿಂತ ಪ್ರೇತಾರಾಧನೆ ಇವರಿಗೆ ಹೆಚ್ಚು. ಪ್ರೇತಾರಾಧನೆ ವಿಶೇಷಗಳ ಮೇಲೆ ಆಧಾರ ವಿದ್ದು ಇರುವುದಕ್ಕೆ ದೆವ್ವಗಳ ಮುಖದಲ್ಲಿ ಮಂತ್ರೋಪಚಾರಗಳು ಕೂಡಾ ಇರುತ್ತವೆ.

ಪ್ರಕೃತಿ ವೈದ್ಯ: ವೃಕ್ಷಾಸಂಬಂಧ ವೈದ್ಯ, ಪ್ರಾಣಿ ಸಂಬಂಧ ವೈದ್ಯ ಖನಿಜ ಸಂಬಂಧ ವೈದ್ಯ ಎಂದು ಮೂರು ಭಾಗಗಳನ್ನು ಇದರಲ್ಲಿ ಮಾಡಿದ್ದಾರೆ.

ವೃಕ್ಷಾಸಂಬಂಧ ವೈದ್ಯ ಇದರಲ್ಲಿ ಪಕ್ಕ, ತೇಗ ಚಿಗುರು ಎಲೆಗಳು, ಹೂಗಳು, ಕಾಯಿಗಳು, ಹಣ್ಣು, ದಾನ್ಯಗಳು, ಗಿಡದ ಹಾಲು ಮುಂತಾದವುಗಳಿಂದ ಅವನ್ನು ವೈದ್ಯಕೀಯಕ್ಕೆ ಉಪಯೋಗಿಸುತ್ತಾರೆ.

ಪ್ರಾಣಿಸಂಬಂಧ ವೈದ್ಯ: ಇದರಲ್ಲಿ ಎರಡು ಉಪವಿಭಾಗಗಳಿವೆ.

೧. ಜಂತುಗಳ ವೈದ್ಯ ಮಾಡುವುದು

೨. ಜಂತುಗಳ ಸಂಬಂಧ ಪ್ರಾಣಿಗಳ ಮಾಂಸ, ಹೊಟ್ಟೆ, ರಸಗ್ರಂಥ ಮೊದಲಾದಗಿದೆ. ಎಲುಬು, ಕೊಬ್ಬು ಮೊದಲಾದವುಗಳಿಂದ ಬೆರಸಿ ಉಪಯೋಗಿಸುವರು. ಗುಬ್ಬಿಗಳ ಮಾಂಸ ಸಹ ಕೆಲವು ರೋಗಗಳಿಗೆ ಮದ್ದುಗಳನ್ನು ಮಾಡುತ್ತಾರೆ.

ಖನಿಜಸಂಬಂಧ ವೈದ್ಯ: ಇದರಲ್ಲಿ ಲವಣಗಳು, ಸಣ್ಣ ಕರ್ಪೂರ, ಸಿಂಧೂರ, ಅಜ್ಞಾನ ಕೇಸರಿ, ಮೊದಲಾದ ವಸ್ತುಗಳಿಂದ ಉಪಯೋಗಿಸುತ್ತಾರೆ.

ಜನಪದ ವೈದ್ಯ: ಸಾಮಾನ್ಯವಾಗಿ ಗಿಡ ಮೂಲಿಕೆ ಹಾಗೂ ಸ್ಥಳೀಯವಾಗಿ ಸಿಗುವ ಔಷಧೀಯ ಸಸ್ಯಗಳನ್ನು ರೋಗಪೀಡಿತರು ನೀಡಿ ಸಣ್ಣ ಪುಟ್ಟ, ಖಾಯಿಲೆಗಳನ್ನು ವಾಸಿ ಮಾಡುತ್ತಾರೆ. ಈ ವೈದ್ಯ ಪದ್ಧತಿಯನ್ನು ಹಿರಿಯ ತಲೆಮಾರಿನವರಿಂದ ಕಲಿತು ಪ್ರಾಯೋಜಕವಾಗಿ ಮಾಡಿದ ನಂತರ ಬೇರೆಯವರಿಗೆ ವೈದ್ಯ ನೀಡುತ್ತಾರೆ. ಮಕ್ಕಳಿಗೆ ಬಾಲಗ್ರಹ ಹಾಗೂ ಗ್ರಹ ಚೇಷ್ಟಗಳನ್ನು ನಿವಾರಿಸಲು ವಿಶೇಷ ಪೂಜೆಗಳೊಂದಿಗೆ ನಿವಾರಣೆ ಮಾಡುತ್ತಾರೆ.

ಮಾಟ ಮಂತ್ರ: ಮನುಷ್ಯನ ಆರೋಗ್ಯವೇ ಮಹಾಭಾಗ್ಯ ಎಂದು ರೋಗಗಳ ನಿವಾರಣೆಗೆ

ಆದಿಯಿಂದ ಇಲ್ಲಿಯವರೆಗೆ ಅನ್ವೇಷಣೆ ನಡೆಯುತ್ತ ಇದೆ. ಈ ಅನ್ವೇಷಣೆಯ ಮೂಲಕಾರರು ಬುಡಕಟ್ಟು ಜನಗಳೇ ಆಗಿರುತ್ತಾರೆ. ಈ ಬುಡಕಟ್ಟು ಮೂಲನಿವಾಸಿಗಳ ಆರ್ವೇದಿಕ ಔಷಧ ಸಂಪತ್ತು ಈಗಿನ ಪ್ರಪಂಚದ ಎಲ್ಲ ಸಂಶೋಧಕರು ನಿಬ್ಬೆರಗಾಗಿ ಆಶ್ಚರ್ಯ ವ್ಯಕ್ತಪಡಿಸುತ್ತಿದ್ದಾರೆ. ಆನಾದಿಕಾಲದಲ್ಲಿ ಶಿವನ ಕಣ್ಣಿಗೆ ಮರು ಜೋಡನೆಯಿಂದ ಇತಿಹಾಸ ತಿಳಿಸುತ್ತದೆ.

ಈ ಬುಡ್ಗಜಂಗಮ ಸಮುದಾಯದ ತಮ್ಮ ಅಲೆಮಾರಿ ವೃತ್ತಿಗಳಿಂದ ಎಲ್ಲಾ ಸಮುದಾಯ ಕಲೆಗಳನ್ನು ಪ್ರದರ್ಶಿಸಿರುವುದು ಜೊತೆಯಲ್ಲಿ ಕಂಡುಬರುತ್ತದೆ. ಇದರಲ್ಲಿ ನಾಟಿವೈದ್ಯ ಮತ್ತು ಭೂತ ವೈದ್ಯ ನಾಟಿವೈದ್ಯ ಶರೀರದ ಅವಯವಗಳಲ್ಲಿ ಬರುವ ರೋಗಗಳ ಆಧಾರದ ಮೇಲೆ ಔಷಧವನ್ನು ನೀಡುವ ಭೂತ ವೈದ್ಯ ಬಾಹ್ಯ ಮತ್ತು ಮಾನಸಿಕ ಅವಯವಗಳ ಒತ್ತಡದಿಂದ ಬಳಲುವರಿಗೆ ಮಂತ್ರ, ತಂತ್ರದಿಂದ ರೋಗನಿವಾರಣೆ ಮಾಡುವ ವೈದ್ಯ ನಾಟಿವೈದ್ಯ ಅಥವಾ ಜನಪದ ವೈದ್ಯ ಇವರಲ್ಲಿ ವಿಂಗಡಣೆ ಮಾಡಿದರೆ ಪ್ರಕೃತಿ ವೈದ್ಯ ಅಂತೆ ಹೇಳಬಹುದು.

ಕಿವಿನೋವಿಗೆ: ಕತ್ತಾಳೆ ಪಟ್ಟೆಯ ರಸವನ್ನು ತೆಗೆದು ಅದರೊಳಗೆ ಸ್ವಲ್ಪರಸ ಕರ್ಪೂರ ಹಾಕಿ ಕಲಿಸಿ ಕಿವಿಯೊಳಗೆ ಹಾಕಿದರೆ ಕಿವಿ ಸೋರುವುದು ನಿಲ್ಲುತ್ತದೆ. ಅಥವಾ ಅಶ್ವಗಂಧಿ ಎಲೆಯನ್ನು ಕುದಿಸಿದ ಎಣ್ಣೆಯಲ್ಲಿ ಹಾಕಿದಾಗ ಕೆಂಪು ಬಣ್ಣಕ್ಕೆ ತಿರುಗುತ್ತದೆ ಆ ಎಣ್ಣೆಯನ್ನು ಕಿವಿಯೊಳಗೆ ಹಾಕಿದರೆ ಕಿವಿ ಸಂಬಂಧ ನೋವುಗಳು ನಿಲ್ಲುತ್ತವೆ.

ಕಣ್ಣು ನೋವು: ನುಗ್ಗೆ ಎಲೆಗಳನ್ನು ಬೆಚ್ಚನೆ ಮಾಡಿ ಕಣ್ಣಿಗೆ ಕಾವು ಕೊಟ್ಟರೆ ಕಣ್ಣು ನೋವು ಕಡಿಮೆಯಾಗುತ್ತದೆ. ಅಥವಾ ರಸದಲ್ಲಿ ಸ್ವಲ್ಪ ಮಲೆಹಾಲು ಕಲಿಸಿ ಕಣ್ಣಿನಲ್ಲಿ ಹಾಕಿದರೆ ಕಣ್ಣು ನೋವು ಕಡಿಮೆಯಾಗುತ್ತದೆ.

ಕಣ್ಣಲ್ಲಿ ಹೂ ಕಾಣಿಸಿಕೊಂಡರೆ: ಆಲದ ಮರದ ಹಾಲನ್ನು ದಿನವು ಸ್ವಲ್ಪ ಹನಿ ಹಾಕುತ್ತಹೋದರೆ ಕಣ್ಣಿನಲ್ಲಿ ಹೂ ಮಾಯ ವಾಗುತ್ತದೆ.

ಹಲ್ಲುನೋವು: ಅಡವಿ ಔಡಲ ಗಿಡದ ಹಾಲನ್ನು ಹಲ್ಲು ನೋವಿನ ಸಂಧಿಯಲ್ಲಿ ಬಿಟ್ಟರೆ ಹಲ್ಲು ನೋವು ಕಡಿಮೆಯಾಗುತ್ತದೆ. ಹೆಕ್ಕೆ ಗಿಡದ ಹಾಲನ್ನು ಹುಳುಕು ಹಲ್ಲಿನಲ್ಲಿಬಿಟ್ಟಾಗ ಹಲ್ಲು ನೋವು ಕಡಿಮೆಯಾಗುತ್ತದೆ. ಆಮೇಲೆ ದಿನವು ಉತ್ತರೇಣಕಡ್ಡಿ, ಬೇವಿನಕಡ್ಡಿಯಿಂದ ಹಲ್ಲುಗಳು ತಿಕ್ಕಿದರೆ ಹಲ್ಲುಗಳಿಗೆ ಯಾವುದೇ ರೀತಿಯ ನೋವು ಬರುವುದಿಲ್ಲ.

ಪರ್ಶ್ವವಾಯು ತಲೆನೋವು ಮತ್ತು ಅರ್ಧತಲೆ ನೋವು: ದಿರ್ಶಿನ ಚಕ್ಕೆ, ಬಿಳಿ ಮೆಣಸು, ಶುಂಠಿ, ಒಂಟಿ ಬೆಳ್ಳುಳ್ಳಿ ಇವುಗಳ ಸಮ ಪ್ರಮಾಣದಲ್ಲಿ ಕುಟ್ಟಿ ಅದನ್ನು ಕುದಿಸಿ ಕಶಯವನ್ನು ಮಾಡಿ ಕುಡಿಯ ಬೇಕು.

ಕಜ್ಜಿಗೆ : ಸೀತಾಫಲದ ಬೀಜಗಳು ಚೆನ್ನಾಗಿ ಅರಿದು ಶರೀರದ ಮೇಲೆ ಹಚ್ಚಿದಾಗ ಕಜ್ಜಿ ಮಾಯವಾಗುವುದು.

ಐತ್ಯಾ ಅಲರ್ಜಿ: ಹುಣಸೆ ಹುಳಿ, ಜೀರಿಗೆ, ಹರೆದು ಕುಡಿಸಬೇಕು ಅಥವಾ ನಿಂಬೆಹಣ್ಣಿನ ರಸಕ್ಕೆ ಸ್ವಲ್ಪ ಜೇನು ತುಪ್ಪ ಕಲಿಸಿ ಕುಡಿಸಿದರೆ ಇವು ಐತ್ಯಾ ಮತ್ತು ದದ್ದುಗಳು ಮಾಯ ವಾಗುತ್ತವೆ.

ಮಲಬದ್ಧತೆ: ದನಿಯ (ಹವಿಜ) ಚೆನ್ನಾಗಿ ಕುದಿಸಿ ಕಶಯ ಮಾಡಿ ಕುಡಿದರೆ ಮಲ ಬದ್ಧತೆ ಮತ್ತು ಅಜೀರ್ಣ ಮಾಯವಾಗುತ್ತವೆ.

ಮೂತ್ರ ಉರಿ: ಬೇಸಿಗೆಯಲ್ಲಿ ಬಿಸಿಲಿಗೆ ಮೂತ್ರ ಉರಿ ಉಂಟಾಗುವುದು ಸಹಜ ಜೀರಿಗೆ ಚನ್ನಾಗಿ ಹರೆದು ಕುಡಿಯಬೇಕು.

ಮೂರ್ಚೆರೋಗ: ಕಾಗೆ ಮಾಂಸ, ಮೆಣಸು, ಒಂಟ್ಟಿ ಬೆಳ್ಳುಳ್ಳಿ, ಹಾಗೆ ಚೆನ್ನಾಗಿ ರಸ ಮಾಡಿ ಕುಡಿದರೆ ಮೂರ್ಚೆರೋಗ ವಾಸಿಯಾಗುತ್ತದೆ.

ಕೆಮ್ಮು: ಕೆಮ್ಮಗೆ ಚಾಲಿ ಗೀಡದ ಚೆಕ್ಕೆಯ ರಸವನ್ನು ಸ್ವಲ್ಪ ಸ್ವಲ್ಪ ನುಂಗುತ ಹೋದರೆ ಅಥವಾ ಅಜವಾನ ಚೆನ್ನಾಗಿ ಹರೆದು ಕುಡಿಯ ಬೇಕು. ಅಥವ ಬಿಳಿ ಹೆಕ್ಕೆಯ ಹೂವನ್ನು ಚೆನ್ನಾಗಿ ಒಣಗಿಸಿ ಪುಡಿಮಾಡಿ ದಿನಾಲು ಸ್ವಲ್ಪ ಸ್ವಲ್ಪ ಸೇವಿಸಬೇಕು.

ನಾಯಿ ಕೆಮ್ಮು: ಮಕ್ಕಳಿಗೆ ಬರುವ ನಾಯಿಕೆಮ್ಮು ಮಕ್ಕಳ ಕುತ್ತಿಗೆಗೆ ಒಂಗೆ ಮರದ ಕಾಯಿಗಳನ್ನು ಹಾರಮಾಡಿ ಹಾಕಿದರೆ ಕ್ರಮೇಣ ಕಡಿಮೆಯಾಗುತ್ತದೆ.

ವಾಂತಿರೋಗ: ಹೀರೆ ಬೇವಿನ ಚೆಕ್ಕೆ ಅಥವಾ ಎಲೋರು ಚೆಕ್ಕೆ ರಸದಲ್ಲಿ ಮಾಡಿ ಹೆಪ್ಪು ಹಾಕಿ ಚೆನ್ನಾಗಿ ಕುಟ್ಟಿ ರಸಮಾಡಿ ದಿನಕ್ಕೆ ೩ ಸಲ ಸಮ ಪ್ರಮಾಣದಲ್ಲಿ ಕುಡಿಯುತ್ತ ಹೋಗಬೇಕು. ಮತ್ತು ೭ದಿನಗಳವರೆ ಸಪ್ಪೆ ಆಹಾರವನ್ನು ತಿನ್ನಬೇಕು. ಮಕ್ಕಳಿಗೆ ಬರುವ ಸಣ್ಣಪುಟ್ಟ ರೋಗಗಳಿಗೆ ಮೂರು ದಿನಗಳವರೆಗೆ ಒಂದು ಚಮಚ ದಷ್ಟು ಕತ್ತೆಹಾಲನ್ನು ಕುಡಿಸಬೇಕು. ಮಕ್ಕಳ ಹೊಟ್ಟೆ ಜಂತು ನಾಶವಾಗಿ ರಾತ್ರಿಗೋಡಂಬಿ ಬೀಜಗಳನ್ನು ಗಂಜಿಯಲ್ಲಿ ನೆನಸಿಟ್ಟು ಬೆಳಿಗ್ಗೆ ಗಂಜಿಯನ್ನು ಚೆಲ್ಲಿ ಗೋಡಂಬಿಯ ಬೀಜಗಳನ್ನು ತಿನ್ನಿಸಿದರೆ ಜಂತು ನಾಶ.

ಕೆಂಪು ಸೆರಗು: ಅರೆಚೆಕ್ಕೆ ಪುಡಿಮಾಡಿ ಕುಡಿಸಬೇಕು. ಅಥವಾ (ಪಚ್ಚಿ, ಯರ್ರಗೊಳಿ ಮನ್ನಗಡೆ) ಅದರಲ್ಲಿ ಮೋಡಿ ಕಲಸಿ ಚೆನ್ನಾಗಿ ಕುಡಿವಿ ರಸವನ್ನು ಕುಡಿಯಬೇಕು.

ಬಾಣಂತಿಯರಿಗೆ: ಹಾಲು ಚೆನ್ನಾಗಿ ಬರಲು ಹಸೀ ಮೀನು ಸಾರು ಏಡಿಸಾರು ಮಾಡಿ ತಿನ್ನಬೇಕು.

ಒಳಗಾಯಗಳಿಗೆ: ಕರಿ ಮೇಕೆ ಮಾಂಸ ಇಲ್ಲವೆ ಕರಿ ಕೋಳಿ ಮಾಂಸದಲ್ಲಿ ಅಥವಾ ತಲೆ ಮಾಂಸದಲ್ಲಿ ಜಾಗೆಕಾಯಿ ಜಾಪತ್ರಿ ಮೆಣಸು, ಲವಂಗ, ಬೆಳ್ಳುಳ್ಳಿ, ಮೊದಲಾದವುಗಳನ್ನು ಹಾಕಿ, ಚೆನ್ನಾಗಿ ಕಶಯವನ್ನು ಮಾಡಿ ಕುಡಿಯಬೆಕು. ಗೋಧಿ ರೊಟ್ಟಿಯೊಳಗೆ ತಿನ್ನಬೇಕು. ಚೇಳು ಕಡಿದರೆ ಬಿಳಿ ನೆಲ್ಲಿಕಾಯಿ ತೇದಿ ಚೇಳು ಕಡಿದ ಭಾಗಕ್ಕೆ ಹಚ್ಚಿದರೆ ನೋವು ಕಡಿಮೆ ಯಾಗುತ್ತದೆ. ಕಡಿದ ವಿಶವು ಕಡಿಮೆಯಾಗುತ್ತದೆ.

ನಾಯಿ ಕಡಿತಕ್ಕೆ: ಹಿಪ್ಪೆ ಮರದ ಚೆಕ್ಕೆ ಚೆನ್ನಾಗಿ ಕುಟ್ಟಿ ಕುಡಿಸಬೇಕು. ಅಥವಾ ಹಂದಿ ರಕ್ತದಲ್ಲಿ ಮೆಣಸಿನ ಪುಡಿ ತೊಗರೆ ಗಿಡದ ಹೂವಿನ ಮೇಲೆ ಇರುವ ಕೀಟವನ್ನು ಹಿಡಿದು ಅದರ ಗುದದ್ವಾರಕ್ಕೆ ತಕ್ಷಣ ಮುಳ್ಳನ್ನು ಚುಚ್ಚಿ ಒಣಗಿಸಿ ಅದರ ಗೋಳಿಗೆ ಆಕಾರ ಮಾಡಿ ನುಂಗಿಸಬೇಕು. ಆ ಕೀಟದ ಆಕಾರ ಕೆಂಪು ಸಣ್ಣ ಸಣ್ಣ ಮಚ್ಚೆಗಳಿದ್ದು ಒಂದು ಹೇಜೇನು

ಆಕಾರದಲ್ಲಿ ಇರುತ್ತದೆ. ಈ ಗುಳಿಗೆಯನ್ನು ಜೋಳದ ಒಂದು ಕಾಳಿನಷ್ಟು ಮಾತ್ರ ನುಂಗಬೇಕು. ಆವತ್ತಿನ ದಿನ ಊಟವನ್ನು ಮಾಡದೇ ಮಜ್ಜಿಗೆ ಕೊಡಿತಿರಬೇಕು.

**ದೇಹದಲ್ಲಿ ಗಡ್ಡೆಗಳು:** ಚಿಗುರೆ ಕೊಂಬು ಕತ್ತೆ ಕಿರುಬಿ ಎಲುಬು ಚೆನ್ನಾಗಿ ಹರೆದು ಹಚ್ಚಬೇಕು ಅಥವಾ ಆಲದ ಮರದ ಹಾಲು ಅಥವಾ ಹತ್ತಿ ಗಿಡದ ಹಾಲು ಹಚ್ಚಿದರೆ ಗಡ್ಡೆಗಳು ಹೋಗುತ್ತವೆ.

**ಹೊಟ್ಟೆ ನೋವು:** ಹೆರಿಗೆಯ ಹೊಟ್ಟೆ ನೋವಿಗೆ ಆಮೆ ಚಿಪ್ಪು ಕತ್ತೆಕಿರುಬು ಎಲುಬು ಜಿಂಕೆ ಕೊಂಬು ಎಲ್ಲಾ ಚೆನ್ನಾಗಿ ಲೆಕ್ಕಿ ಹೊಟ್ಟೆಗೆ ಲೇಪಿಸಬೇಕು.

**ಮಕ್ಕಳಿಗೆ ಬರುವ ಹೊಟ್ಟೆನೋವುಗೆ:** ಒಣಗಿಸಿದ ಮುಳ್ಳಂದಿ ಹೊಟ್ಟೆ (ಜೀರ್ಣಶಾಯ) ಚೆನ್ನಾಗಿ ತೇದಿ ತಾಯಿಯ ಹಾಲು ಕಲಿಸಿ ತಿನ್ನಿಸಬೇಕು. ಅಥವಾ ಕಾರಕಾಯಿ ಹಿಂಗ್ಯಕಾಯಿ (ಗಾಂರಕಾಯಿ) ಸತಪಾಕು ಚೆನ್ನಾಗಿ ಹರಿದು ಕಲಿಸಿ ಮಕ್ಕಳಿಗೆ ಕುಡಿಸಬೇಕು.

**ವಾತ ಸಂಬಂದ ರೋಗ:** ನಡುನೋವು ಕಾಲುನೋವು ಮೈಕೈ ನೋವು ಉಡದ ಕೊಬ್ಬು ಅಥವಾ ಮೊಸಳೆ ಕೊಬ್ಬು ಚೆನ್ನಾಗಿ ಮಸಾಜು ಮಾಡಿ ಬಿಸಿ ನೀರಿನಿಂದ ಸ್ನಾನಮಾಡಿದರೆ ಮೈಕೈನೋವು ಹೋಗುತ್ತದೆ.

**ಅಡವಿ ಹಂದಿ:** ಪ್ರತಿಯೊಂದು ಭಾಗವು ಇವರಿಗೆ ಔಷಧ ವಿದ್ದಂತೆ ಅದರ ರಕ್ತ, ಮಾಂಸ, ಕರಳು, ಪ್ರತಿಯೊಂದು ಬೇರೆ ಬೇರೆ ರೋಗಗಳಿಗೆ ರೋಗ ನಿರೋಧಕ ಶಕ್ತಿಯನ್ನು ಕೊಡುತ್ತದೆ. ಎಂದು ನಂಬಿಕೆ.

**ಕೇರುಬೀಜ:** ಕಾಲಿಗೆ ಮುಳ್ಳು ಚುಚ್ಚಿಬಾರದೆ ಇದ್ದರೆ ಕೇರನ್ನು ಇಟ್ಟು ಬಿಸಿಮಾಡಿದಾಗ ಮುಳ್ಳು ತಾನೆಷ್ಟೆ ಬಾರುತ್ತದೆ. ಕೀಲುನೋವಿಗೆ ಮೊಣಕಾಲುಗೆ ಕೇರನ್ನು ಅಚ್ಚುತ್ತಾರೆ. ಮಳೆಗಾಲದಲ್ಲಿ ಪಾದಗಳ ಸಂದುಗಲ ನೋವು ನೀವಾರಣೆಗೆ ಕೇರನ್ನು ಹಚ್ಚುತ್ತಾರೆ. ಮಕ್ಕಲ ಕೆಮ್ಮುಗೆ ಕೇರನ್ನು ಹಚ್ಚುತ್ತಾರೆ ಕಾಲರ ಸೋಕುವುದಿಲ್ಲ. ಎಂದು ನಂಬಿಕೆ ಇತ್ತು.

**ಬೆಂಕಿ ಚಿಕಿತ್ಸೆ:** ಹುಟ್ಟಿದ ಮಕ್ಕಳಿಗೆ ಹೊಟ್ಟೆ ಮೇಲೆ ಬರೆ ಎಳೆಯುತ್ತಾರೆ. ಇದರಿಂದ ಮಕ್ಕಳು ರೋಗ ನಿರೋಧಕ ಶಕ್ತಿಯನ್ನು ಪಡೆದು ನಂಬುರೋಗಗಳಿಂದ ಆರೋಗ್ಯವಾಗಿರುವುದು ಎಂದು ನಂಬಿಕೆ.

ದೊಡ್ಡವರಿಗೆ ಆಶ್ಚರ್ಯವಾಗಿ ಮೂರ್ಛೆ ಬಂದರೆ ಆಘಾತವಾದರೆ ಬೇಧಿನ ಕಡ್ಡಿಯಿಂದ ಬೆಂಕಿಗೆ ಹಚ್ಚೆ ತಲೆಯ ಸುಳಿಯ ಮೇಲೆ ಕುತ್ತಿಗೆ ನರದ ಮೇಲೆ ಕೈ ಕಾಲುಗಳ ನರಗಳಿಗೆ ವಿದ್ಯುತ್ ಸ್ಪಷ್ಟವಾಗಿ ತಕ್ಷಣ ಜಾಗೃತವಾಗುವರೆಂದು ನಂಬಿಕೆ ಈ ಪದ್ಧತಿಗಳು ಅನೇಕ ಬುಡಕಟ್ಟು ಅಲೆಮಾರಿ ಸಮುದಾಯಗಳಲ್ಲಿ ಇದೆ. ಉದಾಹರಣೆಗೆ ಸಿಂಧೋಳು, ಹೆಳವ ಸುಡುಗಾಡು ಸಿದ್ಧ, ಚೆನ್ನದಾಸ ಮೊದಲಾದವರು.

**ಭೂತವೈದ್ಯರು**

ಬುಡ್ಗ ಜಂಗಮರ ದೆವ್ವಗಳನ್ನು ಹಿಡಿಯಲು ಆಂಧ್ರಪ್ರೇಶದ ಕೆಲವು ಭಾಗಗಳಲ್ಲಿ ಕಂಡುಬರುತ್ತಾರೆ. ಬುಡ್ಗ ಜಂಗಮ್‌ರಲ್ಲಿ ಕಾಶಿಗಂ ಅಂದರೆ ದೆವ್ವ ಎಂದು ಅರ್ಥ

ಆಂಧ್ರಪ್ರದೇಶದ ಮೆಹಬೂಬುನಗರ ಗೌರಹಾರಂ, ಕಾಕುಂಟ್ಲ ಬಿಜಿನೇಮಪಲ್ಲಿ ಮುಸ್ಲಿಂ ವೈದ್ಯರು ನಲ್ಗೊಂಡ ಜಿಲ್ಲೆ ನಿಗರಾಂ ಮೆದರ್‌ಜಿಲ್ಲೆ ದಲಿತಬಾದ್ ಇನ್ನು ಅನೇಕಡೆ ಆಂಧ್ರಪ್ರದೇಶ ದಲ್ಲಿ ದೆವ್ವಗಳನ್ನು ಹಿಡಿಯುವುದುಂಟು.

ದೆವ್ವಗಳನ್ನು ಹಿಡಿದು ನಾಶಮಾಡಲು ಮಂತ್ರಗಳನ್ನು ಜಪಿಸುತ್ತ ಆಂಜನೇಯಸ್ವಾಮಿಯನ್ನು ಜಪಿಸುತ್ತ ಹಂಗೈಯಲ್ಲಿ ಆಂಜನವನ್ನು ಹಾಕಿಕೊಂಡು ದೆವ್ವವನ್ನು ಹಿಡಿಸಲು ಬಂದ ವ್ಯಕ್ತಿಗೆ ಪ್ರಶ್ನೆಗಳನ್ನು ಹಾಕುತ್ತ ನಿಮ್ಮ ದೆವ್ವ ಮನೆಯ ಗೂಡಿನಲ್ಲಿದೆ. ಈ ರೀತಿ ಆಕಾರವಾಗಿದೆ ಇಂತ ಅಂಗಿ ಇಂತ ಬಟ್ಟೆಯ ಇಂಥವರಮನೆ, ವಾಸ ಮಾಡಿದೆ ಎಂದು ಆ ದೆವ್ವವನ್ನು ಆಂಜನೇಯಸ್ವಾಮಿಯನ್ನು ಬಿಟ್ಟು ದೆವ್ವವನ್ನು ಕಟ್ಟಿಹಾಕಿ ಅದನ್ನು ಭಸ್ಮಮಾಡುವವರು ನಂತರ ಮನೆಗೆ ಬಂದು ನೆಮ್ಮದಿಯಾಗಿ ಇರುವರು.



೭

# ಒಳಾಡಳಿತ ವ್ಯವಸ್ಥೆ

## ನ್ಯಾಯ ಪಂಚಾಯಿತಿ

ಸಮುದಾಯದ ಒಳಜಗಳಗಳ ನಿರ್ಣಾಯಗೊಳಿಸಲು ರಚಿಸಿದ ಒಂದು ವ್ಯವಸ್ಥೆ. ಈ ವ್ಯವಸ್ಥೆಗೆ ಬುಡ್ಗಜಂಗಮರಲ್ಲಿ "ಕುಲಮನ್ಯಾಯ'' ಎಂದು ಕರೆಯುತ್ತಾರೆ.

ಈ ಕುಲಮನ್ಯಾಯ (ನ್ಯಾಯ ಪಂಚಾಯಿತಿ) ಮಾಡಲು ಅವರದೆ ಆದ ಅಲಿಖಿತ ಸಂವಿಧಾನ ನ್ಯಾಯಾಂಗ ರಚನಾ ವ್ಯವಸ್ಥೆ ಇರುತ್ತದೆ. ಈ ಸಮುದಾಯದ ಆಗು ಹೋಗು ಗಳನ್ನು ಮತ್ತು ನ್ಯಾಯ ನಿರ್ಣಯಗಳ ಬಗ್ಗೆ ಬಲ್ಲ ವ್ಯಕ್ತಿಯನ್ನು ಎಲ್ಲರೂ ನ್ಯಾಯಾಧೀಶರೆಂದೆ ಅಂದರೆ ಕುಲ ಪೆದ್ದ ಎಂದು ಕರೆಯುತ್ತಾರೆ.

ನ್ಯಾಯದೀಶ ಅಥವಾ ಕುಲಮ ಪೆದ್ದನ ಮಾತಿನಂತೆ ಈ ಸಮುದಾಯದಲ್ಲಿ ನ್ಯಾಯ ನಿರ್ಣಯ ಕೇಳುವ ಹಾಗೂ ನಿರ್ಣಯ ಸಂದರ್ಭದಲ್ಲಿ ಯಡವಲಿ ಮಹಾಂತು, ಘಂಟೆ, ವಿಭೂತಿ, ರುದ್ರಾಕ್ಷಿ, ಶಂಕು ತಾಟಿಕೊಂಡ, ಕಲ್ಯಾಣಂ, ಮುಂತಾದವುಗಳ ಮುಖಂಡರು ಸೇರಿ ನ್ಯಾಯ ಪಂಚಾಯಿತಿ ಮಾಡುವಾಗ ಗೌಡ, ಶಾನಭೋಗ ಕಟ್ಟೆಮನಿ ತಳವಾರ ಈ ರೀತಿಯಂತೆ ಇವರ ಗೋತ್ರಗಳಲ್ಲಿ ರಚಿಸಿಕೊಂಡಿರುತ್ತಾರೆ. ಈ ಕುಲ ಪಂಚಾಯಿತಿಗಳಲ್ಲಿ ಏಳು ವಿಧಗಳುಂಟು. ಇವರು ಮಾಡುವ ಪಂಚಾಯಿತಿಯಲ್ಲಿ ಹಿಂದಿನ ತಲೆಮಾರುಗಳು ಹಾಕಿದ ದಂಡ, ಬಗೆಹರಿಸಿದ ರೀತಿ ಉದಾಹರಣೆಯನ್ನು ನೀಡುತ್ತಾರೆ.

೧. ಕಡ್ಡಿ ಕಟ್ಟುವುದು ಕಟ್ಟಾದಾರ ಪುಲ್ಲ ಕಟ್ಟುವುದು: ಇಬ್ಬರ ವ್ಯಕ್ತಿಗಳ ಮಧ್ಯ ಜಗಳವಾದ ನಂತರ ಸಮುದಾಯದ ಪ್ರಮುಖ ವ್ಯಕ್ತಿ ಹತ್ತಿರ ಹೋಗಿ ಜಗಳದ ವಿವರ ಹೇಳಿ ಜಗಳವಾಡಿದ ವ್ಯಕ್ತಿಯ ಮೇಲೆ ಕಡ್ಡಿ ಕಟ್ಟಲು ತೆಂಗಿನ ಮರದ ಕಡ್ಡಿ ಇಲ್ಲವೆ ಹುಲ್ಲು ಕಡ್ಡಿಯನ್ನು ತನ್ನ ಕೈಯಲ್ಲಿ ಹಿಡದು "ಇಟ್ಟಾಡು ಕುಲಸ್ತಣಿ ಮೀದ ನಾದಿ ಕಡ್ಡಿ ಉಂದಿ" (ಇಂತಾ ಕುಲ್ಧನ ಮೇಲೆ ನನ್ನ ಕಡ್ಡಿ)ಎಂದು ನ್ಯಾಯ ಕೇಳುವ ವಿಧಾನಕ್ಕೆ ಕಡ್ಡಿ ಕಟ್ಟುವುದು ಎನ್ನುವರು. ಕೆಲವೊಂದು ಸಾರಿ ಕಡ್ಡಿ ಇಲ್ಲದ್ದಿದಾಗ ಕೈಯಲ್ಲಿರುವ ಉಂಗರು ಅಥವಾ ಒಂದು ಬೆಲೆಯುಳ್ಳ ವಸ್ತುವನ್ನು ಇಡುವುದು. ಯಾವುದೇ ರೀತಿಯಿಂದ ಗಡುವಿನ ಅವಧಿಯವರೆಗೆ ಜಗಳ ಮಾಡುವುದು ನಿಷೇಧವಾಗಿರುತ್ತದೆ.

ಒಂದು ವೇಳೆ ಕಡ್ಡಿ ಕೊಟ್ಟು ಜಗಳವಾಡಿದರೆ ಇಟ್ಟುಕೊಂಡ ವ್ಯಕ್ತಿಗೆ ತಿಳಿದರೆ 'ಅಕಾಂ' ಗೋರ ಅಪರಾಧ ತಪ್ಪೆಂದು ತಿಳಿಸಿ. ಆ ವ್ಯಕ್ತಿಯ ಮೇಲೆ ಹೆಚ್ಚಿನ ಧಂಡ ವಿಧಿಸಿದ್ದು ಕಂಡು ಬರುತ್ತದೆ. ಕತಬಾ ಎಂದರೆ ಇವರಲ್ಲಿ ಹೇಳುಹಾಗೆ 'ಕ' ಎಂದರೆ ಕಾನೂನು, 'ತ' ಎಂದರೆ ತಾಕತ್ತು 'ವಾ'ಎಂದರೆ ವಕಾಲತ್ತು ಎಂದು ಹೇಳುತ್ತಾರೆ. ಕತವಾ ಕಟ್ಟಿಡಿಕ್ಕೆ ಇಲ್ಲದೆ ಯಾವ ನ್ಯಾಯ ಪಂಚಾಯತಿಗಳಾಗುವುದಿಲ್ಲ.

**೨. ಕುಲಪಂಚಾಯತಿ:** ಪಂಚಾಯತಿದಾರರ ಸಮ್ಮುಖದಲ್ಲಿ ಪಂಚಾಯಿತಿದಾರರ ತೀರ್ಪಗೆ ಬದ್ದನಾಗಿದ್ದು ಯಾವುದೇ ದೌರ್ಜನ್ಯ ವ್ಯಸಗದಂತೆ ಇಬ್ಬರು ಸೇರಿ ಪಂಚಾಯಿತಿದಾರರು ೧೩ ರೂ.ಗಳನ್ನು ಅಥವಾ ಒಡವೆಗಳನ್ನು ಇಟ್ಟು ತೀರ್ಪಿಗೆ ಬೇಕಾದ ನ್ಯಾಯ ಕೇಳುವುದಕ್ಕೆ ಕತಬಾ ಎನ್ನುವರು.

೩. ಸಾಲು: ಪಂಚಾಯತಿ ದಾರರ ಸಮ್ಮುಖದಲ್ಲಿ ಜಗಳವಾಡಿದ ಇಬ್ಬರು ವ್ಯಕ್ತಿಗಳು ಕುಳಿತು ತಮ್ಮ ತಮ್ಮ ಜಗಳಕ್ಕೆ ಕಾರಣಗಳನ್ನು ವಿವಹರಿಸುತ್ತಾ "ಕೊಡಿ-ಮುಡಿ" (ತಪ್ಪು ಹೊಪ್ಪು)ಗಳನ್ನು ತಿಳಿಸುವುದಕ್ಕೆ ಸಾಲು ಎನ್ನುವರು.

೪. ಸಾಕ್ಷಿ: ಜಗಳವಾಡಿದಾಗ ಅಕ್ಕ ಪಕ್ಕದಲ್ಲಿ ಇವರ ನಡೆನುಡಿ ಬಯ್ಯುವುದು ಮತ್ತು ವ್ಯಭಿಚಾರ ದೋಶಮ ಶಬ್ದಗಳು, ವೈವಾಹಿಕ ಸಾಮಾಜಿಕ ನ್ಯೂನತೆಗಳನ್ನು ಪ್ರತ್ಯೇಕ್ಷವಾಗಿ ನೋಡಿದ ಮತ್ತು ಪಂಚಾಯಾತಿಯಲ್ಲಿ ತಪ್ಪುದಾರರ ಮೇಲೆ ಹೇಳುವ ಹೇಳಿಕೆಗಳಿಗೆ ಸಾಕ್ಷಿ ಎನ್ನುವರು.

೧. ಹಸಿರು ಗಿಡದ ಮೇಲೆ ಪ್ರಮಾಣಮಾಡಿ ಹೇಳುವುದು, ನೀರು-ನೀರೆ-ಹಾಲು-ಹಾಲೆ ಎಂದು ಹೇಳಿ ಹರಿಶಿಣ ಕುಂಕುಮ ಮೇಲೆ ಪ್ರಮಾಣಮಾಡಿ ಹೇಳುವುದು.

೨. ಮಕ್ಕಳ ಮೇಲೆ ಪ್ರಮಾಣಮಾಡಿ ಸಾಕ್ಷಿ ಹೇಳುವುದು, ಮಕ್ಕಳ ತಲೆಯ ಮೇಲೆ ಕೈಯಿಟ್ಟು ಪ್ರಮಾಣ ಮಾಡಿ ನಿಜವನ್ನು ಹೇಳುತ್ತೇನೆಂದು ಹೇಳುವುದು.

೩. ದೇವರುಗಳ ಮೇಲೆ ಪ್ರಮಾಣ ಮಾಡಿ ಸಾಕ್ಷಿ ಹೆಳುವುದು ಸ್ನಾನಮಾಡಿ ದೇಸ್ಥಾನದ ದೀಪವನ್ನು ಆರಿಸಿ ಪ್ರಮಾಣ ಮಾಡುವುದು, ಇದನ್ನು ಜಗಳವಾಡಿದ ವ್ಯಕ್ತಿಗಳು ಸಹ ಹಣಕೊಟ್ಟು ತೆಗೆದುಕೊಳ್ಳುಕುವೆಯಲ್ಲಿ ಈ ರೀತಿ ಪ್ರಮಾಣ ಮಾಡುತ್ತಾರೆ.

೪. ಕಾದ ಕಬ್ಬಿಣ ಹಾರಿಯನ್ನು ಮುಟ್ಟಿ ಪ್ರಮಾಣ ಮಾಡುವುದು.

೫. ಗಡಿಗೆಯಲ್ಲಿ ಎಣ್ಣೆಯನ್ನು ಹಾಕಿ ಚೆನ್ನಾಗಿ ಕುದಿಯುತ್ತಿರುವಾಗ ಅದರಲ್ಲಿ ಉಂಗರುವನ್ನು ಹಾಕಿ ಸಾಕ್ಷಿ ಹೇಳುವಾತ ಕೈಯಿಂದ ಉಂಗುರವನ್ನು ತೆಗೆದು ನ್ಯಾಯಸ್ಥರಿಗೆ ಕೊಡಬೇಕು. ಆವಾಗ ನಿಜವಾದ ಸಾಕ್ಷಿ ಆಗುವುದು.

೫. ಸಾಟ್ಟಿ: ಎಂದರೆ ಆ ಸಂದರ್ಭಕ್ಕೆ ತಕ್ಕ ಹಾಗೆ ದೃಷ್ಟಗಳು ಉದಾಹರಣೆಗೆ ಹಿಂದಿನ ಪಂಚಾಯತಿಗಳಲ್ಲಿ ನಡೆದಂತೆ ಕುಲ ನಿರ್ಣಯಗಳು ಮತ್ತು ಪೂರ್ವಜರು ಪಾಲಿಸಿಕೊಂಡು ಬಂದಂತ ಕಟ್ಟುನಿಟ್ಟಿಗಳು ತಿಳಿಸುತ್ತಾ ಉದಾಹರಣೆಗೆ ನ್ಯಾಯಾಲಯಗಳಲ್ಲಿ ಪ್ರತಿಯೊಂದು ಶಿಕ್ಷೆಯೊಂದಿಗೆ ಐ.ಪಿ.ಸಿ. ಸೆಕ್ಷನ್‌ಗಳನ್ನು ನಮೂದಿಸಿ ನ್ಯಾಯಲಯ ನಿರ್ಣಯಿಸುತ್ತದೆಯೋ

ಅದೇ ರೀತಿಯಲ್ಲಿ ಈ ಕುಲ ಪಂಚಾಯತಿ ನೀಡಿದ ತೀರ್ಪನ್ನು ನೆನೆಪಿಸಿ ಹೇಳುವುದಕ್ಕೆ ಸಾಟ್ಟೆ ಎನ್ನುವರು.

**ಸಾಟ್ಟೆ ಸಾಟ್ಟೆಲು**

ಉದಾಹರಣೆಗೆ ಸಾಟ್ಟೆವಿನ ಸಾರ ಶಿವಲಿಂಗಪ್ಪ ಮತ್ತು ಮಾರೆಪ್ಪ ಎನ್ನುವವರು ಬೇಟೆಗೆ ಹೋಗಿದ್ದರು ಅವರಿಗೆ ಒಂದು ಮೊಲ ಮತ್ತು ಒಂದು ಅಳಿಲು ಸಿಕ್ಕಿತು. ಅದರಲ್ಲಿ ಶಿವ ಲಿಂಗಪ್ಪ ಸ್ವಲ್ಪ ಬುದ್ಧಿವಂತನಿದ್ದು ಅದರಲ್ಲಿ ಅಮಯಾಕನಾಗಿದ್ದ. ಶಿವಲಿಂಗಪ್ಪ ಯೋಚಿಸಿ ಮಾರೆಪ್ಪ ಹೀಗೆಂದ ಮೊಲದಿಂದ ಸಾರು ಮಾಡಿದರೆ ಕುದ್ದು ಕುದ್ದು ಸ್ವಲ್ಪವೆ ಆಗುತ್ತದೆ. ಅಳಿಲು ಮಾಂಸದಿಂದ ಸಾರು ಮಾಡಿದರೆ ಗಡಿಗೆ ತುಂಬ ಎಂದು ಹೇಳಿದ. ಇದನ್ನು ನಂಬಿದ ಮಾರೆಪ್ಪ ಅಳಿಲನ್ನು ತೆಗೆದುಕೊಂಡು ಹೋಗಿ ಸಾರು ಮಾಡಿದ. ಬುದ್ಧಿವಂತನಾದ ಶಿವಲಿಂಗಪ್ಪನನ್ನು ಒಳಗೆ ಒಳಗೆ ಖುಷಿ ಪಟ್ಟು ಮೊಲವನ್ನು ತೆಗೆದುಕೊಂಡು ಹೋಗಿ ಸಾರು ಮಾಡಲು ಹೆಂಡತಿಗೆ ಹೇಳಿದ. ಮಾರೆಪ್ಪನು ಸಹ ಅಳಿಲನ್ನು ತೆಗೆದುಕೊಂಡು ಹೋಗಿ ತನ್ನ ಹೆಂಡತಿಗೆ ಸಾರು ಮಾಡು ಎಂದು ಹೇಳಿದ ಇಬ್ಬರು ಹೇಳಿ ಹೆಂಡ ಕುಡಿಯಲು ಹೋದರು. ಕುಡಿದು ಬಂದನಂತರ ಶಿವಲಿಂಗಪ್ಪ ಮತ್ತು ಹೆಂಡತಿ ಚೆನ್ನಾಗಿ ಊಟ ಮಾಡಿದರು. ಆದರೆ ಮಾರೆಪ್ಪ ಬಂದು ನೋಡಿದರೆ ಸ್ವಲ್ಪ ಸಾರು ತುಂಡು ಇದ್ದವು. ಮಾರೆಪ್ಪ ಉಗ್ರ ಸಿಟ್ಟಿನಿಂದ ಶಿವಲಿಂಗಪ್ಪನ ಹತ್ತಿರ ಬಂದು ನನಗೆ ಮೋಸ ಮಾಡಿದ್ದೀಯ ಎಂದು ತಿಳಿದು ಶಿವಲಿಂಗಪ್ಪನನ್ನು ಕಟ್ಟಿಗೆಯಿಂದ ಹೊಡೆದನು. ಬೆಳಿಗ್ಗೆ ಎದ್ದ ನಂತರ ಶಿವಲಿಂಗಪ್ಪನನ್ನು ಮಾರೆಪ್ಪನ ಮೇಲೆ ಪಂಚಾಯಿತಿದಾರರು ದೂರು ನೀಡಿ ಕಡ್ಡಿಯನ್ನು ಕಟ್ಟಲು ಈ ಪಂಚಾಯಿತಿ ನ್ಯಾಯ ನಿರ್ಣಯ ಪಾಲಿಸಿದ ನ್ಯಾಯಸ್ಥರು ಈ ರೀತಿ ತೀರ್ಪು ನೀಡಿದರು. ಶಿವಲಿಂಗಪ್ಪನ ಮೇಲೆ ತಪ್ಪುಗಳ ವರದಿ.

''ಬಾಯಿಗೆ ಬಂದ ತುತ್ತನ್ನು ಅಪಹರಿಸಿದ ಒಂದು ತಪ್ಪು'' ''ನಾಲಿಗೆ ದಾಟಿದರೆ ನರಕ ವಾಗುವ ವಸ್ತು'' ಇದನ್ನು ಸಹ ಕುಲಸ್ತನಿಗೆ ನ್ಯಾಯವಾಗಿ ಪಾಲು ಹಾಕದೆ ಮಾಡಿದ ತಪ್ಪಿಗಾಗಿ ಒಂದು ರೂಪಾಯಿ ದಂಡವನ್ನು ಹಾಕಲಾಯಿತು.

ಮಾರೆಪ್ಪನ ಮೇಲೆ ತಪ್ಪಿನ ವರದಿ ಮಾರೆಪ್ಪನು ಅವಸರದಲ್ಲಿ ಕುಡಿದು ಬಂದು ಸಹ ಕುಲಸ್ಥನ ಮೇಲೆ ಕಟ್ಟಿಗೆಯಿಂದ ಹೊಡೆದಿದ್ದು ಹಕ್ಕಾಂತ ತಪ್ಪು. ಇದಕ್ಕೆ ಮಾರೆಪ್ಪನು ಕುಲ ಪಂಚಾತಿಯಲ್ಲಿ ತಪ್ಪು ದಂಡ ನೀಡಿ ತನ್ನ ತಲೆಯ ಮೇಲೆ ಇರುವ (ಸಿರಪಾಗು) ವಸ್ತ್ರ ಕೆಳಗಿಟ್ಟು ನಮಸ್ಕರಿಸಿ ಇದನ್ನು ಮತ್ತೊಮ್ಮೆ ಮಾಡದಂತೆ ನ್ಯಾಯಾಲಯಕ್ಕೆ ತಲೆ ಬಾಗುವನು. ಈ ಮೇಲಿನ ನ್ಯಾಯ ನಿರ್ಣಯದ ಹೇಳಿಕೆಯನ್ನು ನೀಡುವುದಕ್ಕೆ ಸಾಟ್ಟೆ ಎಂದು ಹೇಳುತ್ತಾರೆ.

೬. ತೀರ್ಪು : ಪ್ರತಿ ನ್ಯಾಯಕ್ಕೆ ಇಂತ ತಪ್ಪಿಗೆ ಇಷ್ಟು ದಂಡ ಎಂದು ಈ ನಮ್ಮ ಮೌಖಿಕ ಸಂವಿಧಾನ ಇದ್ದಂತೆ ಸಂವಿಧಾನ ಕಟ್ಟಳೆ ಇದ್ದಂತೆ ಸಾಲು ಸಾಕ್ಷಿ ಮೇಲೆ ತೀರ್ಪನ್ನು ನೀಡಲು ಈ ಕೆಳಗಿನಂತೆ ಮೌಖಿಕವಾಗಿ ಒಂದು ಸಂವಿಧಾನ ಈ ಕುಲ ಪಂಚಾಯಿತದಲ್ಲಿ ಕಾಲಾನುಕಾಲ ದಿಂದ ಬಂದಿರುತ್ತದೆ. ಇದರಲ್ಲಿ ಹಣದ ಮೌಲ್ಯ ವ್ಯತ್ಯಾಸವಾಗಬಹುದು ವಿನಹ ಬೇರೆ ಯಾವ ರೀತಿಯ ಬದಲಾವಣೆಗಳಲ್ಲ.

೧. ಸಹ ಕುಲಸ್ಥನನ್ನು ಅನ್ನಬಾರದ ಮಾತಿನಿಂದ ಬಯ್ಯದು ನಿಂದನೆ ಮಾಡಿದರೆ (ನೋಡಿವಟ್ಟಾಂ) ಬಾಯಿತಪ್ಪು ಎರಡು ರೂಪಾಯಿಗಳು.

೨. ಸುಳ್ಳು ಹೇಳಿದರೆ (ಅಬದ್ಧಾನಿಕಿ) ಆರು ರೂಪಾಯಿ ತಪ್ಪು.

೩. ಸಹ ಕುಲಸ್ಥನನ್ನು ಚಪ್ಪಲೆಯಿಂದ ಒಡೆಯುತ್ತೇನೆ ಎಂದು ಹೇಳುವುದಾಗಲಿ ಅಥವಾ ಓಡೆದರು. ೨೪ ರೂಪಾಯಿಗಳು ತಪ್ಪು ಇದು ಅನಿಷ್ಟ

೪. ಚಾಡಿ ಹೇಳುವುದಾಗಲಿ ಚಾಡಿಯಿಂದ ಜಗಳಮಾಡಿಸುವುದಾಗಲಿ (ತಾಕಟ್ಟು) ತಪ್ಪು ೨೪ ರೂಪಾಯಿಗಳು ತಪ್ಪು.

೫. ಕಳ್ಳತನ ಮಾಡಿದರೆ ದೊಂಗ ತಪ್ಪು ೨೪ ರೂಪಾಯಿಗಳು ತಪ್ಪು.

೬. ಸಹ ಕುಲಸ್ಥನನ್ನು ಹೊಡೆದಾಗ ಅಕ್ಕಾಂ ತಪ್ಪು ೨೪ ರೂಪಾಯಿ ದಂಡ

೭. ವ್ಯಭಿಚಾರ ಮಾಡಿದರೆ ಮತ್ತು ಮಾಡಿಸಿದರೆ ರಂಕು ತಪ್ಪು ೨೪ ರೂಪಾಯಿ ದಂಡ ಗಂಡು ಮಕ್ಕಳಿಗೆ ಮಾತ್ರ ಹೆಣ್ಣು ಮಕ್ಕಳಾದರೆ ಅವರನ್ನು ಕುಲದಿಂದ ಹೊರಗೆ ಹಾಕುತ್ತಾರೆ. ಗಂಡನ ಮನೆಯ ಹೆಂಗಸು ಸಂಬಂಧ ಬೇರೆಯವರು ಮಾಡಿದ ಅವಳ ಗಂಡ ಹನ್ನೆರಡು ರೂಪಾಯಿ ರಂಕು ತಪ್ಪು ಇಡಬೇಕಾಗುತ್ತದೆ. ಅದೆ ತವರುಮನೆ ಹುಡುಗಿ ಬೇರೊಬ್ಬನ ಸಂಘ ಮಾಡಿದರೆ ಹುಡುಗಿಯ ತಂದೆ ಹನ್ನೆರಡು ರೂಪಾಯಿಗಳು ತಪ್ಪು ದಂಡ ಕೊಡಬೇಕಾಗುತ್ತದೆ ಮತ್ತು (ಕುಂಡ ಶಾಟೆ) ಗಡಿಗಿ ಮರ ತಿಪ್ಪೆಯ ಮೇಲೆ ಎಸೆಯಬೇಕು.

೮. ಅನಿವಾರ್ಯ ಕಾರಣದಿಂದ ನ್ಯಾಯಲಯಕ್ಕೆ ಮತ್ತು ಪೋಲಿಸ್ ಸ್ಟೇಷನ್‌ಗೆ ಕುಲಸ್ಥರು ಹೋದರೆ ೬ ರೂಪಾಯಿದಿಂದ ವಿಧಿಸುವರು.

**೭. ಮುಗಿಂಪು (ಮುಕ್ತಾಯ) :** ತಪ್ಪು ಮಾಡಿದವರಿಗೆ ದಂಡ ವಿಧಿಸಿದ ನಂತರ ಆ ಇಬ್ಬರ ವ್ಯಕ್ತಿಗಳನ್ನು ಕೈಕೈ ಜೋಡಿಸಿ ಈ ರೀತಿ ಹೇಳಿಸುವರು. ಕೋಪ, ತಾಪದಲ್ಲಿ ಮಾನಸಿಕ ಸ್ಥಿಮಿತ ಕಳೆದುಕೊಂಡು ನಾವು ತಪ್ಪುಗಳನ್ನು ಮಾಡಿದ್ದೇವೆ ಇನ್ನೂ ಮುಂದೆ ಯಾವುದೇ ರೀತಿಯ ತಪ್ಪುಗಳನ್ನು ಮಾಡುವುದಿಲ್ಲ ಎಂದು ಪಂಚಾಯಿತಿ ಕಟ್ಟೆಯಲ್ಲಿ ರಾಜೀ ಮಾಡುತ್ತಾರೆ. ನಂತರ ಅವರಿಬ್ಬರಿಗೆ ಮಾತುಗಳು ವಿನಿಮಯ ಮಾಡಿಸಿ ನ್ಯಾಯ ಪಂಚಾಯಿತಿಯ ಎಲ್ಲಾ ಹಿರಿಯರಿಗೆ ಶರಣಾರ್ಥಿ ಮಾಡಲು ಹೇಳುತ್ತಾರೆ.

**ಪಂಚಾಯಿತಿ ವರ್ಗೀಕರಣ**

೧. ಚುಟ್ಟುಪಕ್ಕಲ ಪಂಚಾಯಿತಿಲು (ಬಂಧು ಬಳಗದ ಪಂಚಾಯಿಗಳು)

೨. ಕೊಟ್ಟುಕುನ್ನ ಪಂಚಾಯಿತಿಲು (ಹೊಡೆದಾಡಿದ ಜಗಳ)

೩. ರಂಕು (ವ್ಯಭಿಚಾರ)

೪. ದೆಯ್ಯಾಲು ನ್ಯಾಯಮು (ಮೃತರ ಪಂಚಾಯಿತಿ)

**೧. ಚುಟ್ಟಾಲು ಪಕ್ಕಾಲು ಪಂಚಾಯಿತಿಲು (ಬಂಧುಬಳಗದ ಪಂಚಾಯಿತಿಗಳು) :** ಬಂಧು ಬಳಗದಲ್ಲಿ ಕೊಟ್ಟು ತೊಗೊಳ್ಳುವ ವ್ಯವಹಾರದಲ್ಲಿ ಪಂಚಾಯಿತಿ ನಡೆದರೆ ಮನೆಯಲ್ಲಿರುವ

ಹಿರಿಯರು ಸೇರಿ ಬುದ್ಧಿವಾದ ಹೇಳಿಕಳುಹಿಸುವರು. ಒಂದು ವೇಳೆ ಗಂಡ ಹೆಂಡಿರಜಗಳ ಸಂಬಂಧ ಮುರಿದು ಹೋಗುವ ಪರಿಸ್ಥಿತಿ ಬಂದಾಗ ಈ ರೀತಿ ನಿರ್ಣಯಿಸುತ್ತಾರೆ. ಗಂಡ ಹೆಂಡತಿಯನ್ನು ಬೇಡ ಎಂದಾಗ ಹೆಂಡತಿಯ ಸೇರಗಿನಲ್ಲಿ ನಾಲ್ಕಣೆ ಕಟ್ಟಿ ಬಿಡುವುದುಂಟು. ಅದೇ ಹೆಂಡತಿ ಗಂಡನನ್ನು ಬೇಡ ಎಂದಾಗ ಅವರಿಗಾದ ಮದುವೆ ಖರ್ಚನ್ನು ಕಟ್ಟಿಕೊಟ್ಟು ಸಂಬಂಧ ಮುರಿದು ಕೊಳ್ಳುತ್ತಾರೆ.

೨. ಕೊಟ್ಟುಕುನ್ನ ಪಂಚಾಯತಿ (ಹೊಡೆದಾಡಿದ ಪಂಚಾಯಿತಿಗಳು) : ಇದರಲ್ಲಿ ಕೈಕಾಲು ಮುರಿದರೆ ಇದನ್ನು ಅಕ್ಕಾಂ ತಪ್ಪಾಗಿ ಪಂಚಾಯಿತಿ ಮಾಡುತ್ತಾರೆ. ಕಾಲುಕ್ಕೆ ಮುರಿದು ಹೋದ ವರಿಗೆ ಅವನು ಸುಧಾರಿಸುವವರೆಗೆ ಆರ್ಯುವೇದಿಕ ಔಷಧಿಗಳನ್ನು ಕೊಟ್ಟು ಊಟದಲ್ಲಿ ಕರಿಕೋಳಿ ಜಾಜಿಕಾಯಿ, ಜಾಪತ್ರಿ ಹಾಕಿ ಅಡುಗೆ ಮಾಡಿ ತಿನಿಸಬೇಕು. ಆಮೇಲೆ ಕರಿ ಮೇಕೆ ತಲೆಯನ್ನು ಗೋಧಿ ಚಪಾತಿ ಸರಾಯಿ ಮತ್ತು ಕೋಳಿ ತತ್ತಿ ಇವೆಲ್ಲ ಆಹಾರ ಪದಾರ್ಥಗಳನ್ನು ಅವನ ಕೈಕಾಲುಗಳು ಸರಿಹೋಗುವವರೆಗೆ ಆರೈಕೆ ಮಾಡುತ್ತಿರಬೇಕು.

ಕೂನಿ ಪಂಚಾಯಿತಿಯಲ್ಲಿ ಕೂನಿಯಾದ ಸಂಬಂಧಿತರು ಕುರಿ, ಕೋಳಿಗಳನ್ನು ತಂದು ಕೊಯ್ದು ತಿನ್ನುತ್ತಾ ಹೆಂಡ ಸರಾಯಿ ಕುಡಿಯುತ್ತಾ ವಾರಗಟ್ಟಲೆ ಪಂಚಾಯಿತಿ ಮಾಡುವರು ಈ ಪಂಚಾಯಿತಿ ತೀರ್ಮಾನದಲ್ಲಿ ಕೂನಿ ಮಾಡಿದ ವ್ಯಕ್ತಿಯ ಮೇಲೆ ವೆಚ್ಚ ಖರ್ಚುಗಳನ್ನು ಹಾಕಿ ಪರಿಹಾರವನ್ನು ಕೊಡಿಸುತ್ತಾರೆ.

೩. ರಂಕು ಪಂಚಾಯಿತಿ : ಗಂಡು ವ್ಯಭಿಚಾರ ಮಾಡಿದರೆ ದಂಡ ಹಾಕಿ ಕುಲಸ್ಥರಲ್ಲಿ ಸೇರಿಸಿಕೊಳ್ಳುತ್ತಾರೆ. ಅದೆ ಹೆಂಗಸು ವ್ಯಭಿಚಾರ ಮಾಡಿದರೆ ಬೇರೆ ಸಮುದಾಯವಿದ್ದರೆ ಕುಲ ದಿಂದ ಹೊರಕ್ಕೆ ಹಾಕುವುದು. ಅದೆ ಸಮುದಾಯದ ಹೆಂಡತಿಯದವನಿದ್ದರೆ ಕೂಡಿಕೆ ಮದುವೆ ಮಾಡುವರು. ಹೆಂಡತಿ ಇದ್ದವನಿದ್ದರೆ ಎರಡನೆ ಹೆಂಡತಿಯಾಗಿ ಉಳಿಯಬಹುದು. ಗಂಡಸತ್ತ ಹೆಂಗಸು ಅದೆ ಸಮುದಾಯದ ಬೇರೊಬ್ಬನನ್ನು ಸಂಘ ಮಾಡಿದರೆ ಅವರಿಬ್ಬರಿಗೆ ಹುಡಿಕಿ ಮದುವೆ ಮಾಡುತ್ತಾರೆ.

೪. ಮೃತರ ಪಂಚಾಯಿತಿ : ಮೃತ ಆದಂತ ವ್ಯಕ್ತಿಗಳು ದೆವ್ವವಾಗಿ ಕುಲಸ್ಥರನ್ನು ಕಾಡಿಸಿದಾಗ ಶಕುನದಲ್ಲಿ ನಿಜವೆಂದು ತಿಳಿದರೆ ಆ ಕುಟುಂಬದವರು ನಿಮ್ಮ ತಾತ ನಿಮ್ಮ ಸಂಬಂಧಿಕ ದೆವ್ವವಾಗಿ ಕಾಡುತ್ತಿದ್ದಾನೆ. ನಿಮ್ಮ ದೆವ್ವವನ್ನು ನೀವು ಕರೆದು ಕೊಳ್ಳಿ ಎಂದು ಪಂಚಾಯಿತಿ ಕಟ್ಟೆ ಏರುತ್ತಾನೆ. ಆಗ ಅದನ್ನು ಆ ದೆವ್ವ ಕೇಳಿದ ಆಹಾರವನ್ನು ಕೊಟ್ಟು ಸಮಾದಾನ ಮಾಡಬೇಕು. ಇದು ಒಂದು ನ್ಯಾಯ ಪಂಚಾಯಿತಿ.

ಇವರು ಊರುಗಳಲ್ಲಿ ಬರುವ ಚಿಕ್ಕ ಪುಟ್ಟ ಜಗಳಗಳಿಗೆ ನ್ಯಾಯ ಪಂಚಾಯಿತಿ. ಲೇವದೇವಿ ಪಂಚಾಯಿತಿ ಸಮುದಾಯದಲ್ಲಿ ಹಣವಿರುವಂತವರು ಇತರ ವ್ಯಕ್ತಿಗಳಿಗೆ ಮದುವೆ ಮುಂತಾದ ಕಾರ್ಯಗಳಿಗೆ ಮಾತಿನಿಂದಲೆ ಸಾಲನೀಡುವ ಸಂಪ್ರದಾಯ ಇದು ಜಗಳುಗಳು ಆದಾಗ ಅದನ್ನು ಸರಿಪಡಿಸಲು "ಲೇವದೇವಿ ಪಂಚಾಯಿತಿಲು" ಎನ್ನುತ್ತಾರೆ.

ಕ್ರಿಮಿನಲ್ ನ್ಯಾಯ: ಬುಡ್ಗ ಜಂಗಮರಲ್ಲಿಯ ಪುರುಷರು ಅಥವಾ ಸ್ತ್ರೀ ಕಳ್ಳತನ,

ಕೊಲೆ ರೇಫ್ ಇತ್ಯಾದಿ ಯಾವುದಾದರೂ ಒಂದು ಅಪರಾಧದಲ್ಲಿ ಸಿಕ್ಕಿಕೊಂಡು ಪೋಲಿಸ್ ಸ್ಟೇಷನ್‌ನಲ್ಲಿ ಒಂದೇ ಒಂದು ತಾಸು ಜೈಲಿನಲ್ಲಿದ್ದರೂ, ನಂತರ ಎಲ್ಲ ನ್ಯಾಯ ಮುಗಿಸಿಕೊಂಡು ಮನೆಗೆ ಮರಳಿ ಬಂದರೂ ಬುಡ್ಗಜಂಗಮ್ ನ್ಯಾಯಾಧೀಶರು ನ್ಯಾಯದ ಪಂಚಾಯಿತಿ ಕೂಡಿಸುವರು. ಜೈಲಿನಲ್ಲಿದ್ದು ಬಂದು ಅವನು ಸಂಪೂರ್ಣ ಅಪರಾಧಿಯಾಗಿದ್ದರೆ, ಅಪರಾಧದ ಆಧಾರದ ಮೇಲೆ ಸಮಾಜದವರು ಅವನಿಗೆ ದಂಡ ಹಾಕುವರು. ಎಲ್ಲರಿಗೂ ತಪ್ಪಾಯಿತು ಅಂತಾ ಸಭೆಗೆ ಕೈಮುಗಿದು ಬೇಡಿಕೊಳ್ಳಲು ತಿಳಿಸುವರು. ಇಷ್ಟೆಲ್ಲ ಆದ ಮೇಲೆ ಅವನೊಬ್ಬ ಬುಡ್ಗ ಜಂಗಮ್ ಕುಲದೈವದ ಮನುಷ್ಯ ಇಲ್ಲದಿದ್ದಲ್ಲಿ ಅವನೊಬ್ಬ ಕುಲದಲ್ಲಿ ಇಲ್ಲದವನು ಎಂದರ್ಥ. ಒಂದು ವೇಳೆ ನಿರಪರಾಧಿಯಾಗಿದ್ದರೆ, ಅವರ ಮನಸ್ಸಿಗೆ ಶಾಂತಿ, ಸಹನೆ ಹೇಳುವರು. ಜೊತೆಗೆ ಬಡತನದಲ್ಲಿದ್ದು ಮೇಲಾಗಿ ಬಹಳ ಹಣ ಖರ್ಚಾಗಿದ್ದರೆ, ಇನ್ಯಾವುದಾದರು ನ್ಯಾಯದಲ್ಲಿ ಬಂದಂತಹ ದಂಡದ ಹಣ ಇವರಿಗೆ ಸಹಾಯ ರೂಪದಲ್ಲಿ ಕುಲದೈವದವರು ಕೊಡುವರು.

ಶಿಕ್ಷೆಗಳ ವಿವರ : ನ್ಯಾಯ ಪಂಚಾಯಿತಿಯಲ್ಲಿ ನ್ಯಾಯತೀರ್ಪಿನಂತೆ ಶಿಕ್ಷೆ ಮತ್ತು ದಂಡ ವಿಧಿಸುತ್ತಾರೆ. ಆದರೆ ಯಾರಿಗೂ ಜೀವಾವಧಿ ಅಥವಾ ಮರಣ ದಂಡನೆಯಂತಹ ಶಿಕ್ಷೆಗಳು ಜರುಗಿರುವುದಿಲ್ಲ. ಆದರೆ ಸುಪ್ರೀಮ್ ನ್ಯಾಯಗಳು ಮಾತ್ರ ಆಗುತ್ತವೆ ಆಯಾ ತಪ್ಪುಗಳಿಗೆ ತಕ್ಕ ಹಾಗ ಶಿಕ್ಷೆಯನ್ನು ವಿಧಿಸುತ್ತಾರೆ.

೧. **ಮದುವೆ ಹೆಣ್ಣನ್ನು ಬಿಡುವುದು:** ಮದುವೆ ಆಗಿ ಕೆಲವು ದಿನಗಳ ಕಾಲ ಸಂಸಾರ ಸಾಗಿಸಿ ಗಂಡ ಹೆಂಡತಿ ಮಧ್ಯ ಜಗಳಬಂದು ಇಬ್ಬರು ಸಂಸಾರ ಪೂರ್ಣಪ್ರಮಾಣದಲ್ಲಿ ಸಹ ಜೀವನ ನಡೆಸಲು ಸಾಧ್ಯವಿಲ್ಲದಿದ್ದಾಗ ೫ ಪಾವಲಿಗಳನ್ನು ಅವಳ ಸೆರಗಿನಲ್ಲಿ ಕಟ್ಟಿ ನೆಲದ ಮೇಲೆ ಒಂದು ವರ್ತುಳ ಸರ್ಕಲ್ ಮಾಡಿ ಸೆರಗಿಗೆ ಪಂಚಾಯಿತಿಯ ನಿರ್ಣಯದಂತೆ ಅವಳ ಗಂಡನ ಬೆಡಗಿಗೆ ಸಂಬಂಧ ಕಡಿದು ಹಾಕಿ ತವರು ಮನೆಯ ಬೆಡಗಿಗೆ ಸೇರಿಸಿ ಅವಳನ್ನು ಬಿಡುಗಡೆ ಮಾಡುತ್ತಾರೆ. ಇದು ದಕ್ಷಿಣ ಕರ್ನಾಟಕದಲ್ಲಿ ಈ ರೀತಿಯಾದ ಶಿಕ್ಷೆ ವಿಧಿಸುತ್ತಾರೆ.

೨. **ಸಹೋದರ ಜಗಳಕ್ಕಾಗಿ:** ಆಗಿನ ಕಾಲದಲ್ಲಿ ೨೫ ರೂಗಳನ್ನು ತಪ್ಪುದಂಡ ರೂಪದಲ್ಲಿ ದಂಡ ಇತ್ತೀಚಿನ ದಿನಗಳಲ್ಲಿ ೧೦೦ ರೂಗಳನ್ನು ವಿಧಿಸುತ್ತಿರುವುದು ದಕ್ಷಿಣ ಕರ್ನಾಟಕ ಕೆಲವು ಭಾಗಗಳಲ್ಲಿ ಕಂಡುಬರುತ್ತದೆ.

೩. **ವ್ಯಕ್ತಿಯು ಅನ್ಯ ಸಮುದಾಯದ:** ಹೆಣ್ಣನ್ನು ತಂದಾಗ ಅದಕ್ಕಾಗಿ ಕುಲತೆಗೆದುಕೊಳ್ಳುವ ನಿರ್ಣಯಗಳು ೨೫ ರೂ ದಂಡಹಾಕಿ ಸುಟ್ಟಚಿನ್ನದ ಉಂಗುರದಿಂದ ತುದಿನಾಲಿಗೆಯನ್ನು ಸುಟ್ಟು, ತಲೆ ಬೋಳಿಸಿ ಈಶ್ವರದೇವಸ್ಥಾನದ ಹತ್ತಿರ ಪೂಜೆ ಮಾಡಿಸಿ ನೀರು ಪಾನಕ ಎಲ್ಲರಿಗೆ ಕೊಟ್ಟು ಕುಲದಲ್ಲಿ ಸೇರಿಸಿಕೊಳ್ಳುವರು.

೪. **ಸಮುದಾಯದ ಹೆಣ್ಣು** ಅನ್ಯ ಸಮುದಾಯದ ವ್ಯಕ್ತಿಯೊಡನೆ ಓಡಿಹೋದರೆ ಮರಳಿ ಕರೆದು ಕೊಳ್ಳುವುದಿಲ್ಲ ಇದು ನ್ಯಾಯ ಪಂಚಾಯಿತಿ ಕುಲಸ್ಥರ ಕಟ್ಟು ನಿಟ್ಟಿನ ಕಡಿವಾಣೆಯಾಗಿದೆ.

೫. ಕುಲಸ್ಥರಿಂದ ನಿರ್ಣಯಿಸಲ್ಪಟ್ಟ ತೀರ್ಪುಗೆ ಒಪ್ಪದಿದ್ದರೆ ಮೂರು ತಿಂಗಳುಗಳ ಕಾಲ ಕಾಯ್ದು ನಂತರ ಸಮಾಜದ ಕುಲಪಂಚಾಯಿತಿಯು ಕುಲಮದಿಂದ ಹೊರಹಾಕುತ್ತಾರೆ.

೬. ನೋಟಿ ತಪ್ಪು (ಬಾಯಿ ತಪ್ಪು) ಪಾಸ್ಕಮು (ಚಪ್ಪಲಿ) ಎಂದರೆ ೫ ರೂ ದಂಡ ಪಾಸ್ಕಮು (ಚಪ್ಪಲಿ) ಎತ್ತಿದರೆ ೨೫ ರೂ ದಂಡ ಪಾಸ್ಕಮತೋನಿ (ಚಪ್ಪಲ್ಲಿ) ಹೊಡೆದರೆ ೫೧ ರೂ ದಂಡ ಹಾಕುತ್ತಾರೆ. ಆದರೆ ಈಗ ದಕ್ಷಿಣ ಕರ್ನಾಟಕ ಕೆಲವು ಪ್ರಮುಖ ಪಟ್ಟಣ ಪ್ರದೇಶಗಳಲ್ಲಿ ಕ್ರಮೇಣ ರೂ ೨೫೦ ರೂ ೫೦೦, ೧೦೦೧ ರೂಗಳನ್ನು ದಂಡ ವಿಧಿಸುತ್ತಿದ್ದಾರೆ.

೭. ಬೈಗುಗಳಿಗೆ ಅವಾಚ್ಯಶಬ್ದಗಳಿಗೆ ೫ ರೂಗಳನ್ನು ಹಾಕುತ್ತಾರೆ.

೮. ಗಂಡನ ಮನೆಯ ಹೆಣ್ಣನ್ನು ಸಮುದಾಯದ ವ್ಯಕ್ತಿ ಎತ್ತಿಕೊಂಡ ಹೋದಾಗ ೧೫ ರೂಗಳನ್ನು ಹಾಕುತ್ತಾರೆ. ಮತ್ತು ಹೆಂಡತಿಯನ್ನು ಕಳೆದುಕೊಂಡ ವ್ಯಕ್ತಿಗೆ ೪೦೦ ರೂ. ಗಳನ್ನು ಗಂಡನ ಮನೆಯವರಿಗೆ ಕೂಡಿಸುತ್ತಾರೆ.

೯. ಪುಟ್ಟಿಂಟಿ ಆಡಪಿಲ್ಲ (ಅಮ್ಮಾಯಿ) ಹೆಣ್ಣನ್ನು ಸಮುದಾಯದ ವ್ಯಕ್ತಿ ಎತ್ತಿಕೊಂಡು ಹೋದಾಗ ೫ ಪಾವಲಿ ಶೆರಗಿನಲ್ಲಿ ಕಟ್ಟಿ ಆತನಿಗೆ ಕೂಡಿಕೆ ಮಾಡಿಕಳಿಸುವುದು ಮತ್ತು ೧೫ ಪಾವಲಿ ದಂಡವಿಧಿಸುವುದು. ಚಾಪೆತುಳಿತ, ಸಾಪ ತೊಕ್ಕಾಡಾನಿ.

೧೦. ನ್ಯಾಯ ಕೇಳುವ ವ್ಯಕ್ತಿಗೆ ಕುಲನ್ಯಾಯ ಪಂಚಾಯಿತಿ ತೀರ್ಪು ಸರಿ ಅನಿಸದಿದ್ದರೆ ಅಥವಾ ನ್ಯಾಯ ಸಿಗದಿದ್ದಾಗ ಮೇಲೆ ಪಂಚಾಯಿತಿ ಸೇರಿಸಲು ತಿಳಿಸುತ್ತಾನೆ. ಆಗ ಕುಲದ ಪೆದ್ದಮಣಿಸಿ ಅದನ್ನು ವಿಚಾರಿಸಿ ಬೇರೆ ಬೇರೆ ಗಡ್ಡ(ಕಟ್ಟ)ದ ನ್ಯಾಯಾಧೀಶರನ್ನು ಕರೆಯಿಸಿ ನ್ಯಾಯ ಪಂಚಾಯಿತಿ ಮಾಡುತ್ತಾರೆ. ಹೀಗೆ ಮಾಡುವಾಗ ವಾದಿ ಪ್ರತಿವಾದಿಗಳ ಕಡೆ ಯಿಂದ ಹೆಚ್ಚಿನ ನ್ಯಾಯ ಪಂಚಾಯಿತಿಯ ಖರ್ಚುವೆಚ್ಚಕ್ಕಾಗಿ ಹಣ ಮತ್ತೆ ಹೆಚ್ಚಿಗೆ ಕಡ್ಡಿಹಾಕಿಸಿ ಕೊಳ್ಳುತ್ತಾರೆ. ಇಲ್ಲಿಯೂ ಬಗೆ ಹರಿಯದಿದ್ದರೆ ಇವರಲ್ಲಿ ಸುಪ್ರೀಮ್ ಕೋರ್ಟುಗಳು ನಡೆಯುವುದುಂಟು ಇವು ೨ ವರ್ಷ ಇಲ್ಲ ೩ ವರ್ಷಕ್ಕೊಮ್ಮೆ ನೂರಾರು ತಕರಾರುಗಳನ್ನು ಬಗೆಹರಿಸಿಕೊಳ್ಳುವ ಪರಿಪಾಟವಿದೆ. ಅವುಗಳ ಪಟ್ಟಿಯಲ್ಲಿ ಇದನ್ನು ಸೇರಿಸುತ್ತಾರೆ. ಇತ್ತೀಚಿನ ದಿನಗಳಲ್ಲಿ ೨ವರ್ಷಕೊಮ್ಮೆ ಕೊಪ್ಪಳ ಜಿಲ್ಲೆಯ ಕುದುರೆ ಮೋತಿಯಲ್ಲಿ ವಿಜಾಪುರ ಜಿಲ್ಲೆ ಸಿಂದಿಗಿಯ ಯಕ್ಕಿಂಚಿಯಲ್ಲಿ ಸೇರಿ ಮಹಾರಾಷ್ಟ್ರದ ಸೊಲ್ಲಾಪುರದ ನೆಹರು ನಗರದಲ್ಲಿ, ಜಮಖಂಡಿ, ಬಳ್ಳಾರಿ, ಸಿದ್ದಾಪುರ, ಬೆಂಗಳೂರು, ರಾಮನಗರ, ಕೊಲಾರಗಳಲ್ಲಿ ನ್ಯಾಯ ಪಂಚಾಯಿತಿಗಳನ್ನು ಬಗೆಹರಿಸಿಕೊಳ್ಳುತ್ತಾರೆ.

**ಕಟ್ಟಗಳು (ಗಡ್ಡ) ನ್ಯಾಯಸ್ಥಳ**

ಹೊಟ್ಟೆಪಾಡಿನ ಜೀವನೋಪಾಯಕ್ಕಾಗಿ ಆಯಾ ಪ್ರದೇಶಗಳಿಗೆ ವಲಸೆ ಹೋಗಿ ತಮ್ಮ ಕುಲಕಸಬುಗಳ ಮೂಲಕ ಭಿಕ್ಷೆ ಬೇಡುತ್ತಾ ಸಾಗಿರುತ್ತಾರೆ. ಆದರೆ ತಮಗೆ ಇಷ್ಟಬಂದ ಕಡೆಗಳಲ್ಲಿ ಪದೆಪದೆ ಅದೇ ಪ್ರದೇಶ ಸುತ್ತುವುದರಿಂದ ಆ ನೆಲೆ ಮತ್ತು ಪ್ರದೇಶವನ್ನೆ ನಂಬಿ ಅಲ್ಲಿಯೇ ಮತ್ತು ಅದೇ ಪ್ರದೇಶದಲ್ಲಿ ತಿರುಗಾಟ ಪ್ರಾರಂಭಿಸಿದರು. ಅನೇಕ ವರ್ಷಗಳ ಕಾಲ

ಒಂದೇ ಭಾಗದ ಕಡೆ ಸಂಚಾರಿಸುವ ಇವರು ಈ ಪ್ರದೇಶವನ್ನು ಭಾಗ ಈ ಭಾಗದಲ್ಲಿ ಬೇರೆಯಾರು ಬುಡ್ಗಜಂಗಮ ಕಲಾವೃತ್ತಿಯ ಭಿಕ್ಷಾಟನೆಗೆ ಬರುವಂತಿಲ್ಲ ಎಂದು ಹೇಳುತ್ತಿದ್ದರು. ಇಂತಹ ಪ್ರದೇಶಗಳಲ್ಲಿ ವಾಸವಾಗಿರುವ ಅನೇಕ ಹಳ್ಳಿಗಳ ಸಮುದಾಯ ದವರು ವರ್ಷಕ್ಕೊಮ್ಮೆ ನ್ಯಾಯ ಪಂಚಾಯಿತಿ ಮಾಡಲು ಒಬ್ಬರಿಗೊಬ್ಬರು ಪರಸ್ಪರ ಸಂಬಂಧ ಬೆಳೆಸಲು ಮಾತುಕತೆ ಹಬ್ಬಹರಿದಿನಗಳನ್ನು ಮಾಡಲು ಸೇರುವ ಸ್ಥಳಕ್ಕೆ ಬಿಡಾರ, ಗಡ್ಡ ಎನ್ನುತ್ತಾರೆ.

ಆಂಧ್ರದಲ್ಲಿರುವ ಗದ್ವಾಲ ಕಟ್ಟಾ, ಗೋಲ್ಕಂಡಕಟ್ಟಾ, ಹೈದ್ರಾಬಾದನ ಪಲಕನೋಮಾದ ಜಂಗಮ್‌ಮೆಟ್ಟ, ಸಿನಂದಾಡ ಬಿಡಾರ ಕರ್ನಾಟಕದಲ್ಲಿ ಬೊಮ್ಮನಳ್ಳಿ,ಕಟ್ಟಾ, ಕುದುರೆ ಮೋತಿ ಕಟ್ಟಾ ರಾಮಮೂರ್ತಿ ನಗರ ಕಟ್ಟಾ, ಬೆನ್ನಿಗಾನ ಛತ್ರದಕಟ್ಟಾ ಹೆಬ್ಬಾಳ ಛತ್ರದಕಟ್ಟಾ, ಮೈಸೂರು ರಸ್ತೆಯ ಕಸ್ತೂರಿಬಾ ನಗರ ಅಂಚೆಪಾಳ್ಯ ಆಲದ ಮರದ ಅಶ್ವತಕಟ್ಟಾ (ವಿಜಾಪೂರ) ಸಿಂದಗಿಕಟ್ಟಾ, ಮಹಾರಾಷ್ಟ್ರದಲ್ಲಿ ಬಾಂಬೆ, ಕಟ್ಟಾ ನೆಹರುನಗರ ಸೊಲ್ಲಾಪೂರಕಟ್ಟಾ ಸಿಕಂದರ ಚಾಕಳಿಕಟ್ಟಾ, ಮೀರಟಕಟ್ಟಾ, ಗದ್ರಾಳ ಬಿಢಾರಕಟ್ಟಾ, ಗುಂತಕಲ್‌ಕಟ್ಟಾ ಮುಂತಾದವು.

## ೭

# ಆರ್ಥಿಕ ಜೀವನ

ಸಮಾಜದ ವ್ಯಕ್ತಿ ಕುಟುಂಬದ ಆರ್ಥಿಕ ವ್ಯವಸ್ಥೆಗೆ ಅತ್ಯವಶ್ಯಕ. ಆದರೆ ಬುಡ್ಗಜಂಗಮರಿಗೆ ಮಕ್ಕಳೆ ಬಂಗಾರ, ಕಲೆಯೇ ಅವರ ಆಸ್ತಿ ಅಂತಸ್ತು ಆಗಿದೆ. ತನ್ನೊಡಲಲ್ಲಿ ನಾಡಿನ ಅನೇಕ ದಾರ್ಶನಿಕರ ಮತ್ತು ಪುಣ್ಯಪುರುಷರ ಚರಿತ್ರೆಯನ್ನು ಕೇಳಿತಿಳಿದುಕೊಂಡು ಇಡೀ ಸಾಹಿತ್ಯದ ಭಂಡಾರವನ್ನು ತಮ್ಮ ತಲೆ ಬುರುಡೆಯಲ್ಲಿಟ್ಟುಕೊಂಡು ಮೌಖಿಕ ಸಾಹಿತ್ಯವನ್ನು ನಾಡಿನ ನಗರ, ಪಟ್ಟಣ ಹಳ್ಳಿಕೇರಿ ಮತ್ತು ತೋಟದ ಮನೆಮನೆಗೆ ತೆರಳಿ ಅವರ ಮುಂದೆ ಕಲಾ ಪ್ರದರ್ಶನ, ಹಾಗೂ ಶಾಸ್ತ್ರ, ಕಥೆ, ಮೋಜಿನ ಆಟ ಸಿದ್ದಾರಾಟ ಬುರ‍್ರಕಥೆಗಳನ್ನು ಪ್ರದರ್ಶಿಸಿ ಅವರಿಂದ ತನ್ನ ಕುಟುಂಬಕ್ಕೆ ಬೇಕಾಗುವ ಕೇವಲ ಆಹಾರವನ್ನು ಎಲ್ಲ ಮನೆಗಳಿಂದ ಸ್ವೀಕರಿಸಿ ಜೀವನ ಸಾಗಿಸುತ್ತಾರೆ.

ನಾಡಿನ ಸಂಸ್ಕೃತಿಯನ್ನು ಎಲ್ಲೆಡೆಗೆ ಪ್ರದರ್ಶಿಸಿದ ಇವರಿಗೆ ಬದಲಾಗುವ ಬದಲಾಗುತ್ತಿರುವ ಆಧುನಿಕ ತಂತ್ರಗಾರಿಕೆಯನ್ನು ಸರ್ಕಾರ ಇವರಿಗೆ ಪರಿಚಯಿಸಿ ವಿಶೇಷಯೋಜನೆಗಳನ್ನು ಹಮ್ಮಿಕೊಂಡು ತರಬೇತಿ ಅವಕಾಶ ಕಲ್ಪಿಸಿದ್ದರೆ? ಈ ದಿನ ಆರ್ಥಿಕದಿಂದ ಹೀನಾಯ ಬದುಕಿನೊಂದಿಗೆ ಅಲೆಮಾರಿಗಳಾಗಿ ಜೀವಿಸುತ್ತಿರಲಿಲ್ಲ. ಸಾಂಸ್ಕೃತಿಕ ರಾಯಬಾರಿಗಳಾದ ಇವರು ಸರ್ಕಾರದ ಯಾವ ಯೋಜನೆಗಳು ಇವರಿಗೆ ಸಿಗಲಿಲ್ಲ. ಹಾಗೂ ಯಾವ ಹೊರೆಯು ಸರ್ಕಾರಕ್ಕೆ ಹಾಕಿರುವುದಿಲ್ಲ. ಜೋಳಿಗೆ ಭಿಕ್ಷೆ ಸಾಂಸ್ಕೃತಿಕ ವೇಷಗಳೇ ಮುಖ್ಯ ಜೀವಾಳಗಳು ಈ ಜನಾಂಗದವರು ಆರ್ಥಿಕವಾಗಿ ಸಬಲರಾಗಿರುವುದಿಲ್ಲ. ಇವರಿಗೆ ಯಾವುದೇ ಜಮೀನು ವಗೈರಾ ಇಲ್ಲದೆ ಇರುವುದರಿಂದ ಆರ್ಥಿಕವಾಗಿ ಹಿಂದುಳಿರುತ್ತಾರೆ. ಭಿಕ್ಷಾಟನೆ ನಿಷೇಧಿಸಿದ್ದು, ಆಧುನಿಕತೆಯ ಸೊಗಡಿನಿಂದಾಗಿ ಸಂಪದ್ಭರಿತ ಸಾಂಸ್ಕೃತಿಕ ಕಲೆಗಳಾದ ಬುರ‍್ರಕಥಾ ಹಾಗೂ ಕೇಳಿಕ, ನಾಟಕ ಮುಂತಾದ ಕಲೆಗಳು ಮಂಕಾಗಿರುವುದರಿಂದ ಹೊಸ ಬಟ್ಟೆಗಳನ್ನು ಹೊಲೆಸುವಂತಹ ಸ್ಥಿತಿವಂತರು ತೀರಾ ವಿರಳ ಇವರ ಬಟ್ಟೆಗಳಲ್ಲಿ ಹೆಚ್ಚಾಗಿ ಬೇಡಿ ಪಡೆದುಕೊಂಡಿರುವುದೇ ಆಗಿರುತ್ತದೆ. ಭಿಕ್ಷಾಟನೆಗೆ ಹೋದಾಗ ಕಾಡಿ ಬೇಡಿ ಪಡೆದ ಬಟ್ಟೆಗಳನ್ನೇ ಧರಿಸುತ್ತಾರೆ. ಮದುವೆಯ ಸಂದರ್ಭದಲ್ಲಿ ಹೆಣ್ಣಿನ ತಾಳಿಯನ್ನೊರತುಪಡಿಸಿ ಉಳಿದೆಲ್ಲವೂ ಬೆಳ್ಳಿಯದ್ದೆ ಆಗಿರುತ್ತದೆ. ಮದುವೆಗೆ ತಾಳಿಯನ್ನು ಸಾಮಾನ್ಯವಾಗಿ ದಾನಿಗಳಿಂದ ಪಡೆಯಲಾಗುತ್ತದೆ.

ಆರ್ಥಿಕ ವ್ಯವಸ್ಥೆ "ಬದುಕುವುದಕ್ಕಾಗಿ ಹೋರಾಟ" ಎಂಬುವ ಸಿದ್ಧಾಂತ ಬುಡ್ಗರ ಬದುಕನ್ನು ಮತ್ತು ಬದುಕಿಗೆ ಸೂಕ್ತ ಉದಾಹರಣೆಯಾಗಿದೆ. ಸ್ವಾತಂತ್ರ್ಯ ದೊರೆತು ೬೦ ವರ್ಷಗಳು ಕಳೆದರು ಬುಡ್ಗ ಸಮುದಾಯಕ್ಕೆ ಸರಕಾರ ಯಾವುದೇ ರೀತಿಯ ಸಹಾಯ ಮಾಡದೆ ಇರುವುದು ಆಶ್ಚರ್ಯಕರ ಸಂಗತಿ. ಏಕೆಂದರೆ ಭಾರತ ಸರಕಾರವಾಗಲಿ ಅಥವಾ ಕರ್ನಾಟಕ ಸರಕಾರವಾಗಲಿ ಇಂತಹ ಸಮುದಾಯವನ್ನು ಪತ್ತೆಹಚ್ಚಿ ಅವರ ಪ್ರಗತಿಗಾಗಿ ಶ್ರಮಿಸಬಹುದಿತ್ತು. ಆದರೆ, ಈ ಸಮುದಾಯ ಒಂದು ಕಡೆಗೆ ನೆಲೆಯನ್ನು ಇಲ್ಲಿಯವರೆಗೆ ಕಂಡುಕೊಂಡಿಲ್ಲ. ನಿರಂತರವಾಗಿ ಊರಿಂದ ಊರಿಗೆ ಬದುಕು ಸಾಗಿಸುವ ಸಲುವಾಗಿ ಅಲೆಮಾರಿ ಬದುಕನ್ನು ಅವಲಂಬಿಸಿರುವ ಈ ಸಮುದಾಯ ಜನಗಣತಿ ಮತ್ತು ಮತದಾರರ ಪರಿಷ್ಕರಣಗಳ ವೇಳೆಯಲ್ಲಿ ಇವರು ತಾವು ಒಂದು ಊರಿನ ನಿವಾಸಿಗಳು ಎಂದು ಹೇಳಿಕೊಳ್ಳುವ ಪರಿಕಲ್ಪನೆ ಇವರಲ್ಲಿ ಇರಲಿಲ್ಲ. ಆದ್ದರಿಂದ ಸರಕಾರಗಳಿಗೆ ಇವರ ಆರ್ಥಿಕ ಮಟ್ಟದ ಸುಧಾರಣೆಗಾಗಿ ಯಾವುದೇ ರೀತಿಯ ಸೌಲಭ್ಯವನ್ನು ನೀಡದೇ ಇರಲುಬಹುದು. ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ಈ ಸಮುದಾಯ ಇದ್ದರೂ, ಪರಿಶಿಷ್ಟರಿಗೆ ದೊರೆಯುವ ಯಾವುದೇ ರೀತಿಯ ಸೌಕರ್ಯಗಳನ್ನು ಇವರು ಪಡೆದು ಕೊಂಡಿರುವುದಿಲ್ಲ.

ಕಲೆಗೆ ಮಹತ್ವ ಕಡಿಮೆಯಾದ ನಂತರ ಈಗೀಗ ಊರಿನ ಹೊರ ವಲಯಗಳಲ್ಲಿ ನೆಲೆನಿಂತು ವಾಸಿಸತೊಡಗಿರುವರು. ಮತದ ಆಸೆಗೆ ಕೆಲವು ರಾಜಕೀಯ ಮುಖಂಡರು ಮತದಾರರ ಪಟ್ಟಿಯಲ್ಲಿ ಸೇರಿಸಿದ್ದಾರೆ. ಇವರ ಜಾತಿಯ ಹೆಸರು ಹೇಳಿಕೊಳ್ಳಲು ಇವರಿಗೆ ನಾಚಿಕೆಯಾಗುತ್ತದೆ. ಅಂತಹ ವಿಚಿತ್ರ ಸ್ವಭಾವವನ್ನು ಇವರು ಹೊಂದಿದ್ದಾರೆ. ಇವರ ಆರ್ಥಿಕ ಪರಿಸ್ಥಿತಿ ತೀರಾ ಹದಗೆಟ್ಟಿದೆ. ಏಕೆಂದರೆ ಇವರಿಗೆ ಸ್ಥಿರಾಸ್ತಿ ಇಲ್ಲ ಹಾಗೂ ಯಾವುದೇ ಕೆಲಸದ ನೈಪುಣ್ಯತೆ ಇವರಲ್ಲಿ ಕಂಡು ಬರುವುದಿಲ್ಲ. ಎಲ್ಲಾ ರೀತಿಯ ಕಲೆಗಳನ್ನು ಇವರು ಮಾಡುತ್ತಾರೆ. ಇನ್ನು ಕೆಲವರು ಭಿಕ್ಷಾಟನೆ ಯನ್ನು ಮುಂದುವರಿಸಿದ್ದಾರೆ.

**ಮೂಲಕಸುಬು :** ಬುಡ್ಗ ಜಂಗಮರು ಮೂಲ ಬೇಟೆಯನ್ನು ಅವಲಂಬಿಸಿದವರು ತುಂಬಾ ಧೈರ್ಯಶಾಲಿ ಮತ್ತು ಆರೋಗ್ಯವಂತರಾದ ಇವರು ವೀರಶೈವ ಧರ್ಮಕ್ಕಿಂತ ಮೊದಲೆ ಶೈವ ಮತ ವೈಷ್ಣವ ಮತಾವಲಂಬಿಗಳಾಗಿದ್ದು ಒಂದು ಸಮುದಾಯ ಶೈವಧರ್ಮದ ಪ್ರಚಾರ ಮಾಡುತ್ತ ನಡೆದರೆ ಇನ್ನೊಂದು ಸಮುದಾಯ ವೈಷ್ಣವ ಧರ್ಮ ಪ್ರಚಾರ ಮಾಡುತ್ತ ನಡೆದರು.

ಶೈವಧರ್ಮದ ಪ್ರಚಾರದಲ್ಲಿ ತೊಡಗಿರುವ ಈ ಒಂದು ವರ್ಗವನ್ನು ಅವರಿಗೆ ಒಂದೊಂದು ಹೆಸರುಗಳು ಕೂಡ ಶ್ರೀಶೈಲ ಪೀಠದ ಅನುಯಾಯಿಗಳಿಂದ ಕರೆಯಲ್ಪಟ್ಟವು. ಯಾರು ಶಂಕುಜೋಳಿಗೆ ಹಿಡಿದು ಹೊರಟರೊ ಅವರಿಗೆ ಶಂಕು, (ಸಂಕುಲೊಳು ಮನೆತನದವ ರೆಂತಲು), ಯಾರು ವಿಭೂತಿ ಧರಿಸಿ ಹೊರಟರೊ ಅವರಿಗೆ ವಿಭೂತಿಯವರೆಂತಲೂ ಯಾರು ರುದ್ರಾಕ್ಷಿಧರಿಸಿ ಹೊರಟರೊ ಅವರಿಗೆ ರುದ್ರಾಕ್ಷಿಯೋಳು ಹೀಗೆಯೆ ಬಾದಿಗೋಳು, ದೂಪಮೋಳು ಘಂಟೋಳು ಎಂದು ಕರೆದರೆ ಮುಂದುವರೆದು ಆ ಪ್ರದೇಶಕ್ಕೆ ತಕ್ಕಂತೆ ಅವರು ಹಾಕುವ ವೇಷಕ್ಕೆ ಹಾಗೂ ವಾಸಿಸುವ ಪ್ರದೇಶಗಳ, ಮತ್ತು ಕಾರ್ಯ ವೈಕರ್ಯಗಳ ಮೇಲೆ ಬೇಡುಗುಗಳ ಹುಟ್ಟಿಕೊಂಡಿವೆ.

ಶಂಕು ಜಾಗಟೆ, ಹಿಡಿದು ವಿಷ್ಣುವನ್ನು ಕುರಿತಾದ ಚರಿತ್ರೆಯನ್ನು ಹೇಳುತ್ತ ಹೊರಟ ಒಂದು ವರ್ಗವೆ ಚನ್ನಾದಾಸರೆಂದು (ದಾಸರು) ಕಾಲಾಂತರದಲ್ಲಿ ಬುಡ್ಗಜಂಗಮರು ಕಲೆಗಳು ವೃತ್ತಿ ಕಸಬುಗಳಾದ ಆಂಧ್ರ ಪ್ರದೇಶ, ಮಹಾರಾಷ್ಟ್ರ, ಕರ್ನಾಟಕದಲ್ಲಿ ಪ್ರಮುಖವಾಗಿ ಹರಡಿದ ಇವರು ಆಯಾ ಪ್ರದೇಶಕ್ಕೆ ತಕ್ಕ ವೇಷಗಳನ್ನು ಕಥಾನಕ ರೂಪಕಗಳನ್ನು ಹಾಕಲು ಪ್ರಾರಂಭಿಸಿದರು.

ಬುಡ್ಗಜಂಗಮರ ಪ್ರಮುಖ ವೃತ್ತಿ ಕಸಬುಗಳು ಹಗಲು ವೇಷಗಾರಿಕೆ, ಬುರ್ರಕಥಾ ಮೇಳ, ಬಹುರೂಪಗಳು, ಕೊಂಡಮಾಮ, ಸುಡುಗಾಡುಸಿದ್ಧ, ಗೊರಮಯ ವೇಷ, ಸನ್ಯಾಸಿವೇಷ ಬಾಲಸಂತೋಷಿ, ಭಂಗಿಸಾಧುವೇಷ ಬೈರಾಗಿ ವೇಷ ಮುರಂಡಿ ಪಂತು, ಭಾಗವತ ಕಥೆ ಶಾಸ್ತ್ರದ ಕಲಾವೃತ್ತಿ ಗಂಗಿ ಗೌರಿ ಗಾಯನ ಕಲಾವೃತ್ತಿ, ಇವುಗಳಲ್ಲದೆ ಚಾಪೆ ಹೆಣೆಯುವುದು ಕೂಡಾ ಇವರ ವೃತ್ತಿ ಕಸಬುಗಳಾಗಿವೆ.

ಈ ವೃತ್ತಿ ವೇಷಗಳಿಗೆ ಜನಪದರು ವೃತ್ತಿ ವೇಷ ಕಲಾ ಪ್ರಕಾರಗಳಿಂದಲೇ ಇವರನ್ನು ಗುರುತಿಸಿದ್ದರಿಂದ ಇತ್ತೀಚಿಗೆ ಕಾಡು ನಾಡು ಕಾನೂನು ಪ್ರಕಾರ ಅಪರಾಧವಾಗಿದ್ದರಿಂದ ಇಂದು ಇವರನ್ನು ಜನಪದರಿಗೆ ಮತ್ತು ಸರ್ಕಾರಿ ಅಧಿಕಾರಿಗಳಿಗೆ ಗುರುತಿಸಲು ತುಂಬ ಕಷ್ಟಕಾರ ವಾಗುತ್ತಿವೆ.

**ಹಗಲು ವೇಷಗಾರಿಕೆ :** ಹಗಲಿನ ವೇಳೆಯಲ್ಲಿ ಪುರುಷರು ರಾಮಾಯಣ ಮಹಾಭಾರತದ ವೇಷಗಳನ್ನು ಮತ್ತು ಸಾಮಾಜಿಕ ವೇಷಗಳನ್ನು ಹಾಕಿಕೊಂಡು ಊರಿನ ಮಧ್ಯ ಮತ್ತು ಊರಿನ ಪ್ರತಿಯೊಂದು ಮನೆಯ ಮುಂದೆ ಹೋಗಿ ದಿನಕ್ಕೊಂದು ವೇಷ ಹಾಕಿ ಬೀದಿನಾಟಕ ಪ್ರದರ್ಶನ ಮಾಡುತ್ತಾರೆ. ಕೊನೆಯದಿನದಲ್ಲಿ ಕೂಡ ದಾಸರ ವೇಷ ಅಡಗದಾಲ (ಪಟ್ಟಿಎತ್ತುವ) ವೇಷ ಹಾಕಿ ಊರ ಗೌಡ, ದೇಸಾಯಿ, ಇಲ್ಲವೆ ಪ್ರಮುಖರ ಮನೆಗೆ ತೆರಳಿ ಶರಣ ತತ್ವಪದಗಳನ್ನು ಮತ್ತು ಸರ್ವಜ್ಞನ ವಚನಗಳನ್ನು ಹಾಡಿ ಕಾಡಿ ಬೇಡಿ ರೊಕ್ಕ ರೂಪಾಯಿ, ಧವಸ-ಧಾನ್ಯ, ಬಟ್ಟೆ, ಧನ ಕುರಿ, ಕೋಳಿಗಳನ್ನು ಧಾನವಾಗಿ ಪಡೆದು ಭಿಕ್ಷಾಟನೆ ಮಾಡುತ್ತಾರೆ.

**ಇಡಿ ಬಿಚ್ಚಮು (ಒಬ್ಬೊಬ್ಬನ ವೇಷದ ಭಿಕ್ಷೆ) :** ಇತ್ತೀಚಿಗೆ ಹಗಲುವೇಷ ಹಾಕಿ ಒಬ್ಬೊಬ್ಬ ರಾಗಿ ಭಿಕ್ಷಾಟನೆ ಮಾಡುತ್ತಿದ್ದಾರೆ. ಹನುಮಂತನ ವೇಷಹಾಕಿ ಪಟ್ಟಣಗಳಲ್ಲಿ ರಸ್ತೆ ಬಸನಿಲ್ದಾಣ ಗಳಲ್ಲಿ ರೈಲ್ವೆನಿಲ್ದಾಣಗಳಲ್ಲಿ ಭೀಕ್ಷಾಟನೆ ಮಾಡುತ್ತಿದ್ದಾರೆ. ಮತ್ತು ಹಾರ್ಮೋನಿಯ ಹಿಡಿದು ಕೆಲವರು ಭಿಕ್ಷಾಟನೆಗೆ ಹೋದರೆ ಇನ್ನು ಕೆಲವು ಜನ ಡಿಮ್ಕಿ ಅಥವಾ ಡಗ್ಗ ಹಿಡಿದುಕೊಂಡು ಹೋಗಿ ಪದಗಳನ್ನು ಹಾಡಿ ಭಿಕ್ಷಾಟನೆ ಮಾಡುತ್ತಾರೆ.

**ಜೋಲ್ಯಾಡೆಕ್ಕಿ ಭಿಚ್ಚಮು (ಜೋಳಿಗೆ ಭಿಕ್ಷೆ) :** ಬಹುತೇಕ ಈ ಭಿಕ್ಷೆಯನ್ನು ಮಹಿಳೆಯರೆ ಮಾಡುತ್ತಾರೆ. ಒಬ್ಬರು ಇಲ್ಲವೇ ಒಬ್ಬರಿಗಿಂತ ಹೆಚ್ಚು ಮಂದಿ ಕೂಡಿ ಒಂದೊಂದು ಊರಿಗೆ ಒಂದೊಂದು ದಿವಸದಂತೆ ನಸುಕಿನಲ್ಲಿಯೇ ಮುಖತೊಳೆದು ರಾತ್ರಿ ಉಳಿದಿದ್ದ ತಂಗಳ ಅನ್ನವನ್ನು ತಿಂದು ಹೊರಟು ತತ್ವಪದಗಳನ್ನು ಹಾಡಿ ಜೋಳ, ರೊಕ್ಕ ರೊಟ್ಟಿ ಅನ್ನ ಪಡೆದುಕೊಂಡು ಸಂಜೆಯಾದೊಡನೆ ಮನೆಗೆ ಮರುಳುವಾಗ ದಾರಿಯಲ್ಲಿ ಕಟ್ಟಿಗೆಗಳನ್ನು ಆಯ್ದು ಹೊತ್ತುಕೊಂಡು

ಮನೆಗೆ ಬರುತ್ತಾರೆ. ಇನ್ನು ಕೆಲವು ಮಹಿಳೆಯರು ಗಂಗಿಗೌರಿಯ ಗೊಂಬೆಹಿಡಿದು ಗಂಗಿಗೌರಿ ಹಾಡನ್ನು ಹಾಡುತ್ತ ಭಿಕ್ಷೆ ಎತ್ತುತ್ತಾರೆ.

**ಬೈರಾಗಿ ವೇಷ :** ಬಗಲಿಗೆ ಜೋಳಿಗೆ ಹಾಕಿ ತಲೆಗೆ ಪೇಟಾ ತೊಟ್ಟು, ಜೋತಿಷಿಯಂತೆ ವೇಷ ಹಾಕಿ ಹಸ್ತಮುದಿಕೆಯನ್ನು ಕೈಯಲ್ಲಿ ಹಿಡಿದುಕೊಂಡು ಮನೆಮನೆಗೆ ತೆರಳಿ ಭವಿಷ್ಯ ಹೇಳಿ ಭಿಕ್ಷಾಟನೆ ಮಾಡುತ್ತಾರೆ.

**ಕುರಮಾಮರ ವೇಷ :** ಏಕನಾದ ಹಿಡಿದು ಎಡಗೈಯಲ್ಲಿ ಚಿಟಿಗೆಗಳನ್ನು ಹಿಡಿದು ಬಲಗೈಯಿಂದ ಏಕನಾದ ಮೀಟುತ್ತ, ರಾಮಶಾಸ್ತ್ರವ ಹೇಳುವ ಕೇಳು ರಾಮನಾಥಡಾ, ಗುರು ನಾಥನ್ನ, ಗುರುನಾಥನ್ನ ರಾಮನಾಥುಡಾ ಕೊಂಡಾರಾಮುಡಾ, ರಾ, ರಾ, ಜೀವಿ ಎಂದು ಹಾಡುತ್ತ ಹಳ್ಳಿಗಳ ಬೀದಿಗಳಲ್ಲಿ ಹಾಡುತ್ತ ಮನೆಯಂಗಳದಲ್ಲಿ ನಿಂತು ಭಿಕ್ಷಾಟನೆ ಮಾಡು ತ್ತಾರೆ.

**ಬಾಬಾ ಬುಡರು :** ಪ್ರಖ್ಯಾತ ಗಿರಿಧಾಮ ಬಾಬಾ ಬುಡನಗಿರಿಯ ಗಿಡಮೂಲಿಕೆಗಳಿಂದ ಆಯುರ್ವೇದ ಔಷಧಿಗಳನ್ನಾಗಿ ಮಾಡಿ ಜನರಿಗೆ ನೀಡುವುದರ ಜೊತೆಗೆ ತಾಯತ ರೂಪದಲ್ಲಿ ಕೊಡುತ್ತಿದ್ದರು.

**ಬುರ್ರಕಥಾ ಮೇಳ :** ಕೈಯಲ್ಲಿ ತಂಬೂರಿ, ಮತ್ತು ಗುಮ್ಮಟ, ಬುಡಿಗೆವಾಧ್ಯ ಚಿಟಿಕೆ ಹಿಡಿದು ಅಕ್ಕನಾಗಮ್ಮ, ಬಾಲನಾಗಮ್ಮ, ಅಲ್ಲದೆ ಅನೇಕ ಕಥೆಗಳನ್ನು ಊರಿನ ಮನೆ ಮುಂದೆ ನಿಂತುಹಾಡಿ ಭಿಕ್ಷಾಟನೆ ಮಾಡುತ್ತಾರೆ. ಅಲ್ಲದೆ ತಂಬೂರಿ ನುಡಿಸುತ್ತ ಕೈವಾರ ತಾತನ ಕೀರ್ತನೆಗಳನ್ನು ಹಾಡುತ್ತ ಭಿಕ್ಷೆಬೇಡುವುದು.

ನಾಟಕ ಕೇಳಿಕೆಗಳ ಪೌರಾಣಿಕ ಪಾತ್ರಗಳ ವೇಷವನ್ನು ಧರಿಸಿ ಸಂತೆಗಳಲ್ಲಿ ಜನಸಂದಣಿ ಗಳಲ್ಲಿ ಶೃತಿ ನೀಡುವ ಹಾರ್ಮೋನಿಯಂ ಪೆಟ್ಟಿಗೆಯೊಂದಿಗೆ ಮಹಿಳೆಯರ ತಂದಾನ ಹಿಮ್ಮೇಳವನ್ನು ತಮ್ಮ ಬುಡ್ಗ ವಾದ್ಯದೊಂದಿಗೆ ನುಡಿಸಿ ಭಿಕ್ಷೆಬೇಡುತ್ತಾರೆ.

**ಬಾಲಸಂತು ವೇಷ :** ತಲೆಗೆ ಪೇಟಾ ಮತ್ತು ಬಣ್ಣಬಣ್ಣದ ಕಪ್ಪಿಸು ಧರಿಸಿ ಕೈಯಲ್ಲಿ ಗಂಟೆ ಹಾಗೂ ಕಾವಡಿಯ ಎರಡು ಭಾಗದಲ್ಲಿ ಜೋಳಿಗೆಗಳನ್ನು ಹಾಕಿ ಶಿವಶಿವ ಎಂದು ಹೊರಟು ಮನೆಮುಂದೆ ನಿಂತು ಹರಕೆ ಮಾಡಿ ಭಿಕ್ಷೆ ಬೇಡುತ್ತಾರೆ.

**ಕಾವಿ ಬಟ್ಟೆ :** ಹಾಗೂ ರುದ್ರಾಕ್ಷಿಮಾಲೆ ಧರಿಸಿ ವಿಭೂತಿಯನ್ನು ಹಣೆಗೆ ಹಚ್ಚಿ, ಶಂಕು ಗಂಟೆ, ಬಗಲಿಗೆ ಜೋಳಿಗೆ ಹಾಕಿ ಭಿಕ್ಷೆ ಕೇಳುವ ಮತ್ತು ಕೈವಾರ ತಾತಯ್ಯ, ವೀರಬ್ರಹ್ಮೇಂದ್ರ ಮತ್ತು ಯೋಗಿ ವೆಮನ್ನ ಪದಗಳನ್ನು ಹೇಳಿ ಭಿಕ್ಷಾಟನೆ ಮಾಡುತ್ತಿದ್ದರು.

**ಸಾರ ಪಂತು :** ಬಿಳಿ ಪಂಚೆ ಹಾಗೂ ನಿಲುವಂಗಿ ಧರಿಸಿ ಕಂಕುಳಲ್ಲಿ ವೃತ್ತಿ ಇಟ್ಟುಕೊಂಡು, ಕಪ್ಪು ಕೋಟು ಧರಿಸಿ ಜೋಳಿಗೆ ಹಾಕಿ ಭಿಕ್ಷೆ ಬೇಡುವುದು ಅಲ್ಲದೆ ಮುರಂಡಿಪಂತು, ಆಲಿಗಪಂತ್ತು ಶಿವ್ಪಟಿ ಪಂತು ದಾರಗಪಂತು ಕಿಟಪಂತಗಳನ್ನು ಹಾಕಿ ಭಿಕ್ಷೆಯನ್ನು ಮಾಡುತ್ತಾರೆ.

**ಇತರೆ ಕಸುಬುಗಳು :** ಈ ಜನಾಂಗದಲ್ಲಿ ಪುರುಷರು ಸಾಮಾನ್ಯವಾಗಿ ಬಿಡುವಿನ ವೇಳೆಯಲ್ಲಿ ಬೇಟೆಯಾಡುತ್ತಾರೆ. ಆದ್ದರಿಂದ ಬೇಟೆಗೆ ಬಳಸುವ ಬಲೆ ಎಣೆಯುವುದು, ಕಣಜಗಂದತ್ತ

ಇತರೆ ಪಕ್ಷಿಗಳನ್ನು ಹಿಡಿಯುವ ಪರಿಕರಗಳನ್ನು (ಪಾದಿ) ತಾವೇ ತಯಾರು ಮಾಡಿಕೊಳ್ಳುತ್ತಾರೆ. ಹೆಣ್ಣುಮಕ್ಕಳು ಪ್ರಾದೇಶಿಕವಾಗಿ ದೊರೆಯುವ ಈಚಲುಗರಿಗಳಿಂದ ಚಾಪೆ ಎಣೆಯುವುದು, ಮಣಿ ಪೋಣಿಸುವುದು ಮುಂತಾದ ಕೆಲಸಗಳನ್ನು ಮಾಡುತ್ತಾರೆ.

**ಬಳಸುವ ಉಪಕರಣಗಳು :** ಬುಡ್ಗಜಂಗಮರು ತಾವು ವೇಷಹಾಕುವ ಪರಿಕರಗಳನ್ನು ವಾದನ ಪರಿಕರಗಳನ್ನು ತಾವೇ ತಯಾರಿಸಿಕೊಳ್ಳುತ್ತಿದ್ದರು. ಆಧುನೀಕರಣಕ್ಕೊಳಗಾಗಿ ಇತ್ತೀಚಿಗೆ ಕೊಳ್ಳುತ್ತಿದ್ದಾರೆ. ತಾವು ಪ್ರದರ್ಶಿಸುವ ಕಲಾ ಪ್ರಕಾರಕ್ಕೆ ತಕ್ಕಹಾಗೆ ವಾದ್ಯಗಳನ್ನು ವೇಷಭೂಷಣಗಳನ್ನು ತಯಾರಿಸಿ ಬಳಸಿಕೊಳ್ಳುತ್ತಿದ್ದರು. ಕುಟುಂಬ ನಿರ್ವಹಣೆಗಾಗಿಯು ಕೆಲವು ಉಪಕರಣಗಳನ್ನು ತಯಾರಿಸಿಕೊಳ್ಳುತ್ತಿದ್ದರು.

**ಕಲಾಪ್ರಕಾರಕ್ಕಾಗಿ ವಾದ್ಯಗಳು :** ರಾಗಮಾಲಾ ಪೆಟ್ಟಿಗೆ ಬುಡ್ಗ (ಡಿಮ್ಕಿ) ತಂಬೂರಿ, ಗಗ್ಗರಿ (ಗುಮ್ಮಿಕಿ) ಚಿಟಿಗೆ, ತಬಲಾ, ಡಗ್ಗಾ ಡೊಲಕ, ಹಾರ್ಮೋನಿಯಂ, ಕಂಜರ ಏಕನಾದ ಡಮರು, ಡಿಮ್ಕಿ, ಎಕ್ಕಾಮಳಿ, ಗಂಟೆ, ಶಂಕು, ಹಲಗೆ.

**ವೇಷ ಭೂಷಣಕ್ಕಾಗಿ :** ಕಿರಿಟ, ಬಿಲ್ಲು, ಬಾಣ, ಬತ್ತಳಿಕೆ, ರುದ್ರಾಕ್ಷಿ, ಆಂಜನೆಯ ಮತ್ತು ಸೂರ್ಪನಖಿ, ಭೂತದ ಮುಖವಾಡ ಮೀಸೆ, ಕೈಕಟ್ಟು ಎದೆಕಟ್ಟು, ನಡಕಟ್ಟು, ಗೆಜ್ಜೆ, ಹೂಮಾಲೆ, ಕೊರಲ್ಲಿನ ಸರ, ಆಂಜನೇಯನ ಬಾಲ, ಗಡ್ಡ, ವಿಶ್ವಾಮಿತ್ರ ಸಾಧುವಿನ ಗಡ, ನವಿಲಿನಗರೆಯ ಚಟ್ಟಿ, ಕುಡ್ಡದಾಸನ ರೇಷ್ಮೆ ಗೂಡಿನ ಕಣ್ಣು ಸೇನಾಪತಿಯ ಟೊಪ್ಪಿಗೆ ಕಟ್ಟಿಗೆಯ ಖಡ್ಗ, ತ್ರಿಸೂಲ, ಖುರ್ಚಿ, ಮುಳ್ಳಂದಿಯ ಚಿತ್ತಾರದ ಮುಳ್ಳು ಗರುಡ ಹಾಗೆ ಕೋಳಿಯ ಪುಚ್ಛದತುರಾಯಿಗಾಗಿ, ತಾಳೆಗೆರೆಯ ಪುಸ್ತಕ, ಕುಂಬಳಕಾಯಿಯ ಏಕನಾದ (ಚಿಂಗಿರಿಕಾಯಿ) ತಂಬಾರಿ, ಅನೇಕ ತುಂಡು ಬಟ್ಟೆಗಳನ್ನು ಜೋಡಿಸಿ ಮಾಡಿದಂತ ಜೋಲ್ಕ (ಜೋಳಿಗೆ) ಬಿದಿರಿನ "ಕವಾಡಿದಬ್ಬಾ" ಬಾಲಸಂತು ವೇಷಕ್ಕಾಗಿ ಬಣ್ಣಬಣ್ಣದ ಕಪೀನು, ತಲೆಗೆ ಪೇಟಾ ಗಿಳಿಶಾಸ್ತ್ರಕ್ಕಾಗಿ ಗಿಳಿ, ಕರಡಿಕೂದಲಿನ ಟೊಪ್ಪಿಗೆ, ಕೋಟು, ಛತ್ರಿ, ಕಟ್ಟಿಗೆಯ ಬೆತ್ತ, ಕಟ್ಟಿಗೆಯ ಗದಾ (ಗದೆ) ವೇಷಕ್ಕಾಗಿ ಬಳಸುವ ವಿವಿಧ ಬಣ್ಣಗಳು ತಾವೇ ತಯಾರಿಸುತ್ತಾರೆ.

**ಮನೆ ಬಳಕೆ ವಸ್ತುಗಳು :** ಗುಡಿಸಲೊಳಗೆ ಒಂದು ಪಕ್ಕದಲ್ಲಿ ಮೂರುಕಲ್ಲಿನ ಒಲೆ ಇರುತ್ತದೆ. ಅದರ ಪಕ್ಕದಲ್ಲಿ ನೀರಿನ ಗಡಿಗೆ, ಅನ್ನದ ಗಡಿಗೆ, ಕಲ್ಲಿಗಡಿಗೆ, ಪಲ್ಲೆ ಅಥವಾ ಸಾಂಬಾರು ಗಡಿಗೆ ಅನ್ನ, ನುಚ್ಚಕ್ಕಿಯ ಅನ್ನವು ಅಡಿಗೆ ಮಾಡುತ್ತಾರೆ. ರೊಟ್ಟಿಯನ್ನು ಮಾಡುವ ಹಿಟ್ಟಿನ್ನು ಕಲಿಸಿ ಒಲೆ ಮೇಲೆ ಸುಟ್ಟು ಮಾಡುವರು. ರೊಟ್ಟಿ ಮಾಡುವ ಹಂಚು ಇದೀಗ ಕಬ್ಬಿಣದಿವೆ ಪೂರ್ವದಲ್ಲಿ ಮಣ್ಣಿನ ತಟ್ಟೆಗಳ ಮೇಲೆ ಮಾಡುತ್ತಿದ್ದರು. ಪಕ್ಕದಲ್ಲಿ ಗಂಜಿಯ ಗಡಿಗೆ ಇರುತ್ತದೆ.

ಚಟ್ನಿಹರೆಯುವುದಕ್ಕೆ ಮನೆಮನೆಗೆ ಒಂದು ಚಿಪ್ಪೆಯಾಕಾರದ ಮಣ್ಣಿನ ಕುಡಿಕೆ ಅದರ ಒಳಭಾಗದಲ್ಲಿ ಚಿಕ್ಕ ಚಿಕ್ಕ ಕಲ್ಲುಗಳನ್ನು ಅಂಟಿಸಿ ಅದನ್ನು ಸುಟ್ಟಿರುತ್ತಾರೆ. ಇದನ್ನು ಪ್ರತ್ಯೇಕತೆ ಯಿಂದಲೇ ಕುಂಬಾರರು ಈ ಸಮುದಾಯಗಳಿಗೆ ಮಾಡಿ ನೀಡುತ್ತಾರೆ. ಅದಕ್ಕೆ ಅರಿಯಲು ಕಾರಂಕಟ್ಟೆ ಎನ್ನುತ್ತಾರೆ. ಇದನ್ನು ಇಂಗಳದ ಕಾಯಿ ಗಿಡದ ಕಾಂಡದಿಂದ ತಯಾರಿಸಿ ಉಪಯೋಗಿ

ಸುತ್ತಾರೆ. ಕಾರಣ ಇಂಗಳಕಾಯಿ ಗಿಡದಲ್ಲಿ ಔಷಧದ ಗುಣವನ್ನು ಹೊಂದಿದ್ದು ಖಾರದ ಜೊತೆಯಲ್ಲಿ ಕಟ್ಟಿಗೆ ಮೃದುವಾಗಿ ಪ್ರತಿದಿನವು ಹೊಟ್ಟೆಯಲ್ಲಿ ಸೇರುವುದರಿಂದ ಯಾವುದೇ ರೋಗರುಜಿನಗಳು ಬಾರದಿರುವುದು ನಂಬಿಕೆ.

ಬೇಯಿಸಲು ಮಣ್ಣಿನ ಮಡಕೆಗಳನ್ನು ಮನೆಯಲ್ಲಿ ಹೆಚ್ಚಾಗಿ ಉಪಯೋಗಿಸುತ್ತಾರೆ, ಎಲೆಗಳು ಬಟ್ಟೆಗಳು ಉರಿಗಳು ಬೋನುಗಳ, ಕಟ್ಟಿಗೆ, ಕುಡುಗೋಲು ಮೊದಲಾದ ಬೇಟೆಸಾಮಾನುಗಳನ್ನು ಚಾಪೆ ಎಣೆಯುವುದಕ್ಕೆ ಉಪಯೋಗಿಸುವ ಈಚಲು ಬಳ್ಳಿ, ತಿನ್ನಲು ಇಟ್ಟಿರುವ ಜೋಳ ರಾಗಿ ಬಟ್ಟಲು ಮೊದಲಾದವುಗಳು ಇರುತ್ತವೆ. ಈ ಬಟ್ಟಲು ಈಚಲು ಮರದಲು ಲೇಗಗಳಿಂದ ಮಾಡಿರುತ್ತಾರೆ. ಈಗ ಅದರ ವಾಡಿಕೆ ಕಡಿಮೆಯಾಗಿದೆ ಎಣ್ಣೆ, ತುಪ್ಪಗಳನ್ನು ಹಾಕಿ ಇಡುವುದಕ್ಕೆ ಸಿಪ್ಪಲು ಇರುತ್ತಿದ್ದವು. ಇವು ಅಲ್ಲದೇ ಮನೆಯಲ್ಲಿ ಕಾವಿಡಿದ್ದಬಾ ಬಿದಿರಿನ ಕಟ್ಟಿಗೆ ಇರುತ್ತಿತ್ತು. ಒಂದು ಊರಿನಿಂದ ಮತ್ತೊಂದು ಊರಿಗೆ ಸಾಮಾನು ಸಾಗಿಸಲು ಉಪಯೋಗಿಸುತ್ತಿದ್ದರು.

**ಕಸುಬಿನ ಬಗೆಗೆ ನಂಬಿಕೆಗಳು :** ಭಿಕ್ಷಾಟನೆ ನಿಷೇಧದಿಂದಾಗಿ ಹಾಗೂ ಜೀವನ ನಿರ್ವಹಣೆಗಾಗಿ ಅನಾಧಿ ಕಾಲದಿಂದ ರೂಢಿಸಿಕೊಳ್ಳಲಾದ ಸಾಂಸ್ಕೃತಿಕ ಕಲೆಗಳು ನಶಿಸುತ್ತಿದ್ದರೂ ಬುಡ್ಗ ಜಂಗಮರು ತಾವು ಮಾಡುವ ಮೂಲ ಕಸುಬಿನ ಬಗ್ಗೆ ಒಳ್ಳೆಯ ನಂಬಿಯುಳ್ಳವ ರಾಗಿದ್ದಾರೆ. ಮನೆಯಲ್ಲಿನ ಕೆಲವು ಮಂದಿ ಹೊಟ್ಟೆಪಾಡಿಗಾಗಿ, ವೇಷಗಳನ್ನು ಧರಿಸಿ ಜನರನ್ನು ರಂಜಿಸುವುದು, ಜಾತ್ರೆ ಹಬ್ಬಹರಿದಿನಗಳಲ್ಲಿ ಸಭೆ ಸಮಾರಂಭಗಳಲ್ಲಿ ಆಧ್ಯತೆಯ ಮೇಲೆ ಬುರ್ರಕಥೆ, ನಾಟಕ ಶಾಸ್ತ್ರ ಮುಂತಾದ ಕಲೆಗಳನ್ನು ಜೀವಂತವಾಗಿರಿಸಿಕೊಳ್ಳುವ ನಿಟ್ಟಿನಲ್ಲಿ ನಂಬಿಕೆಯನ್ನು ಇಂದಿಗೂ ಇರಿಸಿಕೊಂಡಿದ್ದಾರೆ.

**ಯಾಟ (ಬೇಟೆ)**

ಸಾಮಾನ್ಯವಾಗಿ ಬುಡ್ಗ ಜಂಗಮರು ಮೂಲತಃ ಮಾಂಸಾಹಾರಿಗಳು ಇವರಿಗೆ ಪ್ರತಿದಿನ ಮಾಂಸ ಬೇಕು. ಏನಿಲ್ಲವೆಂದರೂ ನಂಜಿಕೊಳ್ಳಲು ಮೀನನ್ನಾದರೂ ಹಿಡಿದು ತರುತ್ತಾರೆ. ಅಲ್ಲದೆ ಸಮಯ ಸಿಕ್ಕಾಗಲೆಲ್ಲ ಬೇಟೆಯಾಡುವುದನ್ನು ಒಂದು ಪ್ರವೃತ್ತಿಯಾನ್ನಾಗಿ ಮಾಡಿ ಕೊಂಡಿರುತ್ತಾರೆ.

ಆಹಾರಕ್ಕಾಗಿ ಅಡವಿಯಲ್ಲಿರುವ ಪ್ರಾಣಿ ಪಕ್ಷಿಗಳನ್ನು ಬೇಟೆಯಾಡುತ್ತಾರೆ. ಇವರು ಹೆಚ್ಚಾಗಿ ಸಾಯಂಕಾಲ ಮೂರು ಗಂಟೆಯಿಂದ ಆರು ಗಂಟೆಯವರೆಗೆ ಹಾಗೂ ಬೆಳಗಿನ ಜಾವ ಬೇಟೆಯಾಡುತ್ತಾರೆ. ಅತೀ ವಿರಳವಾಗಿ ರಾತ್ರಿಯ ವೇಳೆಯಲ್ಲಿ ಬೇಟೆಯಾಡುತ್ತಾರೆ. ಹೀಗೆ ಬೇಟೆಯಾಡಿದ ಪ್ರಾಣಿಗಳನ್ನು ಸುಟ್ಟು, ಕುದಿಸಿ, ತಿನ್ನುತ್ತಾರೆ. ಕೆಲವು ಪ್ರಾಣಿ ಪಕ್ಷಿಗಳ ಹಸಿಬಿಸಿ ರಕ್ತವನ್ನು ನೇರವಾಗಿ ಕುಡಿದು ಬಿಡುತ್ತಾರೆ.

ಒಂದೇ ಸ್ಥಳದಲ್ಲಿರುವ ಪ್ರತಿ ಟೆಂಟಿನಿಂದಲೂ ಒಬ್ಬೊಬ್ಬರಂತೆ ಗುಂಪಾಗಿ ಸೇರಿ ಬೇಟೆಯಾಡುತ್ತಾರೆ. ಹಾಗೆ ಬೇಟೆಯಾಡಿದ ಪ್ರಾಣಿಗಳ ಮಾಂಸವನ್ನು ತಲಾಧಾರದ ಮೇಲೆ ಪಾಲು ಹಾಕಿ ಮದುವೆ ಆದವರಿಗೆ ಒಂದು ಪಾಲು ಮನೆಯಲ್ಲಿ ಗಂಡನಿಲ್ಲದ ಹೆಂಗಸಿಗೆ

ಒಂದು ಪಾಲು ಮದುವೆ ಇಲ್ಲದ ಮಕ್ಕಳಿಗೆ ಅರ್ಧ ಅಥವಾ ಕಾಲು ಪಾಲು ಪಕ್ಕದಲ್ಲಿದ್ದಾರೆ. ಅವರಿಗೆ ಪಾಲಿನ ರೂಪದಲ್ಲಿ ಹಂಚಿಕೆ ಮಾಡಿಕೊಳ್ಳಲಾಗುತ್ತದೆ.

**ಬೇಟೆಯಾಡಿ ತಿನ್ನುವ ಪ್ರಾಣಿಪಕ್ಷಿಗಳು :** ಉಡ, ಅಳಿಲು, ಮುಂಗಿಸಿ, ಕಾಡುಇಲಿ, ಕಾಡುಬೆಕ್ಕು, ಮರನಾಗಿ (ಮಂಜಿಟಿಗ) ಪುನಗಾಸಿಗಮು (ಪುನಗಬೆಕ್ಕು) ಏದುವ, ಗಟುಂಗಾಡು, ನರಿ, ಮೊಲ, ಆಮೆ, ಮೀನು, ಏಡಿ, ನೀರನಾಗಿ, ಕೌಜುಗ, ಬುರ್ಲಿ, ನೀರಕೋಳಿ, ಕಾಡು ಹಂದಿ, ಕೊಂಡ್ರಿಗಾಡು, ಚೀರು ನಾಯಿ (ಘಂಟುಂಗಾಡು), ನರಿ (ನಕ್ಕ), ಆಮೆ, (ಕುರಂಗಾಡು), ಮೀನು (ಕಾಜಾಲು), ಏಡಿ (ಯಂಡರಕಾಯಿ), ನೀರನಾಗಿ (ಕೊಂಡ್ರಿಗಾಡು), ಕೌಜುಗ (ಕಮುಜು), ಬುರ್ಲಿ (ಲಾಂವಕ), ನೀರಕೋಳಿ (ಪುಲ್ಲಿಕೋಡಿ),

**ಬೇಟೆಗಾಗಿ ಉಪಯೋಗಿಸುವ ಸಾಮಗ್ರಿಗಳು :** ಮಚ್ಚು, ಕುಡಗೋಲು, ದೋಟಿಗಾಲಮು (ಗಾಣ), ಉರುಲು (ಉಚ್ಚುಲು) ಜಾಳಿಗೆ ಬಲೆ, ಕೌಜ ಬಲೆ, ಸಾಕಿದ ಕೌಜಗ, ಸಾಕಿದ ಬೇಟೆನಾಯಿ, ಬಡಿಗೆ ಸಲಾಕಿವಂಕಿ, ಬುರ್ಲಿ ಬಲೆ, ಬುರ್ಲಿ ಬುಟ್ಟಿ ಪ್ರಾಣಿ ಹಿಡಿಯುವ ಬೋನು.

**ಬೇಟೆಯಾಡುವ ವಿಧಾನ (ಬಲೆಯಿಂದ ಬೇಟೆಯಾಡುವುದು) : ತೋರಿಸಿಗಾಡು (ಅಳಿಲು):** ಈ ಬೇಟೆಯನ್ನು ಗಿಡಗಳಿರುವ ಪ್ರದೇಶಗಳಲ್ಲಿ ಪ್ರತಿ ಯೊಂದು ಗಿಡವನ್ನು ಸೂಕ್ಷ್ಮವಾಗಿ ದೃಷ್ಟಿ ಹಾಯಿಸುವದರ ಮೂಲಕ ಹಾಗೂ ಕಲ್ಲೊಗೆಯುವುದರ ಮೂಲಕ ಮತ್ತು ಅಳಿಲು ಕೆಳಗಿನಿಂದ ಗಿಡ ಹತ್ತುವುದನ್ನು ನೋಡಿದ ಬಳಿಕ, ಅಳಿಲಿನ ಅನುಕರಣೆಯ ಪಿಲ್ಲಿ ಕೂತ ಹಾಕಿ ಅಳಿಲು ಇರುವುದನ್ನು ಖಾತ್ರಿಪಡಿಸಿಕೊಂಡ ಮೇಲೆ ದಟ್ಟವಾದ ಪೊದರೆ ಅಥವಾ ಗಿಡಗಳಿರುವ ಕಡೆಗೆ ಕೈಯಿಂದ ನೇಯ್ದ ಬಲೆ ಕಟ್ಟುತ್ತಾರೆ. ಬಲೆಯ ಮೂರು ದಿಕ್ಕಿನ ಕಡೆ ವ್ಯಕ್ತಿಗಳು ನಿಂತು ಬಲೆಯ ದಿಕ್ಕಿಗೆ ಗಿಡದ ಮೇಲಿರುವ ಅಳಿಲಿಗೆ ಕಲ್ಲೆಸೆದಾಗ ಗಿಡದಿಂದ ಕೆಳಗಿಳಿದು ಬಲೆಯಲ್ಲಿ ಸಿಕ್ಕಿಕೊಳ್ಳುತ್ತದೆ. ಓಡಿ ಹೋಗುವಂತೆ ಮಾಡಿ ಅದನ್ನು ಬಲೆಯ ಹತ್ತಿರವಿರುವ ವ್ಯಕ್ತಿ ಹಿಂಬಾಲಿಸಿ ಓಡಿ ಹೋಗಿ ಹಿಡಿದು ಕೊಲ್ಲುತ್ತಾನೆ.

**ಉಚ್ಚಲುಯಾಟ (ಉರುಲಿನ ಬೇಟೆ) :** ಅಳಿಲು ದೊಡ್ಡದಾದ ಮರಕ್ಕೆ ಹತ್ತಿದಾಗ ಅಲ್ಲಿ ಅಳಿಲುಗಳಿರುವದನ್ನು ಗಮನಿಸಿ ಮರದ ಬುಡಕ್ಕೆ ಕುದುರೆ ಬಾಲದ ಕೂದಲುಗಳಿಂದ ಮಾಡಿದ ಉರುಲುನ್ನು ಕಟ್ಟಿ ಉರುಲಿನ ಸುತ್ತಮುತ್ತ ಹಿಟ್ಟನ್ನು ಗಿಡಕ್ಕೆ ಒತ್ತುತ್ತಾ ಹಚ್ಚುತ್ತಾರೆ. ಹೀಗೆ ಹಚ್ಚಿದ ಬಳಿಕ ದೂರದಲ್ಲಿ ಅವಿತು ಕುಳಿತು ಕೊಳ್ಳುತ್ತಾರೆ. ಅಳಿಲು ಕೆಳಗೆ ಇಳಿಯುವಾಗ ಆ ಹಿಟ್ಟನ್ನು ನೋಡಿ ಕಾತುರದಿಂದ ತಿನ್ನಲು ಹೋದಾಗ ಉರುಲಿನಲ್ಲಿ ಕಾಲು, ತಲೆ ಇಲ್ಲವೆ, ದೇಹದ ಯಾವುದೇ ಒಂದು ಭಾಗ ಸಿಕ್ಕಿಕೊಂಡು ಒದ್ದಾಡುತ್ತಿರುತ್ತದೆ. ಬೇಟೆಗಾರ ಕೂಡಲೇ ಓಡಿ ಹೋಗಿ ಅದನ್ನು ಬಟ್ಟೆಯಿಂದ ಹಿಡಿಯುತ್ತಾನೆ.

**ಬಂಡಯಾಟ, (ಬಂಡೆಗಲ್ಲಿನಲ್ಲಿ ಬೇಟೆ) :** ಉರುಲು ಇಲ್ಲದ ಸಂದರ್ಭದಲ್ಲಿ ಗಿಡದ ಮಧ್ಯಮ ಗಾತ್ರದ ಬಂಡೆಗಲ್ಲನ್ನು ತಂದು ಕಲ್ಲಿಗೆ ವಾಯ್ 'Y' ಆಕಾರದ ಉದ್ದನೆಯ ಕಟ್ಟಿಗೆ ಯನ್ನು ಬಳಸಿ ಭೂಮಿಗೆ ಮತ್ತು ಕಲ್ಲಿಗೆ ೪೫ ಅಂಶದ ಕೋನ ಮಾಡುವಂತೆ ಕಟ್ಟಿ ಬಲೆಯನ್ನು ಮಾಡಿ ಅದರ ಮಧ್ಯದಲ್ಲಿ ಹಿಟ್ಟು ಅಥವಾ ಹಸಿ ತೆನೆ ಇಲ್ಲವೆ ಶೇಂಗಾ ಕಾಳುಗಳನ್ನು ಹಾಕಿದಾಗ

ಆಳಿಲು ಕೆಳಗಿಳಿದು ಬಂದಾಗ ಅಡ್ಡಲಾಗಿ ವಾಯ್ ಆಕಾರದ ಕಟ್ಟಿಗೆಗೆ ಜೋಡಿಸಿದ ಕಟ್ಟಿಗೆ ತನ್ನ ನಿಯಂತ್ರಣ ಕಳೆದುಕೊಂಡು ಅಳಿಲು ಕಲ್ಲಿನ ಬುಡಕ್ಕೆ ಸಿಕ್ಕಿಕೊಳ್ಳುತ್ತದೆ.

ವಲಿಂಗಾಡು (ಉಡ) : ಈ ಪ್ರಾಣಿ ಬೆಳಗಿನ ಹನ್ನೊಂದರ ಸುಮಾರಿಗೆ ಮಳೆಯಾಗಿ ನಿಂತ ಬಳಿಕ ಬಿಸಿಲಿನಲ್ಲಿ ಪೊದರೆಗೂ ಕಲ್ಲುಕುಟರಿಗಳಿರುವ ಪ್ರದೇಶಗಳಿಂದ ಹೊರಗೆ ಬಂದು ಮೇಯುತ್ತವೆ. ಉಡವನ್ನು ಬಹುತೇಕವಾಗಿ ಸಾಕಿದ ನಾಯಿಗಳಿಂದ ಇರುವುದನ್ನು ಉಡ ಕಂಡುಕೊಳ್ಳುತ್ತಾರೆ. ಉಡವಿದ್ದ ಸ್ಥಳವನ್ನು ನಾಯಿ ತೋರಿಸಿದಾಗ ಪೊದರೆಯಲ್ಲಿದ್ದರೆ ಬಲೆಕಟ್ಟಿ ಬೆದರಿಸಿ ಪೊದರೆಯಿಂದ ಹೊರ ಹಾಕಿ ಹಿಡಿಯುವುದು, ಕಲ್ಲು ಕುಟರೆಗಳಲ್ಲಿ ಅಡಗಿ ಕುಳಿತರೆ ನಾಯಿಯ ಸಹಾಯದಿಂದ ಉಡ ಇರುವ ಸ್ಥಳವನ್ನು ಖಚಿತಪಡಿಸಿಕೊಂಡು ಕಲ್ಲುಗಳನ್ನು ಕಿತ್ತಿ ಒಂದು ಕೈಯಿಂದ ಉಡದ ಬಾಲವನ್ನು ಮತ್ತೊಂದು ಕೈಯಿಂದ ನಿಧಾನವಾಗಿ ಅದರ ಡುಬ್ಬದ ಮೇಲಿನಿಂದ ಸವರುತ್ತಾ ತಲೆಯನ್ನು ಗಟ್ಟಿಯಾಗಿ ಹಿಡಿಯುತ್ತಾರೆ.

ಬಿಲಗಳಲ್ಲಿ ಸೇರಿಕೊಂಡಾಗ ಚಿಕ್ಕ ಬಿಲವಿದ್ದರೆ ಬರ್ಚಿ ಅಥವಾ ಕೊಡಲಿ ಸಹಾಯದಿಂದ ಅಗೆದು ತೆಗೆದು ಉಡವನ್ನು ಹಿಡಿಯುತ್ತಾರೆ.

ದೊಡ್ಡ ಬಿಲವಿದ್ದರೆ ಜರ್ಮನ್ ಟಾಂಕೋಸ (ಜರ್ಮನಿ ವಾಯರ್) ದಾರದಿಂದ ನಿರ್ಮಿಸಿರುವ ದ್ವಾರ್ಕಂ (ಉರುಲು) ಬಿಲಕ್ಕೆ ಹಾಕಿದಾಗ ಉಡ ಹೊರಗೆ ಒಳಗೆ ಹೋಗುವಾಗ ಅದರ ಕುತ್ತಿಗೆ ಅಥವಾ ದೇಹದ ಯಾವುದೇ ಭಾಗ ಸಿಕ್ಕುಕೊಳ್ಳುತ್ತದೆ. ಬಯಲು ಪ್ರದೇಶ ಗಳಲ್ಲಿ ಸಿಕ್ಕರೆ ನಾಯಿಗಳನ್ನು ಚೂ ಬಿಟ್ಟು ಮೂಲಕ ಇಲ್ಲವೆ ಬೆನ್ನಟ್ಟಿ ಕೋಲುಗಳಿಂದ ಹೊಡೆದು ಕೊಲ್ಲುತ್ತಾರೆ.

ಉದರ (ಹೊಗೆ) ಬೇಟೆ : ಹೊಗೆಯ ಬೇಟೆ ಒಂದಕ್ಕಿಂತ ಹೆಚ್ಚು ಬಿಲಗಳಿದ್ದರೆ, ಉಡ ಬಿಲದಲ್ಲಿ ಹೋಗಿರುವವುದನ್ನು ನೋಡಿ ಉಡ ಒಳ ಹೋಗಿದ್ದ ಬಿಲವನ್ನು ಬಿಟ್ಟು ಉಳಿದ ಬಿಲಗಳನ್ನು ಕೆಸರಿನಿಂದ ಮುಚ್ಚಿ, ಮುಖ್ಯ ಬೆಲಕ್ಕೆ ಬೆಂಕಿಯ ಹೊಗೆಯನ್ನು ಹಾಕಿ ಮೇಲಿಂದ ಮೇಲೆ ಉರಿ ಅಥವಾ ಹೊಗೆ ಹೋಗುವಂತೆ ಮಾಡಿದಾಗ ಉಡಕ್ಕೆ ಉಸಿರುಗಟ್ಟಿ ಹೊರಗಡೆ ಬರುತ್ತದೆ. ಆಗ ಉಡವನ್ನು ಹಿಡಿಯುತ್ತಾರೆ.

ಕಬ್ಬಿಣದ ಬೋನಿನ ಬೇಟೆ ಎಂಟುವ (ಮುಂಗುಸಿ) : ಈ ಪ್ರಾಣಿಯನ್ನು ಒಂದೂರಿನಿಂದ ಮತ್ತೊಂದೂರಿಗೆ ಹೋದ ಮೇಲೆ ಮರುದಿನ ಇಲ್ಲವೇ ಅದೇ ದಿನ ಸಾಯಂಕಾಲ ಬೋನುಗಳನ್ನು ಹಿಡಿದುಕೊಂಡು ಹೋಗಿ ಮುಂಗುಸಿಗಳು ಇರುವ ಜಾಗವನ್ನು ಹೆಜ್ಜೆಗಳಿಂದ ಗುರುತಿಸುವುದು ಮತ್ತು ಕಬ್ಬಿನ ದಡದಲ್ಲಿ ಹಳ್ಳದ ಪೊದರೆಗಳಲ್ಲಿ ಇಲ್ಲವೇ ನದಿಯ ತೀರಗಳಲ್ಲಿ ಇದೇ ಸ್ಥಳದಲ್ಲಿ ಮುಂಗುಸಿಗಳಿವೆ ಎಂದುಕೊಂಡು ಬೋನಿನಲ್ಲಿ ಮೀನು ಇಲ್ಲವೇ ಕೋಳಿ ಮಾಂಸವನ್ನು ಅರ್ಧಚಂದ್ರವಾಗಿದ್ದ ಕಬ್ಬಿಣದ ವಂಕಿಗೆ ನೀಸುಪುಲ್ಲ (ಮಾಂಸ ಕಟ್ಟುವ ಛಡಿ)ಗೆ ಮೀನು ಇಲ್ಲವೇ ಕೋಳಿ ಮಾಂಸ ಅಥವಾ ಯಾವುದೇ ಪಕ್ಷಿಯ ಮಾಂಸವನ್ನು ಕಟ್ಟಿ ಅದರ ಮೇಲೆ ಬೋನಿನ ಬಲೆ ಕಾಣದಂತೆ ಕಸ ಕಡ್ಡಿಗಳಿಂದ ಮುಚ್ಚಿ ಸುತ್ತಲು ಮೀನಿನ ಅಥವಾ ಮಾಂಸದ ನೀರನ್ನು ಚೆಲ್ಲುತ್ತಾರೆ. ಆ ವಾಸನೆಯಿಂದ ಮುಂಗುಸಿ ಎಲ್ಲಿದ್ದರೂ ಆ ಕಡೆಗೆ

ಬಂದು ಬೋನಿನಲ್ಲಿರುವ ಮಾಂಸದ ತುಂಡನ್ನು ಜಗ್ಗಿದಾಗ ಮುಂಗುಸಿ ಬೀಳುತ್ತದೆ. ನಂತರ ಬೇಟೆಗಾರರು ೨-೩ ತಾಸುಗಳ ನಂತರ ಅಥವಾ ಬೆಳಿಗ್ಗೆ ಒಮ್ಮೆ ಸಾಯಂಕಾಲ ಒಮ್ಮೆ ಹೀಗೆ ದಿನಕ್ಕೆ ಎರಡು ಬಾರಿಯಂತೆ ನೋಡಲು ಬಂದಾಗ ಬೋನಿನಲ್ಲಿ ಬಿದ್ದ ಮುಂಗುಸಿಯನ್ನು ಹಿಡಿದು ಆಹಾರಕ್ಕಾಗಿ ತೆಗೆದುಕೊಂಡು ಹೋಗುತ್ತಾರೆ. ಮತ್ತು ಅದರ ಕೂದಲನ್ನು ಕೌಶಲ್ಯಕ್ಕಾಗಿ ಉಪಯೋಗಿಸುತ್ತಾರೆ. ಈ ಪ್ರಾಣಿಯನ್ನು ಕೆಲವೊಮ್ಮೆ ನಾಲ್ಕೈದು ಜನ ಸೇರಿ ಬೇಟೆಯಾಡುವಾಗ ಕಾಣಿಸಿಕೊಂಡರೆ ಬಲೆ ಕಟ್ಟಿ ನಾಯಿಗಳಿಂದ ಇಲ್ಲವೇ ಬೆದರಿಸಿ ಬಲೆಗೆ ಬೀಳುವಂತೆ ಮಾಡಿ ಹಿಡಿಯುತ್ತಾರೆ.

**ಪತ್ತೆಲಕ (ಕಾಡು ಇಲ್ಲಿ) :** ಇವುಗಳನ್ನು ರಾತ್ರಿಯ ವೇಳೆಯಲ್ಲಿ ಚಂದ್ರನ ಬೆಳಕಿನಲ್ಲಿ ಬಿಲಗಳ ಹತ್ತಿರ ಕಬ್ಬಿಣದ ಛಡಿಗಳನ್ನಿಟ್ಟು ಕೊಲ್ಲುತ್ತಾರೆ. ಇಲ್ಲವೆ ಹಗಲಿನ ವೇಳೆಯಲ್ಲಿ ಬಿಲಕ್ಕೆ ಹೊಗೆ ಹಾಕುವುದರ ಮೂಲಕ ಇಲಿಗಳನ್ನು ಹಿಡಿಯುತ್ತಾರೆ.

**ಜಂಗಾಸಿಗಮು, ಪುನಗಾಸಿಗಮು (ಕಾಡು ಬೆಕ್ಕು ಅಥವಾ ಪುನಗ ಬೆಕ್ಕು) :** ಇದನ್ನು ಬಲೆಯ ಸಹಾಯದಿಂದ ಆಗತಾನೆ ಕಾಣಿಸಿಕೊಂಡ ಹೆಜ್ಜೆಯ ಗುರುತನ್ನು ಗಮನಿಸಿ ಅಂದಾಜಿನ ಮೇಲೆ ಈ ಪೊದರೆಯಲ್ಲಿ ಕಾಡುಬೆಕ್ಕು ಇರಬಹುದು ಎಂದುಕೊಂಡು ಒಂದು ಕಡೆ ಬಲೆ ಕಟ್ಟಿ ಬೆದರಿಸಿದಾಗ ಆ ಬೆಕ್ಕು ಬಲೆ ಇದ್ದ ಕಡೆ ಓಡಿ, ಹೋಗಿ ಬಲೆಗೆ ಸಿಕ್ಕಿಕೊಂಡಾಗ ಅದನ್ನು ಹೊಡೆದು ಹಿಡಿಯುತ್ತಾರೆ. ಇಲ್ಲವೇ ಕಬ್ಬಿಣದ ಬೋನನ್ನು ಇಟ್ಟು ಹಿಡಿಯುತ್ತಾರೆ. ಇದು ರಾತ್ರಿಯ ವೇಳೆಯಲ್ಲಿ ಬಯಲಲ್ಲೆ ಬರುತ್ತದೆ. ಇದು ಕಲ್ಲಿನ ಬಲೆಗೂ ಬೀಳುತ್ತದೆ.

**ಮರನಾಗಿ (ಮಂಜಿಟಗ) :** ಇದು ರಾತ್ರಿಯ ವೇಳೆಯಲ್ಲಿ ಹೊರಗೆ ಬರುತ್ತದೆ ಕಪ್ಪು ಬಣ್ಣದ ಈ ಪ್ರಾಣಿ ಗಿಡದ ಪೊದರೆಗಳಲ್ಲಿ ವಾಸ ಇಲ್ಲವೆ ದಟ್ಟವಾದ ಅರಣ್ಯದಲ್ಲಿ ಮತ್ತು ಗವಿಗಳಲ್ಲಿ ವಾಸ ಮಾಡುತ್ತದೆ. ಇದು ಹಣ್ಣು ತರಕಾರಿಗಳನ್ನು ಮತ್ತು ಕಬ್ಬನ್ನು ತಿನ್ನುತ್ತದೆ. ಈ ಪ್ರಾಣಿಯು ದಿನ ನಿತ್ಯದ ಚಲನ ವಲನಗಳನ್ನು ಗಮನಿಸಿ ಇದು ಹೋಗುವ ಬರುವ ಜಾಡನ್ನು ಗುರ್ತಿಸಿ ಸಂಜೆಯಾದೊಡನೆ ಬಲೆ ಕಟ್ಟಿ ಬಲೆಯ ಆಚೆ ಈಚೆ ಬದಿಯಲ್ಲಿ ಸ್ವಲ್ಪ ದೂರದಲ್ಲಿ ಬೇಟೆಗಾರನು ಅವಿತು ಕುಳಿತುಕೊಳ್ಳುತ್ತಾರೆ. ಪ್ರಾಣಿ ಪೊದರೆಯಿಂದ ಹೊರಬಂದ ತಕ್ಷಣ ಅದನ್ನು ಹಿಂಬಾಲಿಸಿ ಬಲೆಗೆ ಬೀಳಿಸಿ ಹಿಡಿಯುತ್ತಾರೆ. ಇಲ್ಲವೇ ಗಿಡದ ಪೊದರೆ ಅಥವಾ ಗವಿಯಲ್ಲಿ ಇದ್ದದು ಸುಳಿವು ಸಿಕ್ಕಾಗ ಉದರ ಹೊಗೆ (ಹಾಕಿ) ಹಿಡಿಯುತ್ತಾರೆ.

**ನಕ್ಕಲ್ಯಾಟ/ನರಿಸಿಗಾಡು (ನರಿ) :** ನರಿ ಈ ಪ್ರಾಣಿಯು ಹೆಚ್ಚಾಗಿ ಕಬ್ಬು ಬೆಳೆಯುವ ಪ್ರದೇಶದ ಕಡೆ ಹಾಗೂ ದಟ್ಟವಾದ ಅರಣ್ಯ ಪ್ರದೇಶಗಳ ಕಡೆ ಕಾಣಿಸುತ್ತದೆ. ಇದು ರಾತ್ರಿಯ ವೇಳೆ ಹೊಟ್ಟೆ ತುಂಬಿದ ಮೇಲೆ ಕೂಗು ಹಾಕುವ ತವಕ ಇದನ್ನು ರಾತ್ರಿಯ ವೇಳೆಯಲ್ಲಿ ಶಬ್ದಕೇಳಿ ಬೆಳಗಿನ ಜಾವ ನರಿ ಕೂಗಿದ ಕಡೆ ಬೇಟೆ ನಾಯಿಗಳೊಂದಿಗೆ ನಾಲ್ಕೈದು ಜನ ಹೋಗಿ ನಾಯಿಗಳು ವಾಸನೆಯಿಂದ ಚಡಪಡಿಸುತ್ತಿರುವಾಗ ಇಲ್ಲಿ ನರಿ ಇದೆ ಎಂದು ಭಾವಿಸಿ ಆ ಕಬ್ಬಿನ ತೋಟದ ಸುತ್ತ ಮೂಲೆ ನಿಂತು ಮತ್ತೊಂದು ಕಡೆಗೆ ಬಲೆ ಕಟ್ಟಿ ಬಿಡುತ್ತಾರೆ. ನಂತರ ಒಂದು ಕಡೆಯಿಂದ ನಾಯಿಗಳನ್ನು ಬಿಟ್ಟು ಮೂರು ದಿಕ್ಕಿನಿಂದ ಜೋರಾಗಿ

ಶಬ್ದಮಾಡಿದಾ ಕ್ಷಣ ನರಿ ಕೂಗಿ ಒಂದು ಮೂಲೆಗೆ ಜಿಗಿದಾಗ ಅದನ್ನು ಬೆದರಿಸಿ ಬಲೆಗೆ ಬೀಳಿಸಿ ಹಿಡಿಯುತ್ತಾರೆ. ಬಯಲಿನಲ್ಲಿ ಸಿಕ್ಕರೆ ನಾಯಿಗಳನ್ನು ಚೂಬಿಟ್ಟು ಬೆನ್ನಟ್ಟಿ ಓಡಿ ಬಡಿದು ಹಿಡಿಯುತ್ತಾರೆ.

**ಕುಂದೆಲು (ಮೊಲ) ಬೇಟೆ :** ಈ ಪ್ರಾಣಿಯನ್ನು ಹಿಡಿಯುವಾಗ ಅತೀ ಜಾಗರೂಕತೆ ವಹಿಸಿ ಹೆಜ್ಜೆ ಗುರುತು ಹಾಗೂ ಗಿಡಗಂಟಿ ಚಿಕ್ಕಚಿಕ್ಕ ಪೊದರೆಗಳನ್ನು ಹುಡುಕುತ್ತಾ ಹೋಗುತ್ತಾರೆ. ನಾಯಿಗಳನ್ನು ಕೈಯಲ್ಲಿಯೇ ಹಿಡಿದಿರುತ್ತಾರೆ. ಮೊಲ ಎದ್ದ ಕೂಡಲೇ ನಾಯಿಯನ್ನು ಬಿಟ್ಟು ಬಿಡುತ್ತಾರೆ ಮೊಲವನ್ನು ದಿಬ್ಬದ ಕಡೆಯಿಂದ ಇಳಿಜಾರು ಕಡೆಗೆ ಓಡಿಸಿ ಹಿಡಿಯುತ್ತಾರೆ. ಕಾರಣ ಮೊಲಕ್ಕೆ ಇಳಿಜಾರಿನಲ್ಲಿ ಓಡುವುದು ಕಷ್ಟಕರವಾಗುತ್ತದೆ ಇದರಿಂದ ನಾಯಿಗಳಿಗೆ ಸುಲಭವಾಗುತ್ತದೆ.

ಕಂಟಿ ಪೊದರೆಗಳ ಕಡೆ ಮೊಲದ ಜಾಡ (ಹೆಜ್ಜೆ ಗುರುತು) ಸಿಕ್ಕಾಗ ಸ್ವಲ್ಪ ದೂರದಲ್ಲಿ ಬಲೆ ಕಟ್ಟಿ ಎಲ್ಲ ಕಂಟಿ ಪೊದರೆಗಳನ್ನು ಜಾಡಿಸುತ್ತಾ ಬೆದರಿಸುತ್ತಾ ಬಂದಾಗ ಒಂದು ಕಂಟಿ ಯಿಂದ ಚಂಗನೆ ಜಿಗಿದ ಕೂಡಲೆ ಅದರ ಎದೆ ಒಡೆದು ಹೋಗುವ ಹಾಗೆ ಕೂಗು ಹಾಕುತ್ತಾ ಬಲೆಯ ಕಡೆಗೆ ಓಡುವಂತೆ ಮಾಡಿ ಹಿಡಿಯುತ್ತಾರೆ.

**ಕುರುಂಗಾಡು (ಆಮೆ) ಬೇಟೆ :** ಇದನ್ನು ನದಿ, ಹಳ್ಳದ ಮತ್ತು ಕೆರೆಯ ದಡದಲ್ಲಿ ಬೇಟೆಯಾಡುತ್ತಾರೆ. ಆಮೆ (ಕುರುಂಗಾಡು)ಗಳು ಕೆಸರಿನಲ್ಲಿ ಅಡಗಿ ಕುಳಿತಿರುತ್ತವೆ. ಬೆಳಗಿನ ಜಾವ ಸೂರ್ಯೋದಯಕ್ಕಿಂತ ಮುಂಚೆ ನದಿಗಳಲ್ಲಿ ಹಳ್ಳದಲ್ಲಿ ಮತ್ತು ಕೆರೆಗಳಿಗೆ ಹೋಗಿ ಒಂದು ಉದ್ದನೆಯ ನಾಲ್ಕು ಅಡಿ ಉದ್ದನೆಯ ಕಬ್ಬಿಣದ ಸಲಾಕೆಗೆ ಕಟ್ಟಿಗೆ ಹಿಡಿಕೆ ಮಾಡಿ ಹಳ್ಳ ಅಥವಾ ಕೆರೆ ನದಿಯ ದಡದ ಕೆಸರಿನಲ್ಲಿ ಸಲಾಕೆ ಚುಚ್ಚುತ್ತಾ ಹೋದಾಗ ಆಮೆ (ಕುರುಂಗಾಡು) ಅಡಗಿರುವ ಸ್ಥಳದಲ್ಲಿ ಡೊಕ್ಕೆಂದು ಶಬ್ದ ಕೇಳಿ ಬಂದಾಗ ಆ ಶಬ್ದ ಬಂದ ಸ್ಥಳದಲ್ಲಿ ಮೇಲೆ ಕಾಲಿಟ್ಟು ಅಲುಗಾಡಿಸಿ ನೋಡಿದಾಗ ಮೇಲ್ಭಾಗ ನುಣುಪಾಗಿ ಕಂಡರೆ ಆಮೆ ಇದೆ ಎಂದು ತಿಳಿದು ಅದನ್ನು ಹಿಡಿದು ಚೀಲದಲ್ಲಿ ಹಾಕಿಕೊಳ್ಳುತ್ತಾರೆ. ಹಾಗೆ ಮುಂದೆ ಹುಡುಕುತ್ತಾ ಹೋಗಿ ಸುಮಾರು ಹನ್ನೊಂದು, ಹನ್ನೆರಡು ಗಂಟೆವರೆಗೆ ಬೇಟೆಯಾಡಿ ಅವುಗಳೆಲ್ಲವನ್ನು ಹಳ್ಳದ ಬದಿಯಲ್ಲಿ ಅಡವಿಯಲ್ಲಿ ಬಹಳಷ್ಟು ಕಟ್ಟಿಗೆ ಕೂಡಿಸಿ ಅದಕ್ಕೆ ಬೆಂಕಿ ಹೊತ್ತಿಸುತ್ತಾರೆ. ನಂತರ ಆಮೆಗಳನ್ನು ಒದೊಂದಾಗಿ ಹೊರಗೆ ತೆಗೆದು ಮೊದಲು ಅವುಗಳನ್ನು ಅಂಗಾತವಾಗಿ ಹಾಕಿ ಹಿಂಭಾಗವನ್ನು ಬೆಂಕಿ ಉರಿಯುವ ಕಡೆಗೆ ಹಿಡಿಯುತ್ತಾರೆ. ಆಗ ಅದು ಬೆಂಕಿಯ ಜ್ವಾಲೆಗೆ ಹೆದರಿ ತಲೆಯನ್ನು ಹೊರಗೆ ತೆಗೆಯತ್ತದೆ. ಆಗ ಅದರ ತಲೆಯನ್ನು ಹಿಡಿದು ಶಿರಕ್ಕೆ ಹೊಡೆದು ಸಾಯಿಸುತ್ತಾರೆ. ನಂತರ ಅದನ್ನು ಬೆಂಕಿಯಲ್ಲಿ ಹಾಕಿ ಸುಟ್ಟುಕೊಂಡು ಮನೆಗೆ ಹೋಗುತ್ತಾರೆ.

**ತೋಲ್ಯಾಟ (ನೆಗಳಾಮೆ) :** ನದಿಯಲ್ಲಿ ನೀರು ತುಂಬಿ ಹರಿಯುವಾಗ ಆಮೆಗಳಿರುವ ಜಾಗದ ಮಡುವನ್ನು ಪತ್ತೆ ಹಚ್ಚಿ ಗಾಣಗಳಿಂದ ಬೇಟೆಯಾಡುತ್ತಾರೆ. ಜರ್ಮನ್ ಟಾಂಕೋಸ ಜರ್ಮನ್ ವಾಯರ್‌ನ ದಾರನ್ನು ಗಾಣಕ್ಕೆ ಕಟ್ಟಿ ಅದಕ್ಕೆ ಓತಿಕಾಟದ ಮಾಂಸ ಅಥವಾ ಕಪ್ಪೆ

ಮಾಂಸವನ್ನು ಕಟ್ಟಿ ಅದಕ್ಕೆ ಚಿಕ್ಕ ದಾರದಿಂದ ಬಿಗಿಯುತ್ತಾರೆ. ಅದರ ಬದಿಗೆ ಗಟ್ಟಿಯಾದ ಕೆಸರನ್ನು ಒತ್ತಿ ಬೀಸಿ ನದಿಯ ಮಧ್ಯಭಾಗದವರೆಗೆ ಎಸೆಯುತ್ತಾರೆ. ನಂತರ ಆಮೆ, (ತೋಲ್ಯಾ) ಮಾಂಸವನ್ನು ನೋಡಿ ತಿನ್ನಲು ಹಿಡಿದು ಎಳೆಯುತ್ತದೆ. ಆಗ ವಾಯರ್ ನೆಟ್ಟಗಾಗಿ ಹೋಗುತ್ತಿರುತ್ತದೆ. ಶಬ್ದ ಮಾಡದೆ ಸುಮಾರು ಎರಡು ಮೂರು ಅಡಿಗಳಷ್ಟು ವಾಯರ್ ಬಿಟ್ಟು ಜಡತಾ ಹೊಡೆಯುತ್ತಾರೆ. ಗಾಣಕ್ಕೆ ಆಮೆ ಸಿಕ್ಕಿಕೊಂಡರೆ ತಮ್ಮ ಶಕ್ತಿಪ್ರಯೋಗಿಸಿ ಎಳೆದು ಹಿಡಿಯುತ್ತಾರೆ. ಹಾಗೂ ನೀರೆಲ್ಲ ಬತ್ತಿ ಹೋದಾಗ ನೀರನ್ನು ಕಲಕು ಮಾಡಿ ಶಬ್ದ ಮಾಡುತ್ತಾ ಕೆಸರಿನಲ್ಲಿ ಸೇರಿಕೊಳ್ಳುವಂತೆ ಮಾಡಿ ಆಮೆಗಳನ್ನು ಹಿಡಿಯುತ್ತಾರೆ ಮತ್ತು ಮೀನು ಗಳನ್ನು ವಿವಿಧ ರೀತಿಯ ಟೋಪಡಮ (ಜಾಳಿಗೆ) ಬಲೆ ಗಳಿಂದ, ತಿಕ್ಕಡಯಾಟ, ಗಾಣಗಳಿಂದ ಬೇಟೆಯಾಡುತ್ತಾರೆ.

ಆಮೆಯನ್ನು ಹಿಡಿಯುವ ವಿವಿಧ ಬಗೆಗಳು

**ದೋಟಿಗಾಲಂ ಶಿಕಾರಿ:** ಇದು ಬಾವಿಯ ಮೇಲೆ ಒಂದು ಬಿದಿರಿಗೆ ಗಾಣವನ್ನು ಕಟ್ಟಿ ಒಂದು ತಪ್ಪಿಂದ ರೆಂಬೆಯನ್ನು ಅಡ್ಡವಾಗಿ ಇಟ್ಟಿಕೊಂಡು ಮರೆಯಲ್ಲಿ ನಿಂತು ಆಮೆ ಉಸಿರಾಡಲು ನೀರಿನ ಮೇಲ್ಭಾಗಕ್ಕೆ ಒಂದು ತಲೆ ಎತ್ತಿದಿದಾಗ ಗಾಣದಿಂದ ಅದನ್ನು ಸೆಳೆದು ಹಿಡಿದು ತರುವ ಪದ್ಧತಿ.

**ಬಾವಿಯಲ್ಲಿ ಎಗರಿ ಹಿಡಿಯುವ ಶಿಕಾರಿ :** ವ್ಯಕ್ತಿಯು ಬಾವಿಯ ನೀರಿನೊಳಗೆ ಮುಳುಗಿ ಆಮೆಯನ್ನು ಹಿಂಬಾಲಿಸಿ ಹಿಡಿದು ತರುವ ಪದ್ಧತಿ.

**ಪೊಡುಪು ಶಿಕಾರಿ :** ಆಮೆಯು ಕೊಳದಲ್ಲಿ ಇದ್ದುದನ್ನು ನೋಡಿ ಕೊಳದ ನೀರಿನಲ್ಲಿ ಗದ್ದಲ ಮಾಡಿದಾಗ ಕೆಳಭಾಗದ ನೆಲದಲ್ಲಿ ಅವಿತುಕೊಳ್ಳುತ್ತದೆ. ಆಗ ವ್ಯಕ್ತಿಯು ಚೂಪಾದ ಒಂದು ಉದ್ದನೆಯ ಕಟ್ಟಿಗೆಯ ಸಹಾಯದಿಂದ ತಿವಿಯುತ್ತ ಹೋಗುವನು ಆಗ ಆಮೆ ಇದ್ದ ಮೇಲ್ಭಾಗ ಚಿಪ್ಪುಣಿಯ ಕಟ್ಟಿಗೆಯು ಶೋಕಿದಾಗ ಟಿಪ್ ಎಂದು ಸದ್ದಾಗುವುದು ಈ ಸದ್ದಿನ ಮೇಲೆ ಆಮೆ ಇರುವ ಜಾಗವನ್ನು ನೋಡಿ ಹಿಡಿದು ತರುವನು.

**ಹೆಜ್ಜೆ ಶಿಕಾರಿ :** ಕೆಸರಲ್ಲಿ ಓಡಾಡಿದ ಆಮೆಯ ಹೆಜ್ಜೆಗಳನ್ನು ಬೇಸಿಗೆಯಲ್ಲಿ ಕೆರೆಯ ಅಡಿಯ ಮಣ್ಣಿನಲ್ಲಿ ವ್ಯಕ್ತಿಯು ಅದನ್ನು ಕಂಡು ಹಿಡಿದು ತರುತ್ತಾನೆ.

**ಕೊಂಡ್ರಿಗಾಡು (ಕತ್ತೆಕಿರುಬ )ಶಿಕಾರಿ :** ಆ ಪ್ರಾಣಿ ಬಂದು ಹೋಗುವ ಗವಿಯನ್ನು ಗಮನಿಸಿ ಬೇಟೆಗಾರನು ಹಗಲು ಹೊತ್ತಿನಲ್ಲಿ ಗವಿಯೊಳಗೆ ಇಬ್ಬರು ವ್ಯಕ್ತಿಗಳು ನುಸುಳುವರು ಹೊರಗಡೆ ಯಿಂದ ಆ ವ್ಯಕ್ತಿಗಳಿಗೆ ಸಹಾಯ ಮಾಡಲು ಮೂರು ಅಥವಾ ನಾಲ್ಕು ಜನ ಗಿಡಗಳ ಕೊಂಬೆ ಮತ್ತು ರೆಂಬೆಗಳನ್ನು ಗವಿಯೊಳಗಿನ ವ್ಯಕ್ತಿಗಳಿಗೆ ನೀಡಲು ಸಹಾಯ ಮಾಡುತ್ತಾರೆ. ಆ ಪ್ರಾಣಿ ಇರುವ ಜಾಗಕ್ಕೆ ನುಸುಳುತ್ತಾ ಅದು ಎಷ್ಟೆ ಕ್ಲಿಷ್ಟವಾಗಿದ್ದರು. ಆ ಜಾಗವನ್ನು ಪ್ರವೇಶ ಮಾಡುತ್ತಾರೆ. ಅದರಲ್ಲಿ ಇರುವ ಕತ್ತೆಕಿರುಬ ಪ್ರಾಣಿಯು ಇವರ ಗದ್ದಲಕ್ಕೆ ಹಿಮ್ಮುಖಿ ವಾಗಿ ನಿಲ್ಲುತ್ತದೆ.

ಹಿಮ್ಮುಖಿವಾಗಿ ನಿಂತ ಪ್ರಾಣಿಯ ಎಡ ಬಲ ಮತ್ತು ಮೇಲೆ ಹೊರಗಿನಿಂದ ತಂದಂತೆ

ರೆಂಬೆಕೊಬ್ಬೆಗಳನ್ನು ತುರುಕುತ್ತಾ ಇರುತ್ತಾರೆ. ಕಾರಣ ಆ ಪ್ರಾಣಿಯು ಇವರಿಗೆ ಮುಖಮಾಡಿ ತಿರುಗದಂತೆ ಮುನ್ನೆಚ್ಚರಿಕೆ ವಹಿಸುತ್ತಾರೆ. ಇನ್ನೊಬ್ಬ ವ್ಯಕ್ತಿ ಅದರ ಹಿಂಗಾಲುಗಳನ್ನು ಕಟ್ಟಿ ಅದರ ಗುದಕ್ಕೆ ಗೂಟದಂತ ಕಟ್ಟಿಗೆಯನ್ನು ತುರುಕುತ್ತಾರೆ. ನಂತರ ಆ ಪ್ರಾಣಿಯನ್ನು ಸ್ವಲ್ಪ ಸ್ವಲ್ಪವೆ ಎಳೆದು ತಂದು ಹೊರಗಡೆ ಬಂದಾಗ ಅದನ್ನು ಸಾಯಿಸಿ ಬಂದಂತ ಎಲ್ಲಾ ಜನರು ಪಾಲುಗಳನ್ನು ಹಾಕಿಕೊಂಡು ತಮ್ಮ ತಮ್ಮ ಮನೆಗಳಿಗೆ ಹೋಗಿ ಹೆಂಡ ತಂದು ಅಡುಗೆ ಮಾಡಿ "ಜೇಗಿರಾಸಿರಪನ್ನ ಕೊಂಡ್ರಿಗಾಡು ಶ್ಯಾಕಾಮು ಸಿದನಂ ಮೆಸುಗುದಾಂ ಮಸ್ಕೊಟ್ಲಕಿ ದೇಪುದಾಂ" ಎನ್ನುತಾ ಬೇಟೆಯ ಭಾವನೆ ವ್ಯಕ್ತಪಡಿಸುತ್ತಾರೆ.

ಏದು (ಮುಳ್ಳಂದಿ) ಶಿಕಾರಿ : ಈ ಪ್ರಾಣಿ ಆಹಾರಕ್ಕಾಗಿ ರೈತರ ಹೊಲಗದ್ದೆಗಳಿಗೆ ಬಂದು ಹೋಗುವ ಜಾಡನ್ನು ಒಂದು ದಿನ ಮುಂಚಿತವಾಗಿ ಕಂಡು ಹಿಡಿಯುತ್ತಾರೆ. ಈ ಪ್ರಾಣಿಯು ಹೊಲಗದ್ದೆಗಳಿಗೆ ಬಂದಾಗ ಕೆಲ ವಿಧಗಳನ್ನು ಗಮನಿಸುತ್ತಾರೆ. ಅಮಾವಾಸ್ಯೆ ಹುಣ್ಣಿಮೆ, ಗಾಳಿಬೀಸುವ ದಿಕ್ಕುಗಳು ಗಮನಿಸಿ ಮಾರನೆಯ ದಿನ ಅದಕ್ಕೆ ಸರಿಯಾಗಿ ಕುಂದೇಟುವಲ (ಮೊಲ ಹಿಡಿಯುವ ದಾರದ ಬಲೆ) ಅಡ್ಡಾಲಾಗಿ ಕಟ್ಟಿ ಆ ಪ್ರಾಣಿಯು ಬಲೆಯ ವಾಸನೆ ಬೀಳದಂತೆ ನೋಡಿಕೊಂಡು ಬಲೆಯಲ್ಲಿ ಕೆಡವಲು ಗಲಾಟೆ ಮಾಡುತ್ತಾನೆ. ಅದು ಆಕಸ್ಮಿಕವಾಗಿ ಬಂದ ಶಬ್ದಕ್ಕೆ ಓಡಿ ಹೋಗಿ ಬಲೆಯಲ್ಲಿ ಬೀಳುತ್ತದೆ. ಬಿದ್ದ ನಂತರ ಅದನ್ನು ಹೊಡೆದು ತಂದು ಮುಳ್ಳುಗಳನ್ನು ಕಿತ್ತಿ ಅದರ ಹೊಟ್ಟೆ ಔಷಧಕ್ಕಾಗಿ ತೆಗೆದಿಟ್ಟು ಉಳಿದೆಲ್ಲ ಮಾಂಸ ಆಹಾರವಾಗಿ ಉಪಯೋಗಿಸುವುದುಂಟು.

ಕಮುಜು (ಕೌಜಗ) ಬೇಟೆ : ಇದು ಅವರ ಅಚ್ಚು ಮೆಚ್ಚಿನ ಬೇಟೆ, ಕೌಜಗ ಮರಿಗೆ ಸರಿಯಾದ ತರಬೇತಿ ನೀಡಿ, ಸೀಟಿ ಹಾಕುವುದೇ ತಡ 'ಕಳಕಕ್' ಎಂದು ಪ್ರತಿಕ್ರಿಯಿಸುವ ವರೆಗೂ ತರಬೇತಿ ಕೊಟ್ಟು ನಂತರ ಬೇಟೆಯ ಕೌಜಗ ಹಿಡಿಯಲಿಕ್ಕೆ ಅಡವಿಗೆ ತೆಗೆದುಕೊಂಡು ಹೋಗುತ್ತಾರೆ. ಸಾಕಿದ ಕೌಜಗವನ್ನು ಕಾಣದಂತೆ ಮಾಡಿ ಅಡವಿಯಲ್ಲಿರುವ ಕೌಜಗಗಳು ಇರುವುದನ್ನು ಕಂಡುಕೊಳ್ಳುತ್ತಾರೆ. ಕೆಲವೊಮ್ಮೆ ಕೆಲವು ಸ್ಥಳಗಳಲ್ಲಿ ಕಸ ಕಡ್ಡಿಗಳನ್ನು ಕಿತ್ತಿರು ವುದನ್ನು ಮತ್ತು ಆಗತಾನೆ ತಿರುಗಾಡಿದ ಹೆಜ್ಜೆಗಳ ಗುರುತಿನ ಮೇಲೆ ಕೌಜಗ ಬಲೆ ಹಾಕಿ ಸಾಕಿದ ಕೌಜಗವನ್ನು ಬಲೆಯ ಈಚೆಗೆ ಒಂದು ಪುಟ್ಟ ಗಿಡಕ್ಕೆ ತೂಗು ಬಿಟ್ಟು ಸ್ವಲ್ಪ ದೂರದಲ್ಲಿ ಅವಿತು ಕುಳಿತು ಸಿಳ್ಳು-ಹಾಕುತ್ತಾರೆ. ಸಾಕಿದ ಕೌಜಗ ಕೂಗಿದ ನಂತರ ಅಡವಿ ಕೌಜಗ ಜಗಳಕ್ಕೆಂದು ರೋಷದಿಂದ ಬಂದಾಗ ಆಗ ಬಲೆಯಲ್ಲಿ ಸಿಕ್ಕಿ ಬೀಳುತ್ತದೆ.

ಒಂದು ವೇಳೆ ಈ ರೀತಿಯಾಗಿ ಕೌಜಗ ಬೀಳದಿದ್ದರೆ, ಹೊಲದ ಮಧ್ಯಭಾಗದಲ್ಲಿ ಇಲ್ಲವೆ ಪೊದರೆಗಳ ಮಧ್ಯದಲ್ಲಿ ಹಾಕಿ ಆ ಕಡೆಯಿಂದ ಈ ಕಡೆಯಿಂದ ಬೆದರಿಸಿ ಬಲೆಯ ಕಡೆ ತಿರುವಿ ಹಿಡಿಯುತ್ತಾರೆ.

ಲ್ಯಾವಂಕ (ಬುರ್ಲಿ) : ಇವುಗಳನ್ನು ಸಾಯಂಕಾಲ ವೇಳೆಯಲ್ಲಿ ಮಡ್ಡಿ (ದಿಬ್ಬ) ಗುಡ್ಡಗಾಡು ಪ್ರದೇಶಗಳ ಚಿಕ್ಕ ಪುಟ್ಟ ಕಂಟಿಗಳಿರುವ ಕಡೆ ಹೋಗಿ ಸಾಕಿದ ಬುರ್ಲಿಯಿಂದ ಇಲ್ಲವೇ ಸ್ವತಃ ಬೇಟೆಗಾರನೆ ಬುರ್ಲಿಯ ಕೂಗನ್ನು ತನ್ನ ಬಾಯಿಯಿಂದ ಅನುಕರಣೆ ಮಾಡಿ ಹಿಡಿಯುತ್ತಾರೆ.

ಅಥವಾ ಅವು ಬರುವ ಹೋಗುವ ದಾರಿಯಲ್ಲಿ ಬಲೆ ಹಾಕಿ ಹಿಡಿಯುತ್ತಾರೆ ಒಮ್ಮೊಮ್ಮೆ ದೂರಿದಿಂದ ಬೆದರಿಸಿ ಕೂಡಾ ಬುರ್ಲಿಯನ್ನು ಹಿಡಿಯುತ್ತಾರೆ.

ಪುಲ್ಲಾಕೋಡಿ (ನೀರಕೋಳಿ) : ನೀರಕೋಳಿ ಈ ಪಕ್ಷಿ ಹೊಳೆ ಹಳ್ಳದ ದಂಡೆಯಲ್ಲಿ ನೀರಿರುವ ಪ್ರದೇಶಗಳ ಕಡೆಗಳಲ್ಲಿ ಇರುತ್ತವೆ. ಇದು ಇರುವ ಪ್ರದೇಶ ಕಡೆಗೆ ಹೋಗಿ ನೀರಿನ ಅಕ್ಕ ಪಕ್ಕದಲ್ಲಿ ಬಲೆ ಹಾಕಿ ಕುಳಿತುಕೊಳ್ಳುತ್ತಾರೆ. ಮತ್ತು ಅದರ ಅನುಕರಣೆಗಾಗಿ ತಾವೆ ತಯಾರಿಸಿದ ರಬ್ಬಲಿನ ಸೀಟಿಯನ್ನು ಉಪಯೋಗಿಸಿ ಸಿಳ್ಳು (ಸೀಟಿ) ಹಾಕಿ ನೀರಕೋಳಿ ಹೊರಬರುವಂತೆ ಮಾಡಿ ಬಲೆಗೆ ಬೀಳಿಸುತ್ತಾರೆ. ಇಲ್ಲವೆ ಅವು ಇರುವ ಸ್ಥಳವನ್ನು ಗಮನಿಸಿ ಊರುಗೋಲಿನ ಉರುಲನ್ನು (ಉಚ್ಚುಲು) ಚುಚ್ಚುತ್ತಾರೆ. ಅಲ್ಲಿಯೇ ಮೇಯ್ಯಲು ಬಂದಾಗ ಆ ಉರುಲಿಗೆ ನೀರಕೋಳಿ ಸಿಕ್ಕಿಕೊಳ್ಳುತ್ತದೆ.

ಯಂಡ್ರಕಾಯ (ಏಡಿ) : ಒಂದು ಉದ್ದವಾದ ಕಟ್ಟಿಗೆಯ ಗಳಕ್ಕೆ ಜರ್ಮನಿನ ವಾಯರ (ಟಾಂಕೋಸು)ನ್ನು ಕಟ್ಟಿ ಅದರ ತುದಿಯಲ್ಲಿ ಕಲ್ಲು, ಕಲ್ಲಿನ ಮೇಲೆ ಮೀನು ಅಥವಾ ಮಾಂಸದ ತುಂಡನ್ನು ಕಟ್ಟಿ ಏಡಿ ಇರುವ ಸ್ಥಳದಲ್ಲಿ ಅಲುಗಾಡಿಸುತ್ತಮೇಲೆ ಕೆಳಗೆ ಮಾಡಿದಾಗ ಏಡಿ ಅದನ್ನು ಬಂದು ಹಿಡಿಯುತ್ತದೆ. ನಂತರ ನಿಧಾನವಾಗಿ ಹೊರತೆಗೆದು ಕೈಯಿಂದ ಹಿಡಿಯು ತ್ತಾರೆ.

ರಾತ್ರಿಯ ವೇಳೆಯಲ್ಲಿ ಬೆಂಕಿಯ ದಿವಟಿಗೆ (ದೀಪ) ಹಿಡಿದು ಹಳ್ಳದ ದಂಡೆ ಅಥವಾ ಏಡಿಗಳಿರುವ ನೀರಿನ ದಡದಲ್ಲಿ ನೋಡುತ್ತ ಹೋದಾಗ ಬೆಂಕಿಗೆ ಏಡಿಯ ಕಣ್ಣುಗಳು ಕಾಣ ದಂತಾಗಿ ಅಲ್ಲಿ ಕುಳಿತಾಗ ಕೈಯಲ್ಲಿನ ಕುಡುಗೋಲು ಇಲ್ಲವೆ ಮಚ್ಚಿನಿಂದ ಹೊಡೆದು ಹಿಡಿಯು ತ್ತಾರೆ.

ಉಪಯೋಗ : ಅಡವಿ ಬೆಕ್ಕಿನ ಚರ್ಮ ಹಾಗೂ ಜಿಂಕೆಯ ಚರ್ಮವನ್ನು ಅವರು ಹಾಕುವ ವೇಷಗಳಾದ ವಿಶ್ವಾಮಿತ್ರ ಕೈಯಲ್ಲಿನ ಚರ್ಮ ಪರಮಾತ್ಮನ ವೇಷದ ಸೊಂಟಕ್ಕೆ ಸುತ್ತಿ ಕೊಳ್ಳುವುದು, ಕೆಲವು ಪ್ರಾಣಿಗಳ ಉಗುರುಗಳನ್ನು ವೇಷದ ಆಭರಣಕ್ಕಾಗಿ ಉಪಯೋಗಿಸುತ್ತಾರೆ. ನರಿಯ ಬಾಲವನ್ನು ಗುಡಾರದಲ್ಲಿ ಕೌಶಲ್ಯಕ್ಕಾಗಿ ನೇತು ಬಿಟ್ಟಿರುತ್ತಾರೆ. ಮುಳ್ಳಂದಿಯ ಮುಳ್ಳುಗಳನ್ನು ತಲೆಯ ಮೇಲ್ಬಾಗದ ಜುಟ್ಟಿಗೆ ಸಿಕ್ಕಿಸಿಕೊಳ್ಳುತ್ತಾರೆ. ಉಡದ ಚರ್ಮವನ್ನು ವಾದ್ಯಗಳ ಮುಚ್ಚಳಿಕೆಗಾಗಿ ಉಪಯೋಗಿಸುತ್ತಾರೆ.

ಔಷಧಕ್ಕಾಗಿ : ಅಳಿಲಿನ ರಕ್ತವನ್ನು ಕೆಮ್ಮಿಗಾಗಿ ಉಪಯೋಗಿಸುತ್ತಾರೆ. ಉಡದ ತುಪ್ಪ (ಚರ್ಬಿ) ನಡದ ನೋವಿಗಾಗಿ ಹಚ್ಚುತ್ತಾರೆ. ಪುನಗನ ಬೆಕ್ಕಿನ ಪುನಗ ಗಡ್ಡಿಯನ್ನು ಚಿಕ್ಕ ಮಕ್ಕಳ ಕೊರಳಿಗೆ ಕಟ್ಟುತ್ತಾರೆ. ಇದರಿಂದ ಮಕ್ಕಳಿಗೆ ವಾಂತಿ ಹಾಗೂ ಕಿಸುರು ಬೇದಿ ಆಗುವುದಿಲ್ಲ ಆರೋಗ್ಯವಂತರಾಗಿ ಬೆಳೆಯುತ್ತಾರೆ. (ಏದುವ ಪೋಟ್ಟ) ಏದುವ ಎಂಬ ಪ್ರಾಣಿಯ ಹೊಟ್ಟೆಯ ಭಾಗದಲ್ಲಿನ ಮುಖ್ಯ ಕರುಳನ್ನು ಬಿಸಿಲಿಗೆ ಒಣಗಿಸಿ ಇಟ್ಟು ನಂತರ ಮಕ್ಕಳಿಗೆ ತಿಕ್ಕಿ ಹಾಕುವುದರಿಂದ ಮಕ್ಕಳಿಗೆ ಸರಿಯಾಗಿ ಹೊಟ್ಟೆ ಹಸಿವೆಯಾಗಿ ಆಹಾರವನ್ನು ಚೆನ್ನಾಗಿ ತೆಗೆದುಕೊಳ್ಳುತ್ತಾರೆ. ಚಿಕ್ಕಮಕ್ಕಳಿಗೆ ಕತ್ತೆ ಹಾಲು ಹಾಕುವರು. ಜೀರ್ಣಶಕ್ತಿ ರೋಗ ನಿರೋಧಕ ಶಕ್ತಿ ಹೆಚ್ಚು.

ಅಡವಿ ಪಾರಿವಾಳ ಹಾಗೂ ಜಮಡಕಾಗಿ (ರತ್ನ ಪಕ್ಷಿ) ಇವುಗಳ ರಕ್ತವನ್ನು ಪಾರ್ಶ್ವವಾಯು ಮತ್ತು ಅರ್ಧಾಂಗಿ ವಾಯ್ಯುವಿಗೆ ಉಪಯೋಗಿಸುತ್ತಾರೆ.

**ಪ್ಪಿಟ್ಟಿಲು ಯಾಟ(ಪಕ್ಷಿ ಬೇಟೆ) ರೆಕ್ಕೆ ಬಲೆ ಬೇಟೆ**

ಇದನ್ನು ದಾರದಿಂದ ಬಲೆಯನ್ನು ಹೆಣೆದಿರುತ್ತಾರೆ. ಆ ಬಲೆಯ ಎರಡು ಭಾಗದಲ್ಲಿ ಬಿದಿರುನಿಂದ ರೆಕ್ಕೆ ಆಕಾರದಲ್ಲಿ ಕಟ್ಟಿ ಅದನ್ನು ಪ್ರಾಣಿ ಮತ್ತು ಪಕ್ಷಿಗಳು ಬರುವ ಮತ್ತು ಓಡಾಡುವ ಜಾಗದಲ್ಲಿ ವೃತ್ತಾಕಾರವಾಗಿ ಹಾಸಿ ಅದರ ಮೇಲೆ ಹುಲ್ಲು ಕಟ್ಟಿಗಳನ್ನು ಹಾಕಿ ಬಲೆ ಕಾಣದಂತೆ ಮಾಡಿ ಅದರ ಮೇಲೆ, ಪಕ್ಷಿಗಳಾದರೆ ಕಾಳುಗಳನ್ನು ಪ್ರಾಣಿಗಳಾದರೆ ಸಣ್ಣಪುಟ್ಟ ಮೀನು ಮಾಂಸ ಚೆಲ್ಲುತ್ತಾರೆ. ಇದನ್ನು ಕಂಡ ಪ್ರಾಣಿಪಕ್ಷಿಗಳು ತಿನ್ನಲೆಂದು ಬಂದಾಗ ದೂರದಲ್ಲಿ ಬೇಟೆಗಾಗಿ ತೆಗೆದುಕೊಂಡು ಹೋಗಿದ್ದ ಧನವನ್ನು ಅದರ ಹಿಂಭಾಗದಲ್ಲಿ ಅವಿತು ಅವುಗಳಿಗೆ ಕಾಣದಂತೆ ಧನವನ್ನು ನಿಧಾನವಾಗಿ ಆ ಬಲೆಯ ಕಡೆಗೆ ಬಂದು ಸ್ವಲ್ಪ ದೂರದವರೆಗೆ ಹರಿದು ಬಿಟ್ಟು ಹಗ್ಗವನ್ನು ಜಗ್ಗುತ್ತಾರೆ. ಆಗ ಅದರಲ್ಲಿ ಪ್ರಾಣಿ ಪಕ್ಷಿಗಳು ಸಿಕ್ಕಿಕೊಳ್ಳುತ್ತವೆ.

**ಜಿಗುರು ಯಾಟ (ಅಂಟು ಬೇಟೆ):** ಒಂದು ಹರಳೆಯ ಮರವನ್ನು ನೋಡಿ ಮರದ ಕಾಂಡಕ್ಕೆ ಕುಡುಗೋಲಿನಿಂದ ರಂಧ್ರಮಾಡಿ ಬರುತ್ತಾರೆ. ಬೆಳಿಗ್ಗೆ ೬ಗಂಟೆಯ ಸಮಯದಲ್ಲಿ ಹೋದಾಗ ಆ ಮರದ ರಂಧ್ರದಲ್ಲಿ ಹಾಲು ಸೇಕರಣೆಯಾಗಿರುತ್ತದೆ. ಆ ಹಾಲನ್ನು ಒಂದು ಕಟ್ಟಿಗೆಯ ಸಹಾಯದಿಂದ ತೆಂಗಿನ ಚಿಪ್ಪಿನಲ್ಲಿ ಹಾಕಿ ಅದನ್ನು ಮನೆಗೆ ತಂದು ಚೆನ್ನಾಗಿ ಸಂಸ್ಕರಿಸಿ ಸಣ್ಣಸಣ್ಣ ಗೋಲಿಗಳ ಆಕಾರವಾಗಿ ತಯಾರಿಮಾಡಿಕೊಂಡು ಬೆಳಿಗ್ಗೆ ಬೇಟೆಗೆ ಹೋಗುವಾಗ ತೆಗೆದುಕೊಂಡು ಹೋಗಿ ದೊಡ್ಡ ಡ್ಯಾಗ ಇರುವ ಮರದ ಕೆಳಗೆ ಒಂದು ಬದುಕಿದ್ದ ಇಲ್ಲಿ ಅಥವಾ ಏಡಿಯನ್ನು ಪಕ್ಷಿಗಳು ಆಕಾಶದಲ್ಲಿ ಹಾರಾಡುವುದನ್ನು ನೋಡಿ ಅದರ ಕಣ್ಣಿಗೆ ಕಾಣುವ ನಯವಾಗಿ ಮೂರು ಸಣ್ಣ ಬಿದಿರಿನ ಗೂಟಗಳನ್ನು ನೆಲದಲ್ಲಿ ತ್ರಿಕೋನಾಕಾರದಲ್ಲಿ ಜೋಡಿಸಿ ಕಡ್ಡಿಗಳ ಮೇಲ್ಭಾಗದಲ್ಲಿ ಸುಮಾರು ನಾಲ್ಕು ಇಂಚು ಕಡ್ಡಿಗಳಿಗೆ ಸಂಸ್ಕರಿಸಿದ ಅರಳೆಗಿಡದ ಹಾಲಿನಿಂದ ಮಾಡಿದ ಗೋಲಿಗಳನ್ನು ಒಂದು ಕಟ್ಟಿಗೆಯಿಂದ ಬಿದಿರಿನ ಮೇಲ್ಭಾಗಕ್ಕೆ ಲೇಪನ ಮಾಡಿರುತ್ತಾರೆ. ಆಕಾಶದಲ್ಲಿ ಹಾರಾಡುವ ಡ್ಯಾಗ ಅಥವಾ ಹಾಲಕ್ಕಿ ಮುಂತಾದ ಪಕ್ಷಿಗಳು ಭೂಮಿ ಮೇಲೆ ಇಟ್ಟಿರುವ ತ್ರಿಕೋನಾಕಾರದ ಗೂಟಗಳ ಕೆಳಗೆ ಬದುಕಿದ್ದ ಇಲಿ ಅಥವಾ ಏಡಿಯನ್ನು ಕಚ್ಚಿದಾಗ ಅವು ಓಡಾಡುವುದನ್ನು ನೋಡಿ ಅವುಗಳನ್ನು ತಿನ್ನಲು ಬಂದು ಗೂಟದ ಮೇಲೆ ಕುಳಿತು ಇಲಿಯನು ತಿಂದು ಹಾರಲು ಹೊದಾಗ ಅಂಟಿನಂತಿರುವ ಜಿಗುರಿಗೆ ರೆಕ್ಕೆಗೆ ಅಂಟಿಕೊಂಡು ಮೇಲೆ ಹಾರಲು ಆಗದೆ ಇದ್ದಾಗ ಬೇಟೆಗಾರ ಬಂದು ಅದನ್ನು ಹಿಡಿಯುತ್ತಾನೆ. ಈ ಬೇಟೆಯಿಂದ ಬಳಸುವ ಗಾದೆ ಮಾತು. "ಪಗಡಿ ಗಂಟೆಕ್ಕಿ ಅನ್ನಿ ತೆಲುಚು ಐತೆಗಾನಿ, ದಾನಿ ಗುದ್ದಕ್ಕಿಂದ ವಚ್ಚ ಜಿಗುರುತೆ ಲೇದು" (ಶಕುನ ಪಕ್ಷಿಗೆ ಎಲ್ಲರ ಶಕುನ ಗೊತ್ತು ಅದರೆ ತನ್ನ ಮುಕಳಿ ಕೆಳಗೆ ಇರುವ ಜಿಗುರು ಗೊತ್ತಿಲ್ಲಾ).

**ಕೃಷಿ ಭೂ ಒಡೆತನ :** ಅಲೆಮಾರಿಗಳಾದ ಬುಡ್ಗ ಜಂಗಮರು ಒಂದು ಕಡೆ ನೆಲೆನಿಲ್ಲದ ಕಾರಣ ಹಾಗೂ ಯಾವುದೇ ಭೂಮಿ ಇಲ್ಲದೆ ಇರುವುದರಿಂದ ಕೃಷಿಗೆ ಹೆಚ್ಚು ಪ್ರಾಧಾನ್ಯತೆ

ನೀಡುವುದಿಲ್ಲ. ಇವರಲ್ಲಿ ಕೆಲವರು ಸ್ವಂತ ಸ್ಥಿರಾಸ್ಥಿ (ಮನೆ ಮತ್ತು ಜಮೀನು) ಹೊಂದಿರುವವರು ಮಳೆಗಾಲದ ಹಲವು ದಿನಗಳು ಸ್ವಂತ ಸ್ಥಳದಲ್ಲಿದ್ದು ಭೂಮಿ ಉಳುಮೆ ಹಾಗೂ ಕೃಷಿ ಕೆಲಸಗಳನ್ನು ನಿರ್ವಹಿಸಿ ಮನೆಯಲ್ಲಿ ಯಾರಾದರೊಬ್ಬರನ್ನು ಕೃಷಿ ಕೆಲಸ ನಿರ್ವಹಿಸಲು ಬಿಟ್ಟು ಮತ್ತೆ ಭಿಕ್ಷಾಟನೆಗೆ ಹೊರಡುವ ಪದ್ಧತಿ ರೂಢಿಯಲ್ಲಿದೆ.

**ಪಶುಪಾಲನೆ :** ಇವರು ಅಲೆಮಾರಿಗಳಾಗಿರುವುದರಿಂದ ಪಶುಪಾಲನೆಗೆ ಅಷ್ಟು ಒತ್ತು ನೀಡುವುದಿಲ್ಲವಾದರೂ ಕೆಲವರು ಬೇಟೆ ನಾಯಿ, ಹಸು ಮುಂತಾದುವುಗಳನ್ನು ತಾವು ಹೋದ ಕಡೆಯಲ್ಲೆಲ್ಲಾ ಕರೆದುಕೊಂಡು ಹೋಗುತ್ತಾರೆ. ನಾಯಿಗಳು ಬೇಟೆಯಾಡುವುದಕ್ಕೆ ಹಾಗೂ ರಕ್ಷಣೆಗೆ ಉಪಯೋಗಿಸಿದರೆ ಹಸುವನ್ನು ಹಾಲು ಮೊಸರಿಗಾಗಿ ಸಾಕಿ ಪೋಷಿಸುತ್ತಾರೆ.

**ಆಹಾರ ಸಂಗ್ರಹಣೆ :** ಬುಡ್ಗ ಜಂಗಮರು ಊರೂರು ಅಲೆದಾಡುವವರಾಗಿರುವುದರಿಂದ ಆಹಾರ ಸಂಗ್ರಹಿಸಿಡುವುದು ಬಹಳ ಕಷ್ಟ, ಬುಡ್ಗಜಂಗಮರು ಸ್ನೇಹ ಪ್ರಿಯರು ಹಾಗೂ ವಿಶ್ವಾಸಪ್ರಿಯರು ಆಗಿರುವುದರಿಂದ ತಾವು ವಾಸಿಸಲು ಇಚ್ಛಿಸುವ ಗ್ರಾಮಗಳ ಜನರ ವಿಶ್ವಾಸವನ್ನು ಬಹಳ ಬೇಗನೆ ಗಳಿಸಿಕೊಳ್ಳುತ್ತಾರೆ. ಒಂದೇ ಊರಿನಲ್ಲಿ ಸುಮಾರು ಹತ್ತಾರು ದಿನಗಳು ವಾಸಿಸುವುದರಿದ ತಾವು ಬಿಡಾರ ಹೂಡಿದ ಗ್ರಾಮದ ಸುತ್ತಮುತ್ತಲ ಗ್ರಾಮಗಳೆಲ್ಲಾ ಸಹ ಭಿಕ್ಷಾಟನೆ, ಬುರ್ರಕಥೆ ಕೇಳಿಕೆ ಶಾಸ್ತ್ರ ಮುಂತಾದ ಸಾಂಸ್ಕೃತಿಕ ಕಲಾ ಪ್ರಕಾರಗಳಿಂದ ಜನರಿಗೆ ಮನರಂಜನೆಯನ್ನು ನೀಡುತ್ತಾರೆ. ವಿಶೇಷ ಪೂಜೆ, ಜಾತ್ರೆ, ತಿಥಿ ಮುಂತಾದ ಸಂದರ್ಭಗಳಲ್ಲಿ ಜನರ ಒತ್ತಾಯದ ಮೇರೆಗೆ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನೀಡಿ ಆ ಭಾಗದ ಜನರ ಪ್ರಶಂಸೆಗೆ ಪಾತ್ರರಾಗುತ್ತಾರೆ. ಇಂತಹ ಸಂದರ್ಭಗಳಲ್ಲಿ ತಾವು ಗಳಿಸಿದ ದವಸಧಾನ್ಯಗಳನ್ನು ಇಡಲು ಸ್ಥಳಾವಕಾಶ ಇಲ್ಲದೆ ಇರುವುದರಿಂದ ಹಾಗೂ ಸಾಗಾಣಿಕೆ ಮಾಡಲು ಕಷ್ಟಕರ ವಾಗಿರುವುದರಿಂದ ತಾವು ನೆಲಸಿರುವ ಗ್ರಾಮದ ನಂಬಿಕಸ್ಥರ ಮನೆಯಲ್ಲಿ ಇಡುತ್ತಾರೆ.

**ಆಹಾರ ಪದ್ಧತಿ :** ಬುಡ್ಗ ಜಂಗಮರು ಹೆಚ್ಚು ಮಾಂಸಹಾರಕ್ಕೆ ಅವಲಂಬನೆ ಆಗಿರುವರು. ಇವರು ಅಲೆಮಾರಿಯಾಗಿದ್ದರಿಂದ ಒಂದೆಡೆ ನೆಲೆನಿಂತು ವ್ಯವಸಾಯ ಮಾಡುವುದಾಗಲೀ ಕಾಳು, ಕಡಿ ಶೇಖರಣೆಗಳು ಇವರಲಿಲ್ಲಾ ಅದ್ದರಿಂದ ಬೇಟೆಯೇ ಇವರಿಗೆ ಮುಖ್ಯ ಕಸಬು. ಇವರು ಬೇಟೆಯಾಡಿದ ಮಾಂಸ ಆಹಾರ ಭಕ್ತಿಯಿಂದ ದೈವಕ್ಕೆ ಅರ್ಪಿಸಿದ ನಂತರ ಊಟ ಮಾಡುತ್ತಿದ್ದರು.

**ಅಡಿಗೆ ಮಾಡುವ ವಿಧಾನ :** ಅಡವಿಯಲ್ಲಿ ಸಿಗುವ ಪ್ರಾಣಿಗಳ ಮಾಂಸವನ್ನು ತೆಗೆದು, ಆಮೆ ಚಿಪ್ಪು ಅಥವಾ ಮಣ್ಣಿನ ಗಡಿಗೆ ಇದ್ದರೆ ಅದರಲ್ಲಿ ಮಾಂಸ ಹಾಕಿ ಹತ್ತಿರ ಇರುವ ಹುಣಸೆ ಮರದ ತಪ್ಪಲು ಚೆನ್ನಾಗಿ ಚಚ್ಚಿ ಅದರ ರಸವನ್ನು ಹಿಂಡಿ ಉಪ್ಪುಹಾಕಿ ದೂರದಲ್ಲಿ ಮೆಣಸಿನ ಗಿಡಗಳು ಇದ್ದರೆ ತರುವುದು ಇಲ್ಲದಿದ್ದರೆ ನಡೆಯುತ್ತದೆ.

ಚಿಕ್ಕ ಮೂರು ಕಲ್ಲುಗಳಿಂದ ಒಲೆಯನ್ನು ಮಾಡಿ ಅದರಲ್ಲಿ ಕಟ್ಟಿಗೆ ಇಟ್ಟು ಚಕಮುಖಿ ಯಿಂದ ಬೆಂಕಿ ಹೊತ್ತಿಸುವರು. ಚೆನ್ನಾಗಿ ಬೂದಿ ಕಲಿಸಿ ದೂದಿ ಬಿಸಿಲಿನಲ್ಲಿ ಒಣಗಿಸಿದರೆ ಎರಡು ಕಲ್ಲುಗಳನ್ನು (ಘರ್ಷಣೆ) ತೀಡಿದಾಗ (ಸ್ಪಾರ್ಕ್) ಬೆಂಕಿಯ ಕಿಡಿಗಳು ಬೂದಿಗೆ ಬಿದ್ದು ಬೆಂಕಿ ಹತ್ತಿಕೊಳ್ಳುವುದು ಈ ಬೆಂಕಿಯ ಮೇಲೆ ಮಾಂಸವನ್ನು ಕೊವ್ವು ಕುರಗಾಣಿಗುಡ್ಲು ದೇವರಿಗೆ ಸ್ವಲ್ಪ ತೆಗೆದು ಕೆಳಗೆ ಇಟ್ಟು ಊಟ ಮಾಡುವರು.

ಇವರು ಊಟಕ್ಕೆ ಆಹಾರದ ಕ್ರಮ: ೧. ಪ್ರಾಣಿಗಳು ೨. ಪಕ್ಷಿಗಳು ೩. ಪಲ್ಲೆ, ೪. ಮೀನು, ಮೊಟ್ಟೆ, ಚಿಗರು ಎಲೆಗಳು, ಹೂ, ಕಾಯಿಗಳು, ಹಣ್ಣು, ಕಾಳುಗಳು, ಗಡ್ಡೆಗಳು, ಬಳ್ಳಿಗಳು, ಕಾಷಾಯಗಳು.

**ಪ್ರಾಣಿ ಪಕ್ಷಿಗಳು :** ಅಳಿಲು, ಕೆಂಪು ಇಲಿ, ಅಡವಿಬೆಕ್ಕು, ಮುಂಗಿಸಿ, ನರಿ, ಅಡವಿ ಹಂದಿ, ಮುಳ್ಳಂದಿ, ಮೊಲ, ತೋಳ, ಚೀರನಾಯಿ, ಕೊಂಡ್ರಿಗಾಡು, ಜಿಂಕೆ, ಕೌಜ, ಗೊರವಂಕ, ಬಾತು, ಕೇಜ್ರ, ಲಾರ್ವಾ, ಏಡಿ, ಮೀನು, ಆಮೆ, ಉಡಾ ಅಲವ,

ಪಲ್ಲೆ, ಗಾನುಗಾಕು (ಅಣಬೆಪಲ್ಲೆ) ಪೊನ್ನಗಂಟಿಪಲ್ಲೆ, ತೋಟಪಲ್ಲೆ, ಮಾಡ್ಗಲಿಪಲ್ಲೆ, ಬಂಕಂತಿಪಲ್ಲೆ, ಬೊದ್ದಿಪಲ್ಲೆ, ಚಂಚಲಿಪಲ್ಲೆ, ಕೋಡಿಜೂಟ್ಟಪಲ್ಲೆ, ಅನ್ನೆಡಾಯಲು ಪಲ್ಲೆ ಪಲ್ಲೆರುಪಲ್ಲೆ, ಕಿಸರಸಾನಿಪಲ್ಲೆ.

**ಚಿಗುರು :** ಉಂಚಿಚಿಗುರು, ಮತ್ತುರಾಳ ಚಿಗುರು.

ಎಲೆಗಳು : ಲಿಂಗ ದೊಂಡೆ ಎಲೆ, ಕುಸುಮಾ ಎಲೆ, ಚಿಟ್ಟಿಗಾರೆಲೆ, ಬಿಳಿ ಗಲಿಜೇರು ಎಲೆ, ದೇವದಾರು ಎಲೆ, ಹುಣಸೆ ಎಲೆ ಹೆಚ್ಚಾಗಿ ತಿನ್ನುವರು (ಉಳಿಸಾರಿಗಾಗಿ) ಬಲಿತ ಎಲೆಗಳನ್ನು ಕೂದಿಸಿ ಸಾರಿಗೆ ಹಾಕುವರು.

**ಆಹಾರ ಹೂಗಳು :** ಹುಣಸೆ ಹೂ, ರಾಲ ಹೂ, ಕುಲಬಂದ ಹೂ, ಚಟ್ನಿ ಬಹಳ ಇಷ್ಟಾ.

**ಕಾಯಿಗಳು :** ಕೌಳಿಕಾಯಿ, ಬನ್ನಿಕಾಯಿ, ಸೀತಾಫಲಕಾಯಿ ಸುಟ್ಟುತಿನ್ನುವರು ಅಡವಿ ನಲ್ಲಿಕಾಯಿ.

**ಹಣ್ಣುಗಳು :** ಕಾರಿಹಣ್ಣು ಜಬ್‌ಹಣ್ಣು, ಬಾರೆ ಹಣ್ಣು ಕೌಳಿಹಣ್ಣು ಉಲಿಫಿಹಣ್ಣು ನಕ್ಕರ್ ಹಣ್ಣು ಸಾಗಜೆಮುಡು, ನವರತ್ನ, ಉಡುಹಣ್ಣು ನೀಸರ ಪುರವರಲೀಹಣ್ಣು ಇರಿಕಿಹಣ್ಣು, ಮುರ್ರಿ, ಪುಲಿಚೆರು ಬುಡ್ಡಗಾಸಿ ಬಾರೆಹಣ್ಣು ಸೀತಫಲ ಪೊಗಡ, ಹತ್ತಿಹಣ್ಣು.

**ಬೀಜದ ತಿರುಳು** ತಾಳೆ ತಿರಳು ಬಾದಾಮಿ, ಬಾರೆಹಣ್ಣು, ಬೀಜ ತಿರಳು, ಇರಿಕಿ, ಗಟ್ಟಿ

**ಗಡ್ಡೆಗಳು** ಕುಚ್ಚಿ ತಿನ್ನುವ ಗಡ್ಡೆಗಳು, ಚೆಂದು, ಗೆಣಸು ಭೂಚಕ್ರ ಕನ್ನಕುಮಾರಿ, ಪಿಲ್ಲಪಿಸಿರಿ, ಕೆಟಾಯಗಡ್ಡೆ ಸುಗಂಧಿ ಗಡ್ಡೆ ಚೆಲುಗಡ್ಡೆ ಹಾಲಿನ ಗಡ್ಡೆ ಭೂಚಕ್ರಾ ಗಡ್ಡೆ.

ಒಳ್ಳಿಗಾವು ಪುಲ್ಲಗೌಯಲು, ನಲ್ಲಡ ಸುಗಂಧಿ ಬೊಳ್ಳಿ, ಕುಂದನ ಗೊಮ್ಮಲು.

ಇವರಿಗೆ ಕಾಳು ಕಡಿ ಸಿಗುವದು ಕಷ್ಟ ಬೆಳಿಗ್ಗೆ ಎದ್ದು ಕಾಡು ಅಥವಾ ಊರುಗಳೊಳಗೆ ಹೋಗುವ ಇವರಿಗೆ ಬೆಳಿಗ್ಗೆ "ಊಟ" ಎಂಬುದು ಮರೀಚಿಕೆ, ಬೆಳಿಗ್ಗೆಯಿಂದ ಸಂಜೆವರೆಗೆ ಊರೂರು ಕಾಡು ಅಲೆದು ತಂದ ಆಹಾರ ಎಂದರೆ ಚಾಪೆ ಮಾರಿ ತಂದ ಕಾಳು ಜೋಳ, ಸಜ್ಜೆ, ನವಣೆ, ರಾಗಿ, ಇವುಗಳಿಂದ ಹೆಚ್ಚಾಗಿ ಅಂಬಲಿ ಮಾಡುವುದು ರೂಢಿ ಏಕೆಂದರೆ ಸ್ವಲ್ಪ ಅಂಬಲಿ ಯಿಂದ ಬಹಳ ಮಕ್ಕಳು ಕುಡಿಯಬಹುದು ಜೋಳದ ರೊಟ್ಟಿ ಮಾಡುತ್ತಾರೆ. ರಾಗಿ ಮುದ್ದೆ (ಸಂಕಟಿ) ಮಾಡುತ್ತಾರೆ. ಮಾಡುವರು. ಇದರ ಜೊತೆಯಲ್ಲಿ ಸಾರುಗಳು.

ವಿಶೇಷ ಆಹಾರ : ಬುಡ್ಗಜಂಗಮರ ಫಲಹಾರ (ಪಲಾವ) ಎಂದರೆ ಅನೇಕ ಬೇಟೆ

ಪ್ರಾಣಿಗಳ ಮಾಂಸದ ಅಡುಗೆ "ನಲ್ಲವಂಟ", ಪತ್ತೆಗಾರಸೊತ್ತು ಎಂದು ಕರೆಯುತ್ತಾರೆ. ಅದಕ್ಕೆ ಹೀಗೆ ಹೇಳುತ್ತಾರೆ. ಅಬ್ಬಾ ತಿನ್ನಲ್ಲರಾ ನಲ್ಲವಂಟ, ವಲಿಂಗಾಣಿ ಗುಡ್ಲು, ಮುರುಗುಂಜ ಗುಂಡಕಾಯಿ, ಕುರುಂಗಾಡುಕವ್ವು, ಎಂಟ್ಟು ತ್ಯಾಕ ತೋರಿಸಿಗ್ಯಾಡು ತೋಡ, ನರಿಸಿಗಾಡು ರಕ್ತಮು, ತೋಲ್ಯಾವಾರ್ಲು ಇವನ್ನಿಕಲ್ಪಿ ನಲ್ಲವಂಟ ಗಟ್ಟಿಗ ತೇಸ್ತಿ ದಿನಿತೋನಿ ಕೊಂಚಮು ಸೀದಾನಮ ನಚ್ಚುಂಟೆ ಆಪದು ನಾಕಿ ಸ್ವರ್ಗ ಸುಖಿಮುರಾ ಎಂದು ಬಹಳ ಪ್ರೀತಿಯಿಂದ ಅನಂದವಾಗಿ ಹೇಳುತ್ತಾರೆ. ಒಮ್ಮೊಮ್ಮೆ ಈ ರೀತಿ ಅಡುಗೆ ತಂದು ಕೊಟ್ಟವರನಿಗೆ ಹೆಣ್ಣು ಕೊಟ್ಟು ಮದುವೆ ಮಾಡಿದ ಪ್ರಸಂಗ ಉಂಟು. "ನಾದೆಗ್ಗರ ಸನ್ನ ಕಂಡೆ ವಲವುಂದಿ ಪೈಮಿದ ಕುಂಡ ಪೆಟ್ಟಿಯಾಟಕ ಪೆಯದಿ" ಎಂದರೆ ಆತನ ಹತ್ತಿರ ವಿರುವ ತಾನೆ ಸ್ವತಃ ಎಣೆದಿರುವ ಸಣ್ಣ ಕಣ್ಣಿನ ಮೀನಿನ ಬಲೆ ತೆಗೆದುಕೊಂಡು ಜೊತೆಗೆ ಹೋಗಬೇಕಾದರೆ ಮನೆಯಲ್ಲಿ ಬೆಂಕಿಮೇಲೆ ಗಡಿಗೆ ಇಟ್ಟು ಹೋಗಬೇಕೆಂದರ್ಥ. ಹಳ್ಳ ಮತ್ತು ನದಿಯಲ್ಲಿ ಈ ಬಲೆ ಬಿಟ್ಟರೆ ಬಲೆಯ ತುಂಬ ಚಿಕ್ಕಚಿಕ್ಕ ಮರಿಮೀನುಗಳು ಬೀಳುತ್ತವೆ. ಸ್ವಲ್ಪ ಸ್ವಚ್ಛಮಾಡಿ ಸ್ವಲ್ಪ ಹಸಿಕಾರ ಜಾಸ್ತಿ ಹಾಕಿ ಸಾರು ಮಡಿ ತಿಂದು ರಸಂ ಕುಡಿದರೆ ನೆಗಡಿ ತಲೆನೋವು ಕಿತ್ತುಕೊಂಡು ಹೋಗುತ್ತದೆ. ಗಂಡಕಾರಂ (ಕೈಕಾರ) ಚಿಂತಪಂಡುಕಾಯಿ (ಹುಣಸೆಹಣ್ಣು) ಕಾರ ಉಂಚಿಕಾಯಿ ಹಾಕಿ ಹಿಟ್ಟುಹಾಕಿ ಮಾಂಸಹಾಕಿ ಮಾಡುವ ಹಿಟ್ಟಿನ ಸಾರು ಇದಲ್ಲದೆ ಒಣಗಿದ ಮಾಂಸ ಮತ್ತು ಮೀನು ಶೇಖರಿಸಿ ತಿನ್ನುತ್ತಾರೆ. ಹಸಿಮಾಂಸಕ್ಕೆ ಹರಿಸಿನಪುಡಿ ಉಪ್ಪುಹಾಕಿ ನೀರು ಬಸಿದು ನಂತರ ಒಣಗಿಸುವರು ಜೇನು ತುಪ್ಪಗಳಶೇಖರಿಸಿ ಬಳಸುವರು. ಪ್ರಾಣಿಗಳ ಕೊಬ್ಬಶೇಖರಿಸುವರು ಉಡಾ, ಮೊಸಳೆ, ಊಟಮಾಡಲು ಎಲ್ಲಾ ಆಹಾರ ತಯಾರಿಸಿ ವೃತ್ತಾಕಾರ ಕುಳಿತು ಊಟಮಾಡುವರು ಮಣ್ಣಿನ ಚಿಪ್ಪೆಗಳು (ಮುಂತಲು) ಗಡಿಗೆಗಳು ತಂಗಿನ ಚಿಪ್ಪೆಯಿಂದ (ತೆಡ್ಲು) ಸಾರು ಎತ್ತಲು ಸೌಟು ತಯಾರಿಸಿಕೊಂಡಿರುತ್ತಾರೆ.



# ೮

# ಸಾಹಿತ್ಯ ಮತ್ತು ಭಾಷೆ

ಬುಡ್ಗ ಜಂಗಮರದು ಕಲಾ ಸಮುದಾಯ. ಇವರಲ್ಲಿ ಲಿಖಿತ ಚರಿತ್ರೆ ಕಾಣಸಿಗದು. ಆದರೆ, ಅಲಿಖಿತ ಪಾರಂಪರಿಕ ಸಾಹಿತ್ಯ ಅಪಾರವಿದೆ. ಇವರು ಕಥೆ, ಕಾವ್ಯ, ಶಾಸ್ತ್ರ, ಭಾಗೋತ ಗಳನ್ನು ಬುರ್ರಕತೆ ಮಾಧ್ಯಮದಿಂದ ಹೇಳುವುದು. ರಾಮಾಯಣ ಮಹಾಭಾರತದ ಮತ್ತು ದೇವಾನು ದೇವತೆಗಳ ಸಾಮಾಜಿಕ  ಘಟನೆಗಳನ್ನು ಕೇಳಿಕೆಗಳನ್ನು ವೇಷ ಧರಿಸಿ ತಮ್ಮದೇ ಆದ ಶೈಲಿಯಲ್ಲಿ ಮನರಂಜಿಸುವರು. ತನ್ನ ಸಮುದಾಯದ ಬಗ್ಗೆ ಸ್ಪಷ್ಟವಾದ ಸಾಹಿತ್ಯವನ್ನು ದಾಖಲಿಸದೆ ಅನ್ಯಸಮುದಾಯಕ್ಕಾಗಿ ಹೊಟ್ಟೆಪಾಡಿಗಾಗಿ ಕಲೆ ಪ್ರದರ್ಶನ ನೀಡಿ ಬದುಕಿದವರು. ಇವರಲ್ಲಿ ಅತ್ಯದ್ಭುತ ಜನಪದ ಸಾಹಿತ್ಯಯಿದೆ. ಆಯಾ ಪ್ರದೇಶದ ಇಡಿ ಚಿತ್ರಣವನ್ನು ಬುರುಡೆ ಯಲ್ಲಿಟ್ಟು ತಿರುಗುವ ಇವರ ತಲೆಗಳು ದೇಶದ ಜ್ಞಾನಪೀಠಗಳೆಂದರೆ ತಪ್ಪಾಗಲಾರದು ಒಂದೆ ಎರಡೆ ಹಲವಾರು ಬಗೆಯ ವಿಷಯಗಳು ಇವರ ಬುರುಡೆಯ ಗ್ರಂಥಾಲಯದಲ್ಲಿರುತ್ತವೆ.

ಅಭಿನಯದ ಕಲೆ, ಮೌಖಿಕ ಸಾಹಿತ್ಯ, ಸಂಗೀತ, ಶಾಸ್ತ್ರ ವೈದ್ಯಕೀಯ, ನೃತ್ಯ, ದೊಡ್ಡಾಟ, ಒಗಟು, ವಿನೋದ, ಪುರಾಣ, ಹೀಗೆ ಅನೇಕ ರೀತಿಯ ಸಾಹಿತ್ಯದ ಪ್ರಕಾರಗಳನ್ನು ಹೊಂದಿದ ಇವರು ತಮ್ಮಲ್ಲಿ ಇಷ್ಟೊಂದು ಸಾಹಿತ್ಯ ಇದೆ ಎನ್ನುವ ಭ್ರಮೆ ಇವರಿಗಿಲ್ಲ. ಐವತ್ತು ವರ್ಷಗಳ ಹಿಂದೆ ಇವರ ಕಲಾ ಸಾಹಿತ್ಯವನ್ನು ಇವರು ಹಾಕುವ ಕೇಳಲೆಂದು ಜನ ಕಿಕ್ಕಿರಿದು ಊರಿನ ಪ್ರಮುಖ ವ್ಯಕ್ತಿಯಿಂದ ನಾಡಿನ ಎಲ್ಲ ಮೇಧಾವಿಗಳು ವೇಷಗಾರಿಕೆಯನ್ನು ಆಶ್ಚರ್ಯ ಚಕಿತರಾಗಿ ಆಲಿಸಿರುವುದು ಇಡಿ ನಾಡಿಗೆ ಒಂದು ಇತಿಹಾಸವೇ ಆಗಿದೆ. ಊರಿನ ಮಧ್ಯ ಇವರು ಪ್ರದರ್ಶಿಸುವ ಕಲೆಗೆ ಪಂಡಿತ ಪಾಮರರು ಪ್ರಶ್ನೆಗಳನ್ನು ಹಾಕಿ ಉತ್ತರ ಪಡೆದು ಬಹುಮಾನ ಸನ್ಮಾನಗಳನ್ನು ಮಾಡಿದ್ದಾರೆ. ಇವರ ಮಲ್ಲಯುದ್ಧ ಕತ್ತಿ ವರಸೆಗಳಿಗೆ ಸಿನೆಮಾಗಳಿಗೆ ಹೋಲಿಕೆ ಕೊಟ್ಟು, ಇವರ ಮುಂದೆ ಸಿನೆಮಾ ಎಲ್ಲಿಯದು ಎಂದಿದ್ದಾರೆ. ಹಗಲಿನಲ್ಲಿಯೇ ಪುರುಷ ಸ್ತ್ರೀ ಪಾತ್ರಧರಿಸಿ ನರ್ತಿಸಿದ್ದರೆ ಊರಿನ ಯುವತಿಯರು ಇವರಿಗೆ ಮಾರುಹೋದ ಅನೇಕ ಪ್ರಸಂಗಗಳು ಕಾಣುತ್ತೇವೆ. ಶಾಸ್ತ್ರ, ಭವಿಷ್ಯವನ್ನು ಕೇಳಲು ತುಂಬ ಗೌರವದಿಂದ ಕಾಣುತ್ತಿದ್ದರು. ಸಾಧು ಸನ್ಯಾಸರಿಗೆ ಒಳ್ಳೆಯ ಸನ್ಮಾನ ಗೌರವವಿರುತ್ತಿತ್ತು.

ಆದರೆ ಇಂದು ಈ ಸಂಸ್ಕೃತಿಗೆ ಸಾಹಿತ್ಯದ ಬಂಢಾರ ಸಮಾಜದ ಅನೇಕ ಮಾಧ್ಯಮಗಳ ಪ್ರಭಾವದಿಂದ ಕಾಲಕ್ರಮೇಣ ನಶಿಸುತ್ತಿವೆ. ಮೌಖಿಕ ಬಂಢಾರ ಬತ್ತುತ್ತಿದೆ. ಇವರು ಸಾಂಸ್ಕೃತಿಕ ರಾಯಬಾರಿಗಳು ಹೌದು ಇವರು ಯಾವ ಪ್ರದೇಶದಲ್ಲಿ ವಾಸಿಸುತ್ತಾರೆಯೋ ಆಯಾ ಪ್ರದೇಶದ ಸಂಪೂರ್ಣ ಮಾಹಿತಿ ಇವರಲ್ಲಿ ಇರುತ್ತಿತ್ತು. ಎರಡು ಮೂರು ವರ್ಷಕ್ಕೊಮ್ಮೆ ಊರಿನಲ್ಲಿ ಕಲಾ ಪ್ರದರ್ಶನ ಮಾಡುವ ಇವರಿಗೆ ಊರಿನ ಗ್ರಾಮ ದೇವತೆ ಊರಿನ ಗಣ್ಯ ವ್ಯಕ್ತಿ, ವಿಶೇಷ ವ್ಯಕ್ತಿ ಮತ್ತು ಮಸೂದಿ, ಚಾವಡಿ, ಊರ ಅಗಸಿ ಇವುಗಳನ್ನು ಅಚ್ಚೊತ್ತಿದಂತೆ ಇವರ ಕಣ್ಣಿನ ಕ್ಯಾಮಾರದಲ್ಲಿರುತ್ತಿದ್ದವು. ಆ ಊರಿನ ರಸ್ತೆ ನದಿ, ಹಳ್ಳ, ಕೆರೆಬಾವಿ, ಗುಡ್ಡ-ಬೆಟ್ಟ, ಮರ ಇವುಗಳನ್ನು ಆತ್ಮೀಯತೆಯಿಂದ ಕಂಡ ಇವರು ಊರ ಪ್ರಮುಖರ ಮಾಹಿತಿ ಪಡೆದು ಆ ಊರ ಗೌಡ ಮತ್ತು ಸರ್‌ಪಂಚ ಇವರ ಬಂಧುತ್ವ ಎಲ್ಲಿಯವರೆಗೆ ಯಾವ-ಯಾವ ಊರಿಗೆ ಆಗಿದೆ ಯಾರು ಎಂತ ಎಂದೆಲ್ಲ ತಿಳಿದು ಹೇಳುವಂತೆ ಇವರು ಮೌಖಿಕ ದಾಖಲೆಯನಿಟ್ಟು ಕೊಂಡಿರುತ್ತಾರೆ.

ಬುರ್ರ ಕಥಾ ಸಾಹಿತ್ಯ

ಬುರ್ರಕತೆ ಕಲಾ ಪ್ರಕಾರದಲ್ಲೊಂದು. ಬುಡ್ಗ ಜಂಗಮರು ಇದರ ವಾರಸುದಾರರು. ತಾತ ಮುತ್ತಾತನಿಂದ ಬುರುಡೆಯಿಂದ ಸಾಂಪ್ರದಾಯಿಕವಾಗಿ ಬಂದಿರುವ ಒಟ್ಟು ಅರವತ್ತಕ್ಕೂ ಹೆಚ್ಚು ಮಹಾಕಾವ್ಯಗಳು, ಮೂವತ್ತಕ್ಕೂ ಹೆಚ್ಚು ಸಣ್ಣ ಕತೆಗಳು ಈ ಪ್ರಕಾರದಲ್ಲಿ ಸಿಗುತ್ತವೆ. ಅವುಗಳಲ್ಲಿ ಪ್ರಮುಖ ಕಾವ್ಯಗಳೆಂದರೆ ಬಾಲನಾಗಮ್ಮನ ಕಥೆ, ಲಕ್ಷ್ಮಮ್ಮನ ಕಥೆ, ಕೃಷ್ಣಗೋಲ್ಲರ, ಗಾಂಧಾರಿ ಕಥೆ, ಮಹಾರಾಜನ ಕಥೆ, ಅಮ್ಮರಾಜನ ಕಥೆ, ಕುಮಾರರಾಮನ ಕಥೆ, ಹರಿಶ್ಚಂದ್ರನ ಕಥೆ, ಪಿರೋಜಿನಾಯ್ಡು ಕಥೆ, ಸೋಮಾಜಿ ನಾಯ್ಡು ಕಥೆ, ಗೋಪಿರೆಡ್ಡಿ ಕಥೆ, ಪಾಂಡವರ ವನವಾಸದ ಕಥೆ, ಹರಿಶ್ಚಂದ್ರನ ಕಥೆ, ಶಾಗಮಲ್ಲಯ್ಯನ ಕಥೆ, ನಳಮಹಾರಾಜನ ಕಥೆ, ಕೈವಾರ ತಾತಯ್ಯನ ಕಥೆ, ಶಿವರೆಡ್ಡಿ ಕಥೆ, ಗಿಣಿರಾಮನ ಕಥೆ, ಅಲ್ಲಿರಾಣಿ ಕಥೆ, ಕೋಳಿಹಾಡು, ಪಾಪರಾಯನ ಕಥೆ, ಗಂಗೆ ಗೌರಿ ಕಥೆ, ಕಾಮಮ್ಮನ ಕಥೆ, ರೇಣುಕಾ ಯಲ್ಲಮ್ಮನ ಕಥೆ, ಶಾಶಿ ಚಿನ್ನಮ್ಮನ ಕಥೆ, ನೀಲಮ್ಮನ ಕಥೆ.

ಈ ಎಲ್ಲ ಮಹಾಕಾವ್ಯಗಳನ್ನು ಕಥಾರೂಪದಲ್ಲಿ ಮಹಿಳೆಯರು ಮತ್ತು ಪುರುಷರು ಕೂಡಿ ತಂಬೂರಿ ಗುಮ್ಮಟ (ಗುಮ್ಮಿಟಿ) ಗಗ್ಗರಿ, ಚಿಟಿಗೆ, ತಾಳ ಹಿಡಿದು ಊರಿನ ಪ್ರಮುಖ ರಸ್ತೆಯ ಮನೆಯ ಮುಂದೆ ನಿಂತು ಹಾಡುತ್ತ ತಂದಾನ ಕಥೆಗಳನ್ನು ಹೇಳುತ್ತ ನರ್ತಿಸಿ ಕಲಾ ಪ್ರದರ್ಶನ ಮಾಡುತ್ತಾರೆ. ಹಂಪಿ ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನದ ಡಾ ಕೆ ಎಂ ಮೇತ್ರಿ ಅವರು ಬುಡ್ಗಜಂಗಮರ ಸುಪ್ರಸಿದ್ಧ ಕಲಾವಿದೆ ನಾಡೋಜ ಬುರ್ರಕಥಾ ಈರಮ್ಮ ಹಾಡಿರುವ ಎಲ್ಲಮ್ಮನ ಕಥನಕಾವ್ಯ, ಕುಮಾರರಾಮ ಮತ್ತು ಕೃಷ್ಣಕೊಲ್ಲರ ಮಹಾಕಾವ್ಯಗಳನ್ನು ಮತ್ತು ಡಾ ಸ ಚಿ ರಮೇಶ ಅವರು ಸ್ಯಾಸಿ ಚಿನ್ನಮ್ಮನ ಕಾವ್ಯವನ್ನು ಸಂಪಾದಿಸಿದ್ದಾರೆ. ಸಮುದಾಯದ ಸಾಹಿತ್ಯವನ್ನು ಅತ್ಯಂತ ಉತ್ಕರ್ಷವಾಗಿದೆ ಎಂದು ದಾಖಲಿಸಿದ್ದಾರೆ.

ಇತ್ತೀಚಿಗೆ ದಾಖಲಿಸಿರುವ ಈ ಸಾಹಿತ್ಯ ಇಷ್ಟೊಂದು ಪ್ರಸಿದ್ಧವೆಂದಾದರೆ ಇವರಲ್ಲಿ ಎಂಥೆಂತ ಸಾಹಿತ್ಯ ಇರಬಹುದೆಂದು ಊಹಿಸಬಹುದಾಗಿದೆ. ಐವತ್ತು ವರ್ಷಗಳ ಹಿಂದೆ ಈ ಕಾವ್ಯ ಗಾಯನಗಳಿಗೆ ಮುಖ್ಯವಾಹಿನಿ ಅವಕಾಶ ಕೊಟ್ಟಿದ್ದರೆ ದೇಶದ ನಾಡಿನ ಖ್ಯಾತ ಸಾಹಿತಿಗಳಾದ ವಿಶ್ವಮಾನವ ಕುವೆಂಪು, ದರಾ ಬೇಂದ್ರೆಯವರ ಲಿಖಿತ ಸಾಹಿತ್ಯ ಜನಮನ್ನಣೆ ಗಳಿಸಿದಂತೆ ಬುರ‍್ರಕಥೆಯಂತಹ ಜನಪದ ಸಾಹಿತ್ಯ ಅಥವಾ ಕಲಾವಿದರನ್ನು ಸಮಾಜ ಸರಕಾರ ಮನ್ನಣೆ ನೀಡಲಿಲ್ಲ. ಇಂದು ಈ ಪ್ರಾಕಾರ ಮತ್ತು ಕಲಾವಿದರು ತಮ್ಮ ಅಂತಸ್ಥನ್ನು ಕಳೆದುಕೊಂಡು ಭಿಕ್ಷುಕರಂತೆ ಕಾಣುತ್ತಿದ್ದಾರೆ. ಕಲಾವಿದರು ಕಲಾ ಆಸಕ್ತಿಯನ್ನು ಕಳೆದುಕೊಂಡು ಬೇರೆ ಬೇರೆ ವೃತ್ತಿಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದಾರೆ. ಜನಪದ ಸಾಹಿತ್ಯ ಸಂಪತ್ತು ನಶಿಸುತ್ತಿದೆ.

ಹಿಂದೆ ಮತ್ತು ಹಲವೆಡೆ ಇಂದಿಗೂ ಹಲವರು ಎಡಗೈಯಲ್ಲಿ ಚಿಟಿಗೆ (ಅಂದೆಲು) ಗೆಜ್ಜೆಹಿಡುದು ಬಲಗೈಯಿಂದ ತಂಬೂರಿ ಮೀಟುತ್ತ, ಕಂಚಿನ ಕಂಠದಿಂದ ಹಾಡುತ್ತ ಹಾಡಿಗೆ ತಕ್ಕಹಾಗೆ ಗೆಜ್ಜೆ ಕಟ್ಟಿದ ಕಾಲಿನಿಂದ ಹೆಜ್ಜೆಕುಣಿತ ಹಾಕಿ ಕಥೆ, ಬಾಗೋತ ಹೇಳುತ್ತಿದ್ದರೆ, ಹಿಮ್ಮೇಳ ಗುಮ್ಮಟ (ಗುಮ್ಮಿಕಿ) ಗಗ್ಗರಿ ಮತ್ತು ತಾಳದ ಹಿಮ್ಮೇಳ ತಂದಾನ..... ತಾನನನ. ತಂದಾನ ಎನ್ನುತ್ತಾರೆ. ಮೂಲತಃ ಆಂಧ್ರದ ತೆಲಂಗಾಣ ಮತ್ತು ಇನ್ನಿತರ ಪ್ರದೇಶಗಳಲ್ಲಿ ಆಗಿನ ಸಂಸ್ಥಾನಿಕರನ್ನು ಈ ಸಮುದಾಯದ ಕಲಾವಿದರನ್ನು ಕರೆದು ವೀರನಾಯಕನ ಮತ್ತು ಪ್ರಮುಖ ವ್ಯಕ್ತಿಯ ಎಲ್ಲ ಪರಿಚಯ ಇತಿಹಾಸ ಹೇಳಿ ಕೊಟ್ಟಾಗ ತಮ್ಮ ಬುರುಡೆಯಲ್ಲಿ ದಾಖಲಾದ ಮಾಹಿತಿಯನ್ನು ಆ ಪ್ರದೇಶದ ಎಲ್ಲ ಭಾಗಗಳಲ್ಲಿ ಊರೂರು ತಿರುಗಿ ಕಥೆ ಹೇಳಿ ಕಲಾ ಪ್ರದರ್ಶನ ಮಾಡಿ ಪ್ರಚಾರ ಮಾಡಿದ್ದು ಉಂಟು ಈ ರೀತಿ ಅನ್ಯರಿಂದ ಸಂಗ್ರಹಿಸಿದ್ದ ಮತ್ತು ಕೆಲವರು ಹಣದಾಸೆಗಾಗಿ ಕಥೆಗಳನ್ನು ಕಟ್ಟಿ ಹಾಡಿದ್ದಾರೆ. ಹೀಗಾಗಿ ಸಾಕಷ್ಟು ಕಥೆಗಳು ಆ ಸಂದರ್ಭದಲ್ಲಿ ಹುಟ್ಟಿಕೊಂಡಿವೆ.

**ಕಥೆಗಳು :** ಬುಡ್ಗ ಜಂಗಾಲರು ಬುರ‍್ರಕಥೆ ಹಾಗೂ ಕೇಳಿಕೆ ನಾಟಕಗಳು ಕಥೆಗಳ ಮೇಲೆ ಆಧಾರವಾಗಿರುತ್ತದೆ. ಹಿರಿಯರಿಂದ ಕೇಳಲ್ಪಟ್ಟ ಕಥೆಗಳನ್ನು ಬುರ‍್ರಕಥಾ ಹಾಗೂ ನಾಟಕಗಳಲ್ಲಿ ಅಳವಡಿಸಿಕೊಳ್ಳುತ್ತಾನೆ. ಸಂದರ್ಭಕ್ಕನುಗುಣವಾಗಿ ಹಾಡುಗಳನ್ನು ಸೇರಿಸಲ್ಪಡುತ್ತದೆ. ಗುಂಪಿನ ಕೆಲವರು ಎಷ್ಟೆ ನಾಟಕ ಕಥೆ ಮುಂತಾದವುಗಳು ಪ್ರದರ್ಶಿಸಿತವಾಗುತ್ತಿದ್ದರೆ ವೀಕ್ಷಿಸಿ ಮರುದಿನ ಎಲ್ಲರೂ ಸೇರಿ ಅವರು ವೀಕ್ಷಿಸಿದ ಕಥೆ, ನಾಟಕ, ಹಾಡು ಮುಂತಾದಗಳನ್ನು ಅನುಕರಿಸಿ ಅಭ್ಯಾಸ ಮಾಡುತ್ತಾರೆ. ಕಥೆಗಳ ಪೈಕಿ ದುಃಖಾಂತದಲ್ಲಿ ಮುಕ್ತಾಯವಾಗುವ ನಲ್ಲತಾಂಗಾ ದೇವಿ, ದೇಶಿಂಗರಾಜು, ಬಾಲನಾಗಮ್ಮ, ಸಾಸುಲು ಚೆನ್ನಮ್ಮ, ಸತ್ಯ ಹರಿಶ್ಚಂದ್ರ ಕುರೂರು ಚಕ್ರವರ್ತಿ, ನಳಚಕ್ರವರ್ತಿ ಮುಂತಾದವು ಪ್ರಮುಖ. ಬಲ್ಲವರಿಂದ ಹೊಸ ಕಥೆಗಳನ್ನು ಕೇಳಿ ಅಂತಹ ಸನ್ನಿವೇಷಗಳನ್ನು ಅವರು ಅಭಿನಯಿಸುವ ನಾಟಕಗಳಲ್ಲಿ ಕಥೆಗಳಲ್ಲಿ ಸೇರ್ಪಡೆ ಮಾಡಿಕೊಳ್ಳುತ್ತಾರೆ. ಇಂತಹ ಪ್ರಸಂಗಕ್ಕಾಗಿ ಒಂದು ಕತೆಯ ವಿವರಣೆ ಸೂಕ್ತ ಎಂದು ನಮ್ಮ ಭಾವನೆ.

**ಯಾರ ದೇವರು ದೊಡ್ಡವರು :** ಒಬ್ಬ ಬುಡ್ಗಜಂಗಮ್ ಒಬ್ಬ ಚೆನ್ನದಾಸ ಇಬ್ಬರು ಸೇರಿ ಬೇಟೆಗೆ ಹೋದರು ಎಲ್ಲ ಬೇಟೆಯಾಡಿ ಒಂದು ಗಿಡದ ಕೆಳಗೆ ಕುಳಿತರು ಆಗ ಇಬ್ಬರಿಗೆ

ಬೇಸರ ಆಗಿ ಮಾತಿಗೆ ಮಾತು ಬೆಳೆಸಿದರು. ಅಲ್ಲಿ ದೂರದಲ್ಲಿ ಎರಡು ಸಣ್ಣ ಗಿಡಗಳಿದ್ದವು. ಒಂದು ಅವರೇಗಿಡ ಒಂದು ತಿಂಡಿಗಿಡ ಅದನು ಬುಡ್ಗಜಂಗಮ ನೋಡಿದ ಮನಸ್ಸಿನಲಿಯೇ ಆಲೋಚನೆಮಾಡಿ ಚೆನ್ನದಾಸನಿಗೆ ಬಾವಬಾವ ನಿಮ್‌ದೇವರು ಯಾರು ಎಂದು ಕೇಳಿದ ಆತ ತಟ್‌ಂತ ವಿಷ್ಣುಮೂರ್ತಿ ಎಂದ, ಆಗ ಈ ಬುಡ್ಗ ಜಂಗಮ್ ನೋಡಿ ಬಾವಾಬಾವಾ ನಿಮ್ ದೇವರು ವಿಷ್ಣು ಮೂರ್ತಿ ಯಂದೆಯಲ್ಲ ಅಮರೇಗಿಡದ ಕೆಳಗೆ ಬರಲಿಕ್ಕೆ ಹೇಳು. ಚನ್ನದಾಸನು ಸ್ವಾಮಿ ವಿಷ್ಣುಮೂರ್ತಿ ಈ ಗಿಡದ ಕೆಳಗೆ ಬಾ ಎಂದು ಕೂಗಿದ. ನಂತರ ಚನ್ನದಾಸನು ಬುಡ್ಗಜಂಗಮಗೆ ನಿನ್ನದೇವರು ಯಾರು ಎಂದು ಕೇಳಿದ ಆಗ ಬುಡ್ಗ ಜಂಗಮ್ ನನ್ನ ದೇವರು ಶಿವ ಎಂದು ಹೇಳಿದ. ಹಾಗಾದರೆ ನಿನ್ನ ದೇವರು ಶಿವ ಎಂದೆಯಲ್ಲ ನಿನು ಯಾವುದಾದರು ಗಿಡದ ಕೆಳಗೆ ಬರಲಿಕ್ಕೆ ಹೇಳು ಎಂದ. ಮೊದಲೇ ಯೊಚನೆ ಮಾಡಿದ ಬುಡ್ಗ ಜಂಗಮ್ ತಿಂಡಿಗಿಡವನ್ನು ತೊರಿಸಿದ್ದ ಆಗ ಚೆನ್ನದಾಸನು ನಿನ್ನ ಶಿವ ಆ ಗಿಡದ ಕೆಳಗೆ ಬರಲಿಕ್ಕೆ ಏಳು ಅಂದ ಆಗ ಅವನು ಕೈಮುಗಿದು ನನ್ನ ಶಿವ ಬಂದಿದ್ದಾನೆ ಎಂದು ತಿಳಿಸಿದ ನಂತರ ಚೆನ್ನದಾಸನಿಗೆ ಹೀಗೆಂದ ನೋಡು ನಿನ್ನದೇವರು ಅಮರೇ ಗಿಡದ ಮೇಲೆರಿದರೆ ನಾನು ನೋಡು ಏನು ಮಾಡಿತ್ತೇನೆ ಅಂತ ಹೇಳಿ ತಟ್ಟನೆ ದೊತರವನ್ನು ಬಿಚ್ಚಿ ಅಮರೆ ಗಿಡದ ಮೇಲೆ ಹೊರಳಾಡಿದ್ದ. ಪಕ್ಕದಲ್ಲಿರುವ ಚನ್ನದಾಸನು ನೋಡಿ ಸಿಟ್ಟಿಗೆ ಬಂದು ಅವನು ದೊತರ ಬಿಚ್ಚಿ ತಿಂಡಿ ಗಿಡದ ಮೇಲೆ ಉಳ್ಳಾಡಿದ ಆಗ ಜಂಗಮನು ನೋಡಿ ನಿನ್ನ ದೇವರು ಮೇಲೆ ೧೦ಸಲ ಹೊರಳಾಡಿ ಬಿಡುವೆ ಎಂದ ೧೦ಸಲ ಉಳ್ಳಾಡಿದ ಆಗ ಚೆನ್ನದಾಸನು ಅದಕ್ಕೆ ವಿರೋಧವಾಗಿ ೫೦ ಸಲ ತಿಂಡಿಗಿಡದ ಮೇಲೆ ಉಳ್ಳಾಡಿದ. ಆಗ ಜಂಗಮ ಮನಸ್ಸಿನಲ್ಲಿ ಯೋಚನೆ ಮಾಡಿದ ಈ ದಾಸನ ಕೆಲಸ ಆಯಿತೆಂದು ತಿಳಿದುಕೊಂಡ ನಂತರ ನೋಡು ನನ್ನ ದೇವರ ಮೇಲೆ ನಿನು ಉಳ್ಳಾಡಿದೆ ನಿನ್ನದೇವರ ಮೇಲೆ ನಾನು ಉಳ್ಳಾಡಿವೆ ಎಂದು ಹೇಳಿದರು ನಿನ್ನದೇವರು ಸತ್ಯವೇ ನನ್ನ ದೇವರು ಸತ್ಯವೇ ಎಂದು ಕುಳಿತರು ಸ್ವಲ್ಪ ಸಮಯದನಂತರ ಚೆನ್ನದಾಸನಿಗೆ ತಿಂಡಿಯಾಗಲು ಆರಂಭಿಸಿತು ಅದು ಹೆಚ್ಚುತ್ತಾ ಹೊಯಿತು. ಆಗ ಚನ್ನದಾಸನಿಗೆ ಅರಿವಾಯಿತು ಬುಡ್ಗಜಂಗಮರ ದೇವರು ಬಹಳ ಸತ್ಯವಂತರು ಎಂದು ಆಗ ಚೆನ್ನದಾಸ, ಬುಡ್ಗ ಜಂಮಗನಿಗೆ ಹೇಳಿದ "ನಿಮ್ಮದೇವರು ಬಹಳ ದೊಡ್ಡವನು".

**ಜಂಗಮ್ ಬಾವಾ-ದಾಸರಿ ಭಾವಾ ಕಥೆ**

ಬುಡ್ಗಜಂಗಮ್ ಮತ್ತು ದಾಸರಿ ಇಬ್ಬರು ಒಂದು ಊರು ಭಿಕ್ಷೆಬೇಡಿ ತಮ್ಮ ಮನೆಗೆ ಬರುವ ಮಧ್ಯದಲ್ಲಿ ಒಂದು ಬಾವಿ ಹತ್ತಿರ ಊಟಮಾಡುತ್ತಾ ಕುಳಿತರು. ಇಬ್ಬರ ಮಧ್ಯೆ ಅವರು ಇಡುವ ನಾಮದ ಬಗ್ಗೆ ಚರ್ಚಿಸುತ್ತಿದ್ದರು. ಏನೇ ಆದರೂ ತಮ್ಮ ನಾಮಗಳ ಹೊಂದಾಣಿಕೆ ಸಾಧ್ಯವಾಗಲಿಲ್ಲ. ಇಬ್ಬರೂ ಊಟದ ನಂತರ ಬೀಡಿಸೇದಿ ಮಾತುಕತೆಯಲ್ಲಿ ಮೈಮರೆತು ಬಿಸಾಕಿದ ಬೆಂಕಿಕಡ್ಡಿಯಿದ ಬೇಲಿಗೆ ಬೆಂಕಿ ಬಿತ್ತು. ಅದನ್ನು ನೋಡಿದ ಊರಿನ ಜನರು ಅವರಿಬ್ಬರನ್ನು ಹಿಡಿದುಕೊಂಡು ಬಾಯಿ ಕೈಕಾಲು ಕಟ್ಟಿಹಾಕಿ ಯಾರು ಬೆಂಕಿ ಹಚ್ಚಿದವರು ಎಂದು ಹೇಳಿದಾಗ. ಬುಡ್ಗಜಂಗಮರ ಬಾವಾ ಅಡ್ಡಲಾಗಿ ವಿಭೂತಿ ಧರಿಸುವುದರಿಂದ ಅಡ್ಡಲಾಗಿ

ತಲೆ ಅಲ್ಲಾಡಿಸಿದನು. ಆದರೆ ದಾಸರಬಾವ ಯೋಚನೆ ಮಾಡಿ ಅವನು ಲಂಬವಾಗಿ ನಾಮ ಧರಿಸುವುದರಿಂದ ಉದ್ದಾಗಿ ಗೋಣು ಅಲ್ಲಾಡಿಸುವನು. ಆಗ ಜನರೆಲ್ಲ ದಾಸರವನೇ ಬೆಂಕಿ ಹಚ್ಚಿರುವನೆಂದು ಅವನನ್ನು ಹಿಡಿದು ಹೊಡೆಯುವರು.

ಗಂಗಿಗೌರಿ

ಗಂಗಿಗೌರಿ ಸಂವಾದದ ಸಾಹಿತ್ಯ ಇವರಲ್ಲಿ ಅತ್ಯಂತ ಶ್ರೇಷ್ಠವಾದುದು. ಪ್ರತಿ ಭಾಗದ ಬುಡ್ಗಜಂಗಮ ಹೆಣ್ಣು ಮಕ್ಕಳು ಮನೆ ಮನೆಗೆ ಹೋಗಿ ಈ ಕೆಳಗಿನಂತೆ ಹಾಡು ಹಾಡಿ ಭಿಕ್ಷೆ ಎತ್ತುವರು.

ಜಂಗಮ ಕುಲ ಅಂತ ಕೂಡಿ ಬಂದೀಯ
ನನಪಾಲ ದೇವರಿಗೆ ಎದ್ದು ಬಂದೀಯ
ಶಿವನ ಪಾದಗಳನ್ನು ಮೆಚ್ಚಿ ಬಂದೀಯ
ಉಟ್ಟಿದ್ದ ಹುಲಿಚರ್ಮ ನೋಡಿ ಬಂದೀಯ
ಕೊಳ್ಳಾಗ ಲಿಂಗಪ್ಪ ಕಂಡು ಬಂದೀಯ
ನನಪಾಲ ಸ್ವಾಮಿಗೆ ಕೂಡುಕೊಂಡೀಯ
ಗುದ್ದೇನ ನನಸವತಿ ಹಲ್ಲು ಮುರಿಯಾನ
ಮೀನ ಮಾರುವಳೆಲ್ಲ ಹೆಚ್ಚಾದಳೇನೋ
ಆ ಮಾತಿಗೆ ಗಂಗಮ್ಮ ಏನಂಬುತಾಳೆ
ಕೇಳಿಯ ಗೌರಕ್ಕ ನನ್ನ ಮಾತನ್ನು
ಮೆಚ್ಚೀಯ ನಾನೇನು ಬಂದಿಲ್ಲವಕ್ಕ
ಕೂಡೀಯ ನಾನೇನು ಬಂದಿಲ್ಲವಕ್ಕ
ನಿನ್ನ ತಂದ ಶಿವ ನನ್ನ ತಂದಾನ
ಮದುವೆ ಮಾಡಿಕೊಂಡು ಬಂದೆನಕ್ಕಯ್ಯ
ನನ್ನ ಕೂಟ ನಿನಗೆ ವಾದಿ ಬ್ಯಾಡಕ್ಕ
ನನ್ನ ಕೂಟ ನಿನಗೆ ಜಗಳ ಬ್ಯಾಡಕ್ಕ
ಆ ಮಾತಿಗೆ ಗೌರಮ್ಮೆ ಸಿಟ್ಟು ಬಂತಮ್ಮ
ಕೇಳೆಯ ಶಿವರಾಯ ಗಂಗೆ ಮಾತೆಲ್ಲ
ನಿನ ಚಿಕ್ಕ ಹೆಂಡತಿ ಮಾತು ಕೇಳಯ್ಯ
ನಿನ ಚಿಕ್ಕ ಮುದ್ದು ಹೆಂಡತಿ ಮಾತು ನೋಡಯ್ಯ
ಇಬ್ಬರಲಿ ಒಬ್ಬಾಕೆ ಬಿಡಬಾರದೇನಯ್ಯ
ಗಂಗೆನನ್ನಾ ಬಿಡು ಬಾ ನನ್ನನ್ನ ಬಿಡು ಬಾ
ಆ ಮಾತಿಗಾ ಶಿವ ಏನಂಬುತಾನ
ಇಬ್ಬರಿಗೂ ಈ ವಾದ ನೀ ಹೇಳಲಾರೆ

ಇಬ್ಬರಲಿ ಒಬ್ಬಾಕೆ ಬಿಡಬಾರದೇನಯ್ಯ
ಆ ಮಾತಿಗಾ ಶಿವ ಏನೆಂಬುತಾನ
ಬೇಕಂತ ತಂದೇನು ನಾನ್ಹೆಂಗೆ ಬಿಡಲಿ
ಮಲ್ಲಿಹೂವ ತಂದಂಗೆ ನಾನು ತಂದೀನಿ
ಚೆಂಡ್ಹೂವ ದಾಸೆಂಗ ನಾನು ದಾಸೀನಿ
ಬೇಕಾದ್ರ ಗೌರವ್ವ ನೀನು ಬ್ಯಾರೆಹೋಗು
ಮೆಚ್ಚಿ ಬಂದವಳೆಲ್ಲ ಹೆಚ್ಚಾದಳೆನೋ
ನೀಚ ಗಂಗೆ ಇಲ್ಲಿ ಹೆಚ್ಚಾಯಿತೇನೋ
ಬಂಧು ಬಳಗವ ಬಿಟ್ಟು ಬಂದವಳೆ ಗಂಗಾ
ನನಪಾಲ ಶಿವಗೆ ಕೂಡಿಕೊಂಡೀಯ
ಮೀನ ಮಸಳಿ ಮಾರವಳೆ ಗಂಗಾ
ಸಂತ್ಯಾಗೆ ಕಾಯಿಪಲ್ಲೆ ಮಾರುವಳೆ ಗಂಗಾ
ನನಪಾಲ ಶಿವಗೆ ನೀನು ಬಂದೀಯ
ನೀವೆ ಇರಿ ಸ್ವಾಮಿ ಈ ಮಠದೊಳಗೆ
ಗೌರವ್ವನ ಮನಿಗೆ ಗೌರವ್ವ ಬಂದಾಳ
ಇಬ್ಬರು ಮಕ್ಕಳ ಹಿಂದೆ ಕರಕಂಡು
ಗಂಗೆಯ ಮನೆಗೆ ಗಂಗೆ ಬಂದಾಳ
ಕೈಲಾಸದ ಶಿವ ಕೈಲಾಸ ಕೋದ
ಗೌರವ್ವ ಮಠದಲ್ಲಿ ಏನು ಮಾಡ್ಯಾಳ
ಹೇಳಕ್ಕೆ ಹುಣ್ಣಿವಿ ಎಲ್ಲ ನೋವಿದಳ
ಕಡಗಕ್ಕೆ ಹುಣ್ಣಿವಿ ಕಡಿಯಾದಳವ್ವ
ಮುಟ್ಯಾದ ಸುದ್ದೆಲ್ಲ ಯಾರು ಕೇಲುವರು?
ತನ ತಂಗಿ ಗಂಗವ್ವ ಕಿಲಕಿಲ ನಕ್ಕೀತು
ಫಕ್ಕನ್ನೆ ನಗುತಾಳೆ ಪಾತಾಳ ಗಂಗಾ
ನಮ್ಮಕ್ಕನ ಪಂಥಾವ ಈಗ ನೋಡೇನು
ನಮ್ಮಕ್ಕನ ಶ್ಯಾಣತನ ಈಗ ನೋಡೇನು
ಮೀನು ಮಾರುವಳಂತ ಬೈದಾಳ ನನ್ನ
ನೀಚ ಗಂಗಿ ಅಂತ ಬೈದಾಳ ನನ್ನ
ನಮ್ಮಕ್ಕನ ಪಂತಾವ ನಾನು ನೋಡೇನು
ಮಳೆರಾಯ ಬಾರ ಮೇಲೆ ತಮ್ಮಯ್ಯ
ಅರ್ಜುನ ಬಾರೋ ನನಕಾಸತಮ್ಮ

ಮಳೆರಾಯ ಬಾರೋ ನನಕಾಸತಮ್ಮ
ಕರೆದಾಳೋ ಗಂಗವ್ವ ಬೇಡಿ ಹಾಕ್ಯಾಳೋ
ಮಳೆ ಬರದಂಗೆ ಮಾಯ ಮಾಡ್ಯಾಳೋ
ಗಾಳಿ ಬೀಸದಂಗೆ ಕಟ್ಟು ಕಟ್ಯಾಳೋ
ಎಲ್ಲೆಲ್ಲೂ ನೋಡಿದರೂ ಸ್ಯಾರೆ ನೀರಿಲ್ಲ
ರಾಜ್ಯದಾ ಒಳಗೇನ ನೀರು ಇಲಮ್ಮ
ಹರೆಯದಾಗ ಗೌರಮ್ಮ ಮನೆಯಲ್ಲಿ ನೋಡಿ
ಮಗನೋ ಈರಣ್ಣ ಬುದ್ಧಿವಂತಾನೆ
ಮನೆಯೊಳಗೆ ನೀರು ಕಾಸಿಕೊಡಪ್ಪ
ಹರೆಯದ ಈರಣ್ಣ ಮನೆಯಲ್ಲಿ ನೋಡಿ
ಮನೆಯಲ್ಲಿ ನೀರು ಸ್ಯಾರೆನು ಇಲ್ಲ
ಮನೆಯೊಳಗೆ ನೀರು ಈಸನ್ನ ಇಲ್ಲ
ಬೆಳ್ಳಿಯಾ ಕೊಡದಲ್ಲಿ ನೀರು ತಾ ಮಗನೆ
ಬೆಳ್ಳಿಯಾ ಕೊಡಗಳೇ ಒಣಗಿ ಹೋಗ್ಯಾವೆ
ಸೇದೋ ಬಾವಿಯಲಿ ಸೇದು ಈರಮ್ಣ
ಸೇದೋ ಬಾವಿಯಲಿ ಸ್ಯಾರೆ ನೀರಿಲ್ಲ
ತುಂಬೋ ಬಾವಿಯಲಿ ತುಂಬು ಈರಣ್ಣ
ತುಂಬೋ ಬಾವಿಯಲಿ ಬೊಗಸೆ ನೀರಿಲ್ಲ
ಎಲ್ಲಿ ನೋಡಿದರೂ ಸ್ಯಾರೆ ನೀರಿಲ್ಲ
ರಾಜ್ಯದೊಳಗೇ ನೀರು ಇಲ್ಲಮ್ಮ
ಆಗ ಗೌರಮ್ಮ ಏನನ್ನುತಾಳ
ಅಂಗೈಯೊಳಗೆ ಅಂಜನ ಹಾಕ್ಯಾಳ
ವಿಷ್ಣು ದೇವರ ಮಾಯ ಇದು ಅಲ್ಲ ಮಗನೆ
ಬ್ರಹ್ಮದೇವರ ಮಾಯ ಇದು ಅಲ್ಲ ಮಗನೆ
ನಿಮ್ಮಪ್ಪ ಶಿವರಾಯ ಮೋಸಮಾಡಿಲ್ಲ
ನನ ಸವತಿ ಗಂಗೀ ಮೋಸಮಾಡಾಳೆ
ನೀಚ ಗಂಗೀ ನೀರು ಬೇಕಿಲ್ಲ ಮಗನೆ
ಕವಚು ಗಂಗೀ ನೀರು ಬೇಕಿಲ್ಲ ಮಗನೆ
ನಮ್ಮಪ್ಪನಲ್ಲಿಗೆ ಹೋಗಿ ಬಾ ಮಗನೆ
ಹಾಲೇನು ಕಮ್ಮಿ ತುಪ್ಪೇನು ಕಮ್ಮಿ
ಈರಣ್ಣ, ಗಣೇಶ ಅಜ್ಜನಲ್ಲಿಗೆ ಬಂದಾರು

ಅಜ್ಜರೋ ಓ ಅಜ್ಜ ಗಣರಾಯ ನೀನು
ಶರಣು ಶರಣಜ್ಜ ಶರಣು ನಿನಗೆ
ನಿನ್ನ ದೊಡ್ಡ ಮಗಳು ವಾರಿಗಾಗ್ಯಾಳೆ
ಕಡಿಗಾಗಿ ಗೌರಮ್ಮ ಕಳ್ಳೆ ಕುಂತ್ಯಾಳೆ
ಮುಟ್ಟಾಗಿ ಗೌರಮ್ಮ ಮೂಲೆ ಕುಂತ್ಯಾಳೆ
ಸ್ಯಾರೆ ನೀರುಕೊಡು ಓ ಪುಣ್ಯವಜ್ಜ
ಬೊಗಸೆ ನೀರು ಕೊಡು ಓ ಪುಣ್ಯವಜ್ಜ
ನಿಮಗಿಲ್ಲದಾ ನೀರು ನಮಗೆಲ್ಲಿ ಬಂತು
ದೇಶಕ್ಕೆ ದೊಡ್ಡವಳು ಗಂಗೆ ದೊಡ್ಡವಳು
ಲೋಕಕ್ಕೆ ದೊಡ್ಡವಳು ಗಂಗೆ ದೊಡ್ಡವಳು
ಜಗಳದಲಿ ನಿಮ್ಮಮ್ಮ ಜಾಲಾಡಿಸೀರಿ
ಗಂಗಿಕೂಟ ನಾನು ವಾದಿ ಬ್ಯಾಡಂದಿ
ಗಂಗಿಕೂಟ ನಿಮ್ಮಮ್ಮ ಜಾಲಾಡಿಸೀರಿ
ದೇಶಕ್ಕೆ ದೊಡ್ಡವಳು ಗಂಗೆ ದೊಡ್ಡವಳು
ರಾಜ್ಯದಾ ಒಳಗೆ ನೀರು ಇಲ್ಲಪ್ಪ
ದನಕರ ಸಾಯ್ತಾವೆ ಮಗನೆ
ಹೆಣುಮಗಳು ಗೌರಮ್ಮ ಬೈದಾಡುತಾಳೆ
ಹಾಲಿನಾ ಕಾಪ್ನಿ ಹೇಳಿ ಕಟ್ಟ್ಯಾನು
ತುಪ್ಪದಾ ಕಾಪ್ನಿ ಹೇಳಿ ಕಟ್ಟ್ಯಾನು
ಹಾಲಿನಾ ಕಾಪ್ನಿ ತಗಂಡು ಬಂದ್ರು
ತಾಯಿ ಗೌರಮ್ಮ ಕಣ್ಣೀಲೆ ನೋಡಿ
ಹಾಲು ಬಂತಂತ ಖುಷಿ ಬಂತು
ಹಾಲುಕೊಟ ತಾಯಿ ಮೈ ತೊಳೆದುಕೊಂಡು
ತುಪ್ಪಕೊಟ ತಾಯಿ ಶಿವಪೂಜೆ ಮಾಡಿ
ಇರುವಿ ನೊಣ ಮುಸುರಿಕುಂತ್ಯಾವೋ
ಮಗನೋ ಈರಣ್ಣ ಬುದ್ಧಿವಂತಾನೆ
ಮದ್ದನ್ನು ಕೊಡಪ್ಪ ಮಾಯವಾಗಾನ
ವಿಷವನ್ನು ಕೊಡಪ್ಪ ಕುಡ್ದು ಸಾಯಾನ
ಮಗನು ಆ ತಾಯಿಗೆ ಎಷ್ಟು ಬುದ್ಧಿ ಹೇಳುವನು
ಮುಂದಕೂ ನರಲೋಕ ಹಾಳುಗುತ್ತೈತ
ಚಿಗಮ್ಮನ ಕೂಟೆ ವಾದಿ ಬ್ಯಾಡಮ್ಮ

ಚಿಗಮ್ಮನ ಕೂಟೆ ಜಗಳ ಬ್ಯಾಡಮ್ಮ
ಹೋಗಾನ ನಡಿಯಮ್ಮ ಚಿಗಮ್ಮನ ಮನಿಗೆ
ಬಂಗಾರು ಪಲ್ಲಕ್ಕಿಮ್ಯಾಲೆ ಕುತಕಂಡು
ಮಾಳಿಗೆ ಹತ್ತಿ ನೋಡವ್ವ ಮೇಲೆ ಗಂಗವ್ವ
ಯಾರಾಜು ಮದುವೆವ್ವ ಇಷ್ಟು ಸುಂಗಾರ
ಯಾರಾಜು ಮದುವಿಗಲ್ಲ ಇಷ್ಟು ಸುಂಗಾರ
ನಮ್ಮಕ್ಕ ಬರುತಾಳೆ ನನ ಮನಿಗೆ
ನಮ್ಮಕ್ಕನ ಪಂಥಾವ ನಾನು ನೋಡ್ಯಾನ
ಬಾಗಿಲೇ ಸಾರಿಸ್ಯಾಳೆ ಬಣ್ಣ ಕೊಟ್ಟ್ಯಾಳ
ಅಂಗಳ ಸಾರಿಸ್ಯಾಳ ಮುಗ್ಗು ಹೊಯ್ಯಾಳ
ಸಣ್ಣಸಣ್ಣ ಮೀನೆಲ್ಲ ರಾಸಿಗಾಕ್ಯಾಳ
ದೊಡ್ಡದೊಡ್ಡ ಮೀನೆಲ್ಲ ಬಾಗಿಲಿಗೆ ಕಟ್ಟ್ಯಾಳ
ಹೆಂಡದಾ ಶೀಸೆಗಳ ಸಾಲಿಗಿಟ್ಟ್ಯಾಳು
ಅಕ್ಕ ಬಡಬಡಾ ಬಂದು ಕಿವಿ ಮುಚ್ಯ್ಕಾಳೆ
ಶಿವಶಿವ ಅಂತ ಮೂಗು ಮುಚ್ಯ್ಕಾಳ
ಮಗನೋ ಈರಣ್ಣ ಬುದ್ಧಿವಂತಾನ
ಈ ನೀಸುವಳಿಗೆ ಎಂಗೆ ಹೋಗಲೋ
ಆವಾಗ ಮಗ ಏನು ಹೇಳುತಾನ
ತಾಯಿ ಗೌರಮ್ಮ ನನಮಾತು ಕೇಳು
ಮೂಗು ಮುಚ್ಚಿದರೆ ಆಕಿ ತಪ್ಪು ಇಡುತಾಳೆ
ಬಾಯಿ ಮುಚ್ಚಿದರೆ ಆಕಿ ತಪ್ಪು ಇಡುತಾಳೆ
ಶರಣು ಮಾಡಮ್ಮ ಚಿಗಮ್ಮನಿಗೆ ಹೋಗಿ
ಎರಡು ಕೈ ಜೋಡಿಸಿಡು ತಾಯಿ
ಶರಣಮ್ಮ ಓ ಗಂಗ ನಿನಗೆ ಶರಣಮ್ಮ
ಆ ಮಾತಿಗೆ ಗಂಗ ಏನಂಬುತಾಳೆ
ನಿನ ಶರಣು ನನ ಶರಣು ಶಿವಗೆ ಇರಲಕ್ಕ
ಸ್ಯಾರೆ ನೀರುಕೊಡು ಓ ಪುಣ್ಯಗಂಗ
ನೀಚ ಗಂಗಿಗೆ ನೀರೇನು ಗೊತ್ತು
ಏನು ಮಾಡಿಕೊಂಡೆ ಈಗಲೇ ಬಂದೆ
ನಿನಗಿಲ್ಲದಾ ನೀರು ನನಗೆಲ್ಲಿ ಬಂತು
ಬಂಗಾರು ಪಲ್ಲಕ್ಕಿ ಕೊಟ್ಟೇನು ಸ್ಯಾರೆ ನೀರುಕೊಡು

ನಿನ್ನ ಪಲ್ಲಕ್ಕಿಯಂತ ತೊಟ್ಲು ಐದಾವೆ ನನ್ನ ಮನಿಯಾಗೆ
ಪೀತಾರಂಬರ ಸೀರೆ ಕೊಟ್ಟೇನು ಸ್ವಾರೆ ನೀರು ಕೊಡು ಗಂಗ
ನೀನು ಕೊಡುವಂತ ಸೀರೆ ನನಗೆ ಮಸ್ತೈದಾವೆ ಅಕ್ಕ
ಮಕ್ಕಳಾ ಕೊಟ್ಟೇನು ಸ್ವಾರೆ ನೀರುಕೊಡು ಓ ಪುಣ್ಯಗಂಗ
ನಿಮಕ್ಕಳು ನನಗು ಮಕ್ಕಳೆ ಅಕ್ಕ
ಮಗನೋ ಈರಣ್ಣ ಬುದ್ಧಿವಂತಾನೆ
ಏನು ಕೊಟ್ರೂ ಗಂಗವ್ವ ಒಪ್ಪುವಲ್ಲದಲ್ಲ
ಇನ್ನೇನು ಕೊಡಲೋ ಮಗನೆ ಈರಣ್ಣ
ನಿನಪಾಲ ದೇವರಿಗೆ ಆಕಿ ಬಂದಾಳ
ಗಂಡನ್ನ ಕೊಟ್ಟೇನು ಒಪ್ಪಿಕೋಳಮ್ಮ
ಗಂಡನ್ನು ಕೊಟ್ಟೇನು ಮದುವೆ ಮಾಡೇನು
ಸ್ವಾರೆ ನೀರುಕೊಡು ಓ ಪುಣ್ಯಗಂಗ
ಫಕ್ಕನೆ ನಗುತಾಳೆ ಪಾತಾಳ ಗಂಗಾ
ಸಿಕ್ಕದೇನಮ್ಮ ನನ್ನ ಕೈಯ್ಯಲ್ಲಿ
ಆಡಿದ್ದ ಮಾತುಗಳು ತಪ್ಪು ಬ್ಯಾಡಕ್ಕ
ಹಾಲುಕೂಟ ಭಾಷೆ ತಗುದಾಳು
ತುಪ್ಪಕೂಟ ಭಾಷೆ ತಗುದಾಳು
ಆಕಾಶಕೆ ಹಂದರವ ಹಾಕ್ಯಾಳ
ಶಿವನ ಕರೆದು ಗೌರಮ್ಮ ಮದುವೆ ಮಾಡ್ಯಾಳ
ಮದುವೆ ಜರುಗಿದಮ್ಯಾಲೆ ನೀರು ಕೊಟ್ಟಾಳೋ ಗಂಗಮ್ಮ
ಲೋಕಕ್ಕೆ ನೀರು ಕೊಟ್ಟಾಳೋ ಈ ಪುಣ್ಯಗಂಗ.

**ಕೊಂಡಮಾಮಾ ವೇಷದ ಹಾಡು**

ರಾಮಶಾಸ್ತ್ರವ ಹೇಳುವೆ ಕೇಳು,
ರಾಮನಾಥುಡಾ ಗುರುಕೊಂಡನು,
ಮಸ್ತಾನ್ನ ಜಗಂಡಿನಾಥ ರಾರಾಜೀವಿ ಕೊಂಡರಾಮುಡು,
ಅಡವಿರಾಮುಡು ಹನುಮಂತನ್ನ ರಾ....ರಾ..ಜೀವಿ
ಉಕ್ಕು ತಂತಿಲೇ ಉರುಕುತ್ತಾ ರಾ...ರಾ.
ಗಾಲಿ ಬುರ್ರಲು ತೇಲುತ ರಾ...ರಾ...
ಮೈಸೂರು ಚಾಮುಂಡಿಮ್ಮ,
ಕೊಳ್ಳೆಗಾಲುಲೋ ಮಾರಮ್ಮ,
ಬೆಂಗಳೂರುಲೋ ಅಣ್ಣಮ್ಮ ಈ ತಿಂತಿಯೇ ತೇಲುತರಾಂಡಿ..

ಉಡುಪಿ ಕೃಷ್ಣಡಾ ತಿರುಪತಿ ವೆಂಕಟೇಶ್ವರಡಾ,
ಧರ್ಮಸ್ಥಳಮು ಮಂಜುನಾಥುಡಾ
ಈ ತಂತಿ ಬುರ್ರಲೋ ಫಲಕಂಡಿ ಹೇಳಿದಮಾತು
ಅರ್ಥ ಮಾಡಿಕೊ ಅರ್ಥವಾಗರಿದ್ದರೆ ತಿರುಗಿಸಿಕೆಳು
ಹುಟ್ಟಿದ ಯೋಗ ಬಾರಿ ಬೆಟ್ಟು ಬೆಳದಿದ ಯೋಗ
ಬಾರಿ ಪಾಪ್ಪು ಮಕ್ಕಳಲ್ಲಿ ಸುಖವೇ ಇಲ್ಲ.
ಹೆಂಡತಿಯಲ್ಲಿ ಭರಕಿತ್ತಿಲ್ಲ. ಜಗಂಡಿನಾಥ ರಾ... ರಾ...
ಜೀವಿ ಕೊಂಡರಾಮುಡು ಅಡವಿರಾಮುಡು ಹನುಮಂತಣ್ಣ ರಾ.....ರಾ... ಜೀವಿ.

**ಜಾಗೃತಿ ಹಾಡು**

ಮೇಲುಕೋ ಸಿರ ಪನ್ನ ಮೇಲುಕೋ
ಮೇಲುಕೋ ಲೇಖ ಪೊತೆ ಲೋಕಮಂತಾ ಹೀನಮೆರಾ
ಮೇಲುಕೋ ಸಿರಪನ್ನ ||ಮೇಲುಕೋ||
ಪಿಂಕೆಲುಕು ಸದುವ್ರಲೇಕ
ಚೊಲಲೇಸಿ ಮತ್ತೆಲೋನಿಕಿ ನಾಪು ತಾಂ
ಪೆದ್ದಯ್ಯ ತರ್ವಾತಾ ಸಿದಾನಂ ಮೆಸಿಕಿಚ್ಚಿ
ಮತ್ತ್ಯಾ ಮತ್ತ್ಯಾ ತಿರಿಗೇಚ್ಚಿ ಮಟ್ಟಿ ಲೋಕಿ ನಿಕ್ಕೂತಾಂ
ಇಂತೆರಾಮನ ಬತುಕುಲು ಅಂದುಕನಿ ||ಮೇಲುಕೋ||
ಉಂಡೇಕಿ ಮತ್ತೇಲೇದು ಊರಾ ಬೈಟ ಜಾಗಲೇದು
ಮೆಸಿಕೇಕಿ ಜಂತುವು ಲೇದು ಪಾಣಿಶ್ಯಾಲು
ವಿಷಮಾಯ ವಲುತುಲು ನಿಲ್ಚಿಪಾಯ
ಅಂದುಕೊನಿ ಮೇಲುಕೋಸಿರಪನ್ನೆ ||ಮೇಲುಕೋ||

ಮತ್ತೆಲು ಉನ್ನ ವರ್ನಗಾಳು ಕುಚ್ಚಾಗಳ್ಳು
ಮಿಡಸಗಾಳ್ಳು ಅಂಟಾರು, ಗರಗಾಂ ಲೋ ನಾಪು ತಾರು ಅಂದುಕನಿ ||ಮೇಲುಕೋ||

**ವಂಕರ ಗುಡಿಸೆ ಹಾಡು**

ಬುಡ್ಗ ಜಂಗಮರು ವಾಸಮಾಡುವ ಮತ್ತು ತಾವೇ ನಿರ್ಮಿಸಿಕೊಂಡಿರುವ ವಂಕರ ಗುಡಿಸೆ ಬಗ್ಗೆ ಈ ರೀತಿಹಾಡುವರು.

ಮೂಡುವಂಕರ್ಲ ಗುಡಿಸ್ಯರಾ - ಮನದಿ
ಮುಚಟ್ಯೆನ ಚಾಪವೇಸಿ
ಮೂಡು ವಂಕರ್ಲ ಪಾತಿ ಕುಂಟಿನ ಶಿವಲು ಚೆಚ್ಚಿ
ವೆಂಟ್ರುಕ ತಾಳನ್ನು ಚುಟ್ಟಿ- ಬಲಗೊಲ್ಲು ಬಂದಿಂಚಿ

ಯನಕ ಮಾಡು ಚಾಪವೇಸಿ- ಪಕಬಾಗಲು ರಿಕ್ಕಗಟ್ಟಿ
ಆಸ್ತರಲು ಮೀದ ವೇಸ್ತೆ- ಅದೇ ನಾ ಗುಡಿಸರಾ ||ಮೂಡು||
ಮುಂದುನಿಂಚಿ ಸೂಸ್ತೆನೇಮು
ಚೆಂದಮಾಮ ಸಗಮು ರೂಪು
ವೆನಕನಿಂಚಿ ಸೂಸ್ತೆನೇಮು- ಕನಕಗಿರಿಅನಿಪಿಂಚುನಿದಿ
ಮೂಡುಕಾಲಾಲ- ನೀಡನಿಚಿ- ಅಗೂಡು
ಕಾವಿಡಿ ದಬ್ಬ ಉಂಟೆ ಚಾಲು- ಕದುಲು ತಂದಿ ಊರು ಊರು ||ಮೂಡು||

**ಆಸ್ಕೋಟಿಕಿ ಎಂತಬಾದರ**

ಬುಡ್ಗ ಜಂಗಮರು ತಮಗೆ ಬೇಟೆ ಪ್ರಾಣಿಗಳು ಸಿಗದಾಗ ಈ ರೀತಿ ವರ್ಣನೆ ಮಾಡಿ ಹೇಳುವರು.

ಅಸ್ಕೋಟಿಕಿ ಎಂತಬಾದರ- ಓ ಕಾರಿಗ
ಸಿಕಾರಿ ಅಂಟೆ ಸಿಥಲೇದುರ- ಬಿಕಾರಿಗ
ಕಾಲ್ವಲೋನಿ ಚಿನ್ನಕಾಜಂ ಮಡುಗುಲೋನಿ- ಪೆದ್ದಕಾಜಂ
ಗವಿಲೋನಿ ಯಂಡ್ರಕಾಯಿ ತೋವಿ ತೋವಿ- ಪಂಡೆತೆಗೂಡು
ತುಕ್ಕತೀಸಿ ಊಡ್ರಗೊಟೆ- ಲೂಚಿತ್ತೀಸಿ ಲಡಿಲೇಶಿ

ಯಲ್ಕ ಪೆಂಟ ತೊವುಕುನ ಎಮಿಚಾಲದಯ ನೀಕು
ಚೆಟ್ಟುಮೀದ ತೊಡಿಸಿಗಾಡು- ಪುಟ್ಟಲೋನಿ ವಲಿಂಗಾಡು
ಗವಿಲೋನಿ ಯನ್‌ಟುವ- ಪಟ್ಟುಕುನ್ನು ಸಾಲದಯ ||ಅ||

ಕೊಂಡಲೇನಿ ಕೋಂಡ್ರಗಾಡು- ಬಾವಿ ಲೋನಿ ಕುರಿಂಗಾಡು
ನರಿಸಿಗಾಡು ಭೂತಕಾಶಿಕಂ- ನಾನಾಜಂತುವಲು ತಿನಿ
ನೀಳಲೊನಿ ಬುಡಮುಕಾಯಿ - ಪೊದಲೋನಿಲಾವಂಕ
ತೊರಲೋನಿ ಗೂರವಂಕ- ಪುಲೆ ಪಿವ ನೀದಿಂಕ ||ಅ||

ಮತ್ತೆ ಕಾಶಿಕಂ ಲೆಕುನ್ನ- ಕೊಂಡ್ರಿಗಾಡುಚಿಕ್ಕಕುನ್ನ
ಮಂಡಿಗಾಡು ಮಿಸ್ಸಾಲು- ಉಂಡನೆ ಉಟ್ಟಾಯಿ ನಿಕು
ಕೊಂಡ ಗವಿ ನಿಕು ಬಂಗ್ಲ- ಊರುಲೆ ನಿಕುನ್ನ ಸಿರುಲು
ವಲಲೇ ನಿ ಸಂಪದಲು- ವದಲವುಗಾ ನಿ ವೇಟಲು

**ಹಚ್ಚೆ ಹಾಡು**

ಪಚ್ಚೆ ಬೊಟ್ಟು ಪೊಡಿಪಿಂಚು ಬಾವ- ಪಾವಲ ಅದ್ದಿಬಿ ಪೊಡಿಪಿಂಚು ಬಾವ
ಕೊಂಡಮೀದ ಗುಡಿಯಂಟ- ಗುಡಿಲೋ ದೇವುಡಂಟ

ಸಾಲೋರಿ ಯಂಕನ್ನ- ಸಾದುಬೊಟ್ಟು ಪೆಟುಕೋನಿ
ಕೊವು ಚೊರಿಯಿಂಟೆನಕ- ಕೊಕ್ಕೆನಕಟುಕೋನಿ
ಕೋಕಬಾಗುಂಡಲಾ ಬಾವ- ಪಚ್ಚ ಮೊಟ್ಟು ಪೊಡಿಪಿಂಚು

ಹಿನಾಯ ಬತುಕು
ಜೆಗಿರಾ ಸಿರಪನ್ನ- ಜಗಂ ಮಾರು ತುಂದಿ
ಪೊಟ್ಟ ಕೊರುಕು- ಕೋಟಿ ವಿದ್ಯಾಲು
ಅಪಂತು- ಈಪಂತು ಅನುಕೋನಿ
ಸಿರಪಗಾಳ್ಳ ಅಸ್ತನಿಕಿ ಮಸಿಕೋಟ್ಲ ಅಸ್ತಾನಿಕಿ
ಕಂಚಾಂಅಂಡಿ ಮತ್ತೆ ಲೋಕಿ ನಾಪುತುಂ
ಪಾಸಿಂದಿ ಪೂಸೀಂದಿ ಮೆಸ್ಕಿ ಸಿದನಂ ಮೆಸ್ಕತಾಂ
ಯಂತ ಹೀನಮು ಬತುಕಲಾಯರಾ- (ಜೇಗಿರಾ)

ಬುಡ್ಗ ಜಂಗಮ್ ಸಮುದಾಯದಲ್ಲಿ ಅನೇಕ ಕಲಾವಿದರು ಕವಿಗಳು ಇದ್ದರು. ಅವರು ಬೆಳಕಿಗೆ ಬಾರದೆ ಇಡೀ ಜೀವನ ಅಂದಕಾರದಲ್ಲಿ ಕಳೆದು ಹೊಯಿತು ಇವರ ಸಾಹಿತ್ಯ ಜಾನಪದ ರೀತಿಯಲ್ಲಿ ಸಾಮಾಜಿಕ ಪೌರಾಣಿಕ ಮತ್ತು ಧಾರ್ಮಿಕ ಗ್ರಂಥಗಳನ್ನು ಚಾರಿತ್ರಿಕ ವೀರರ ಕಥೆಗಳ ಪಾರಂಪರಿಕವಾಗಿ ಬಂದಿವೆ.

ಇವರಲ್ಲಿ ನಾಡೋಜ ಪುರಸ್ಕೃತರಾದ ದರೋಜಿ ಈರಮ್ಮನವರ ಇತ್ತೀಚಿನ ದಿನಗಳಲ್ಲಿ ಕನ್ನಡ ವಿಶ್ವವಿದ್ಯಾಲಯ ಅವರ ಕಾವ್ಯಗಳನ್ನು ಪ್ರಕಟಿಸಿದ್ದಾರೆ. ಆದರೆ ಇಂತಹ ಮಹನ್ ಕಲಾವಿದರು ಸಾವಿರಾರು ವರ್ಷಗಳಿಂದ ಈ ಸಮುದಾಯದಲ್ಲಿ ಪಳಿಯುಳಿಕೆಯಾಗಿ ಬಿಟ್ಟಿದ್ದಾರೆ. ಬುಡ್ಗ ಜಂಗಮ ಸಂಘದ ವಿ. ಶ್ರೀನಿವಾಸ ಬಳ್ಳಾರಿ ಇವರು ಸಾಹಿತಿ ಅಲ್ಲದ ವ್ಯಕ್ತಿಯಾಗಿದ್ದರು, ಸಮುದಾಯಕ್ಕಾಗಿ ಇಲ್ಲಿ ಕೆಲವು ಕವಿತೆಗಳನ್ನು ಭಾಷಾಂತರಗೊಳಿಸಿ ಮತ್ತು ಸ್ವರಚಿತ ಕವನಗಳನ್ನು ರಚಿಸಿಕೊಟ್ಟಿದ್ದಾರೆ.

ಆಂಧ್ರಪ್ರದೇಶದ ಡೊಕ್ಕ ಪಟ್ಟಾಬಿ ರಾಮುಲು ಇವರು ೧೮೭೦ರಲ್ಲಿ ಜೀವಿಸಿದ್ದ ಇವರು ಸಾಮುದ್ರಿಕ ಜೊತಿಷ್ಯ ಕಲೆಗಳು ಪರಿಣಿತರು. ಇವರು ಅನೇಕ ಕವಿಗಳನ್ನು ಬರೆದಿರುವರೆಂದು ಮೆಹಬೂಮಿ ನಗರ ಜಿಲ್ಲೆಯ ವಸಂತಪುರ ಎಂಬ ಗ್ರಾಮದಲ್ಲಿ ಈಗಲು ಇವರ ಸಾಮಾದಿ ಇದೆ ಎಂದು ತಿಳಿದು ಬಂದಿದೆ.

ಇವರು ಆಮಪ ವಾಕುಲ ಎಂಬ ಗ್ರಾಮದಲ್ಲಿ ಶೇಷಿರೆಡ್ಡಿ ಎಂಬ ಜೇಮಿನ್‌ದಾರನಿಗೆ ಜೋತಿಷ್ಯ ಹೇಳಿದಾಗ ಆ ರೆಡ್ಡಿಗೆ ನಿಜವಾಗಿದರಿಂದ ಇವರಿಗೆ ೩೫ ಎಕೆರೆ ಜಮೀನು ಇನಾಮು ಆಗಿ ಕೊಟ್ಟಿದ್ದಾರೆ. ಇವರ ಕವಿತೆಗಳು ಕೆಲವು ಗ್ರಂಥಗಳಾಗಿದ್ದವು. ಆತನ ಮಗ ಡೊಕ್ಕ ಶ್ರೀರಾಮ ಅವರ ಹತ್ತಿರ ಇದ್ದವೆಂದು ನಂತರ ಅವು ಕಾಣೆಯಾಗಿರುವುದು ತಿಳಿದು ಬಂದಿರುತ್ತದೆ. ಊದಾಹರಣೆಗೆ ಒಂದು ಕವಿತೆಯನ್ನು ಇಲ್ಲಿ ಯಾತಾವತ್ತಾಗಿ ಇಲ್ಲಿ

ఎప్పుడేలే దీరులు- శ్రీమార్తాలు ద్రాలేలోపల శూరులు
ఎపుపుడు తపకను- నా కప్పడే కన్నపించేన్నతే
మెప్పగా గులావు బుక్క- గుప్తన గుపన జలనేద్దదు ఎపు

రక్షింతువని నంమితి- ఓం నమః శివా- లక్ష్మీనారాయణ బేడిలే
వక్షమునా శిరిగల్లు వాడవు- రాక్ష సాంతర పక్షివాపన
కుక్షిలో నేనరుంచి నాప్యే- రక్షకుడవ్వే బ్రోవరావిదే

రంఘునాయక రారా- దారుణి- సింహాసనవేనావురా
రామలౌకిక బ్రేవనేచ్చిన- కావవే కైలాస నాయక
మరదుడా మర్తాండ తేజా- కరుణతో నాను బ్రోవరాదా

పితాంబర దిక్షితులూ- వరవిరభోగ రాజా రామయోగాలు
రారా పంచ బ్రామ్మని- పక్షమున రుద్రక్షలాడగ
పంచ బ్రామ నిగన్న తండ్రి- గురుడువు నివే
నిత్యాత్మ రఘురామా కమలాధిపతి- దివ్యాత్మలింగామా
కపటి నాటక కంస సంహార- కాల కంధర గట్టి నాయక
దిట్టముగ పట్టాభిదాసుని- రేట్టి బ్రోవరాదా,

వరవీరభోగవ సంతరాయుడునీకు
వందనం ఇదికో గోవింద నంద
దాల్రే లోనీ నామ పత్రి కలనుచదివి
దాత్రిలోనీ నామ పత్రికలనుచదివి
చిత్రమ్మేతోటే ఈ రాత్రింతలోని ।వర।

మునువిక్షణని పనుగబ్రోచ్చిన కన్నతండ్రివని
చావులు వినవు నన్ను గన్నవు
ఎందుభోదు నీనెందుబోదు ।వరు।

తలిదంప్పలు నాకు అన్న దంములు తేరు
తండ్రి మ్యే రక్షింక్షు ఈ దత్తిలోన ।వరు।

దిట్టి మ్యేగను బక్క పట్టాబిదాసుని
బట్టి రక్షించు ఇట్టిదీనను

కల్లుదాగి కలవరించిగో బుక్కతాగి ఇల్లాలోని విడిపించుకు

ಕಲ್ಲುದಾಗಿ ಕಲವರಿಸ್ತು- ತಲ್ಲವಾರ್ಲ ಲೋಲಿಸೇಸ್ತೆ
ತಲಿಪಿಲ್ಲಲಕು ನಿದರ- ಕಳ್ಳಕೇಮು ದಾದಾಯೆ ॥ಕಲ್ಲು॥

ಕಲಗೊಲ್ಲಿ ಮಾಟಲಾಡಕು- ಓ ಕಾರಿಗಾ ಪಿಲ್ಲಲನ್ನು ವೀಡಿಮಾಟ
ಪಿಲ್ಲ ತಲ್ಲಿ ತಂಡ್ರಿ ಲೇವ್ರೋ- ತಲ್ಲಡಿಲ್ಲಿ ತಗುಪಾಡಾ
ಪುಲ್ಲಗಡಿತೆ ಎಲ್ಲ ಕುಲಮು- ಚಲ್ಲ ನೊಡವನಿ ಲೆಡಿದಿರು ॥ಕಲ್ಲು॥

ಮಾರವೇಮಿ ಮಂಚಿ ಗುಣಮುಖಿ ಓ ಕಾರಿಗಾ ಮರ್ಯ್ಯಾದ ಮೀಡಿಮಾಟ
ಲಾಡಕು ದಾರು ದುಕಾಸಾನಿಕಿ ಎಳ್ಳಿ- ಸಾರಾನು ಕಡಾಪಾರದಾಗಿ
ಬಾರ್ಯಪುತ್ರ ಮಿತ್ರಬಂದು- ಬಲಗಂಬುಲು ದೂರಮಾವು ॥ಕಲ್ಲು॥

## ಕವಿತೆ

ಹುಣಸಿಗಿಡದ ಮೇಲೆ ಗಿಣಿಯ
ಹೊಟ್ಟೆಯಲ್ಲಿ ಚಿನ್ನದಂತ ನುಡಿಗಳಿವೇ
ಎಲೆ ಇಲ್ಲದ ಮಾವಿನ ಮರದ ಮೇಲೆ ಕಾಗೆ ಇದೆ,
ಕೆರೆಯ ಪಕ್ಕಾ ಬಾಳೆ ತೋಟದಲ್ಲಿ ಕೋತಿ ಇದೆ
ಕೋತಿ ನೆತ್ತಿಯ ಮೇಲೆ ಶ್ರೀರಾಮ ಪಾದ ಇದೆ
ಕೆರೆಯ ಪೊಟರೆಯಲ್ಲಿ ಬೆಳ್ಳಿಮೀನು ಇದೆ
ಬೆಳ್ಳಿಮೀನು ಹೊಟ್ಟೆಯಲ್ಲಿ ಶಿವಲಿಂಗವಿದೆ

### ಇಲಿ ಕವಿತೆ

ಇಲಿಗೆ ಶ್ರೀಂಗಾರಮಾಡಿ ಮನೆಯಲ್ಲಿ ಬಿಟ್ಟರೆ
ತಲೆದಿಂಬು ಹಾಸಿಗೆ ಕಡಿದುಕಡಿದು ಹಾಳುಮಾಡಿತು.
ಹೊಸ ಹಳೆಯ ಮನೆಗೆ ಬಂದರೆ ಅಳಿಯನ
ಜುಟ್ಟುಕಡಿದು ಕಡಿದು ಓಡಿಹೋಯಿತು.

## ವೇಷದ ಹಾಡು

ವಾಲ್ಕಂ ಕಟ್ಟು ಸಿರಪನ್ನ ವಾಲ್ಕಂ ಕಟ್ಟು
ಕಟ್ಟಿ ತೆಕಟ್ಟು ಗಾನಿ ಬೀರುಕಾಳ ವಾಲ್ಕಂ ಕಟ್ಟು
ಇಂಜಿನೀರಾ, ಡಾಕ್ಟಾರ, ತಾಹಸಿಲ್ದಾರ, ಸರಕಾರೋಣಿ
ವಾಲ್ಕಾಂ ಕಟ್ಟು ॥

ಕಟ್ಟಿತೆ ಕಟ್ಟುಗಾನಿ, ಬೀರುಕಾಳ ವಾಲ್ಕಂ
ಜಿಲ್ಲಾ ಅಧ್ಯಕ್ಷಡು ಎಂ.ಎಂಲ್.ಎ
ರಾಜಕೀಯಂಗ್ ವಾಲ್ಕ್ಂ ಕಟ್ಟು ॥

ಕಟ್ಟಿತೆ ಕಟ್ಟು ಗಾನಿ,
ರಾಜ್ಯಮಂತ ಮಂಚಿವಾಳುಗಾ
ಪೇರುತೆಚ್ಚೆ ವಾಲ್ಕ್ಂ ಕಟ್ಟು ವಾಲ್ಕಂ ॥

ಬುಡ್ಗ ಜಂಗಮ ಪಾಟ

ಬುಡ್ಗ ಜಂಗಮ ಸಂಘಂ ವಚ್ಚಿಂದಿ ಬುಡ್ಗ
ಜಂಗಾಲ ಮುಂದುಕೊ
ಕಲಿಸಿ ಮೆಲಿಸಿ ಮನಮಂತಾ
ಕದಲು ದಾಮು ಅಂದುಕೊ ॥ಸಂ॥

ಮಂಕಾಳ್ಲ ಕಸಿಂಪುಲಾ
ಮನನ್ಯಾಷ್ಟ ಪೆಟ್ಟಗಾ
ಯಸಕಾನಿಕಿ ಜಾನೋಕೋಕು
ನಾಗನ್ನಾ ಶಿರ್ಪಗ
ಮತ್ಯಲೊನ ವಾಲ್ಕೋಕ
ಮಂಚಿಪನಿಕಿ ಪೊನುಕೊ ॥ಸಂ॥

ಕನ್ನಕೂಟ್ಲ ಕಶಾದಲು
ಪಚ್ಚಾಮುಕು ದೇಪುಲು
ಶಾವಿಢಿಕಂಚ್ಕಾಲಕು
ಶಾಂತುಲ ಪಲ್ಕಾಟಲು
ಬಂಜ್ಯೆಯರ ಜಂಗಮಾ
ಬತುಕುದಾಮು ಸಂಗಾನಾ ॥ಸಂ॥

ಪಿಂಕೆಲ ಶೇತುಲಕೂ
ಬೋಡಿ ಶ್ಯಾಲಿಯ್ಯಕೂ
ಶೇತುಲು ಸುಟ್ಟೆಯಕೂ
ಸಾಲಿಕೇಶಿ ಸದುವುಪಿಂಚ್ಚಿ
ಸಕ್ಕನೇಕೆನ ಚೇದ್ದಾಂ ॥ಸಂ॥

ಸದುವುಕುನ ಪಿಂಕಲಕು
ಪುಸ್ತಕಾಲು ಕಂಚಕಾಲು
ಶಾವಿಡಿ ಕೆಂದಾಲು ಇಚ್ಚಿ
ವಿದ್ಯಾ ಬುದ್ಧಿಲು ಚೆಪ್ಪಿ

ಕೋಲ್ಚುಕು ಜಾನೋಸ್ತೆ ವಾನ್ನಿ
ಕೋರಿ ಅಂಟುಕುಂಟಾರು ॥ಸಂ॥

ಮ್ಯಾರದಿಪ್ಪಿ ಪೊಟೇಸಿ
ತೊಡಿನ್ನಡು ನಾಸಿಗಾಡು
ಮೆನ್ನೆ ಎನಿಕೇಸ್ಕೊನಿ
ಅಲ್ಲುಂಡ್ಲನು ಗೊಸಬೇಟ್ಟಿ
ಆಲೋಚನ ಮ್ಯಲೆ ॥ಸಂ॥

ಕೊಟ್ನಾಡಿ ಪುಲ್ಲಗಟಿ
ನಲುಪೂ ಸಿದಾನಂ ಪೆಟ್ಟಿ
ಇಲ್ಲಂತಾ ಗುಲ್ಲೆತ್ತೆ
ಮಲ್ಲಾ ಅಪ್ಪುಲ ಪಡಿ
ಚಿಲೆಕಿಪೊಥವು ನೆಟ್ಟಿ
ಬಾಗುಪಡೆ ರಾಪ್ಯೆಕಿ ಸಂ॥

ಮತ್ತೆಗಾಳು ಮನಿಷಿಲೇ
ಮೀಮುಗೂಡ ಮನಷಲಮೇ
ವಾಳೇಮ ಗುಟ್ಟುಯಿರಿ
ಮನಮಂದುಕು ಗಿಟ್ಲುಯಿತಿಮಿ
ಗೊಸ್ಯೆಯೇ ಮನಕುಲಂ
ಗುರುರಿಗಿ ಸಾಗುದಾಮು ॥ಸಂ॥

ಭೈರಾಗಿ ವೇಷದ ಸಾಹಿತ್ಯ
"ರಾಮಗೋವಿಂದ ಹರೇ ಭಜರೆ ಬಯ್ಯಾ
ರಾಮಗೋವಿಂದ ಹರೇ ॥
ಜಪತಪ ಭಾಸ್ಕರ ಅಖಿಲ ಉಜ್ವಲ
ಪಾದುಕವ್ಯೆಯಹರೇ ಗೋವಿಂದ
ಭೈರಾಗಿ ವೇಷದಲ್ಲಿ ಸಾಧುವಿನ ಶಿಷ್ಯನು ಹಾಡುವ ಸಾಹಿತ್ಯ

ಅಂತಿಂತ ಕಾಲ ಇದು ಅಲ್ಲ
ಇದರಂತೆ ಕಾಲ ಮುಂದಿಲ್ಲ ॥ ಅ ॥

ಬಡವರಿಗೆ ಜೋಳ ಸಿಗಲಿಲ್ಲ
ಇವರು ಕಾಳು ಕೊಡಲಿಲ್ಲ

ತೂಕಾದ ಹಿಟ್ಟು ತಂದಾರು
ತುಣ ತುಣಕು ಹಂಚಿ ತಿಂದಾರು ॥ ಅ ॥

ಉತ್ತಮರು ಮಾಂಸ ತಿನ್ನುವರು
ತಿನ್ನುವರು ಮಾಂಸ ಬಿಟ್ಟಾರು
ಹೀನಾರ ಸಂಗ ಮಾಡವರುದು
ಒಡವರಗೆ ನಿಂದೆ ಮಾಡುವರು ॥ ಅ ॥

ಕಂಟ್ರೋಲ ಕಾಳಿಗೋಗ್ಯಾರು
ರೇಗುಣದ ಜನರ ಕೂಡ್ಯಾಡ್ಯಾರು
ಸಿರಿತನಕ ಸಿರವ ಬಾಗುವರು
ಪರಸ್ತ್ರೀನಿಂದೆ ಮಾಡುವರು ॥ ಅ ॥

ಕಲಿಕಾಲ ದಾಟಿ ನೋಡ್ರಣ್ಣ
ಬರತಾನ್ರಿ ಅಣ್ಣ ಬಸವಣ್ಣ
ಈ ಗರ್ವವನ್ನು ಬಿಡಣ್ಣ
ಬಸವೇಶ್ವರನನ್ನು ಸ್ಮರಿಸಣ್ಣ ॥ ಅ ॥

ಮೋಹಿನಿ ಭಸ್ಮಾಸುರ

ಉತ್ತರ ಕರ್ನಾಟಕದಲ್ಲಿ ಬಲು ಪ್ರಚಲಿತ ಇರುವ ಈ ವೇಷವು ಬಹಳ ಕಲಾತ್ಮಕವಾಗಿ ಪ್ರದರ್ಶಿಸುತ್ತಾರೆ.

ಭಸ್ಮಾಸುರ: "ಒಡಿಸಿದೆ ಅಷ್ಟ ದಿಕ್ಪಾಲಕರನು ನಾನೇ ವೀರ ಭಸ್ಮಾಸುರನು." ನನ್ನ ಮುಂದೆ ಕಾದುವವರು ಭೂಲೋಕದಲ್ಲಿ ಯಾರೂ ಇಲ್ಲ, ವೀರನಿಗೆ ವೀರ, ಶೂರನಿಗೆ ಶೂರ, ವೀರಾಧಿವೀರನಾದ ನನ್ನ ಮುಂದೆ ಯಾರೂ ಇಲ್ಲ. ಸುರಲೋಕ, ಕಿನ್ನರಲೋಕ ಯಾವುದೂ ನಿಲ್ಲದು. ಜೈ ಶಂಭೋ ಅಹಹಹ.... (ನಗುವನು)

ಸೇನಾಧಿಪತಿ : ಅಹಹಹ.. .. ನಾನು ದೊಡ್ಡವ. ಈ ಜಗತ್ತಿಗೆಲ್ಲ ನಾನೇ ದೊಡ್ಡ. ಇತ್ತ ಹೂಗಟ್ಟಿ ಸಂಬ್ಳ ತಕಂಬ್ತೀನಿ ಅತ್ತ ಹೂಗುಟ್ಟಿ ಸಂಬ್ಳ ತಕಂಬ್ತೀನಿ. ಎರಡು ಕಡೆ ಸಂಬ್ಳ ತಕ್ಕಂಡ್ರೆ, ಸೊಂಪ್ಗೆ ತಲೇನ ಬಾಗ್ಲಾಗೆ ಇಟ್ಕಂಬಾದು. ಹುಹುಹೂ.... (ನಗು)

ಭಸ್ಮಾಸುರ : ಛೇ ಮೂರ್ಖನೆ ಯಾರು ನೀನು?

ಸೇನಾಧಿಪತಿ : ಅಯ್ಯಪ್ಪ! ಅಯ್ಯಯೋ, ಬಂತಲ್ಲೋ ಪಿಶಾಚಿ!

ಭಸ್ಮಾಸುರ : ಭಯಪಡಬೇಡ ಯಾರು ನೀನು?

ಸೇನಾಧಿಪತಿ : ಬೂತ! ಪಿಶಾಚಿ! ಅಯ್ಯಯೋ!

ಭಸ್ಮಾಸುರ : ಎಲವ್ವೋ ಮೂರ್ಖ. ಯಾರು?

ಸೇನಾಧಿಪತಿ : ಎ.ಎ.ಏ. ಏಕಾನ.

ಭಸ್ಮಾಸುರ : ಏಕಾನ ಅಂದ್ರೆ?

ಸೇನಾಧಿಪತಿ : ದೊ, ದೊ, ದೋ, ದೋಆನ.

ಭಸ್ಮಾಸುರ : ದೋ ಅನ ಅಂದ್ರೆ?

ಸೇನಾಧಿಪತಿ : ತಿ. ತಿ. ತೀ, ತೀನಾನ,

ಭಸ್ಮಾಸುರ : ತೀನಾನ ಅಂದ್ರೆ?

ಸೇನಾಧಿಪತಿ : ಚ, ಚ, ಚಾ, ಛರಾನ

ಭಸ್ಮಾಸುರ : ಛಾರಾನ ಅಂದ್ರೆ?

ಸೇನಾಧಿಪತಿ : 'ಸೇನಾಧಿಪತಿ' ರೀ ಯಪ್ಪ

ಭಸ್ಮಾಸುರ : ಸೈನ್ಯಾಧಿಪತಿ ಎಲ್ಲಿ ಹೋರಟಿದ್ದೀ?

ಸೇನಾಧಿಪತಿ : ಎಲ್ಲೋ ಭಸ್ಮಾಸುರ ಔನೆ ಅಂತ.

ಭಸ್ಮಾಸುರ : ಛೇ, ಬಾಯಿಯನ್ನು ತೆಗಿ

ಸೇನಾಧಿಪತಿ : ಬಾಯಿ (ಬಿಚ್ಚುವನು)

ಭಸ್ಮಾಸುರ : ನಾಲಗಿ ಮೂರ್ಖ, ನಿನ್ನ ಎದುರಿನಲ್ಲಿರುವವನು ನಾನೇ ಅಲ್ಲವೇನೋ ಭಸ್ಮಾಸುರ.

ಸೇನಾಧಿಪತಿ : ನೀವೇನ್ರೀ ಭಸ್ಮಾಸುರ್ರು! ಬಡ್ಡಿ

ಭಸ್ಮಾಸುರ : ಹೌದು ನಾನು

ಸೇನಾಧಿಪತಿ : ಅಯ್ಯೋ, ನಮೋನ್ನಮಃ ನಮೋನ್ನಮಃ ಅಂಬ್ರೀಪ್ರಿ ಬುದ್ದಿ. ಇನ್ನು ಮ್ಯಾಲೆ ಮಂತ್ರಿ ಮದವೀನೂ ಮಾಡ್ತೀನ್ರಿ ನಿಮ್ಮಾಗೆ ಯಪ್ಪ.

ಭಸ್ಮಾಸುರ: ನಮ್ಗೆ ಮಂತ್ರಿ ಪದವಿ ಮಾಡ್ತೀಯ? ಹಾಗಾದರೆ ಸಂಬಳ ವೇನು?

ಸೇನಾಧಿಪತಿ: ಬಹಳ ಸಣ್ಣದ್ರೀ. ಅದ್ನೇ ಮಾತಾಡ್ಬಿಡ್ರಿ.

ಭಸ್ಮಾಸುರ: ಒಂದು ಲಕ್ಷ.

ಸೇನಾಧಿಪತಿ: ಅದ್ರ ಮ್ಯಾಲೆ

ಭಸ್ಮಾಸುರ: ಒಂದು ಕೋಟಿ

ಸೇನಾಧಿಪತಿ: ಅಯ್ಯೋ, ಒಂದು ಕೋಟಿ! ಹಾಂ! ಒಂದು ಕೋಟಿ ಮ್ಯಾಲೆ ಮಂಗ. ಮಂಗ ಮ್ಯಾಲೆ ಮಿಕ್ಕು ಒಂದಾಣೆ ಒಂದು ನಯಾ ಪೈಸೆ ನನ್ನ ಸಂಬ್ಳ.

ಭಸ್ಮಾಸುರ: ಸೇವಕ, ಸಂಬಲವೇನೋ ಮಾತಾಡಿದ್ದಾಯ್ತು. ನಿನ್ನ ಕುಟುಂಬ ವೆಷ್ಟಿದೆ?

ಸೇನಾಧಿಪತಿ: ಕುಟುಂಬ! ಅಯ್ಯೋ ಬಹಳ ಸುಣ್ಣದ್ರೀಯಪ್ಪ.

ಭಸ್ಮಾಸುರ: ಅಂದಹಾಗೆ, ಎಷ್ಟು ಜನಾ ಅದೀರಿ?

ಸೇನಾಧಿಪತಿ: ಇಬ್ರು ಹೆಂಡ್ರು. ನಾಕು ಮಂತಿ ಸೂಳೇರು. ಕೋಟಿಗಷ್ಟು ತುಂಬ ಮಕ್ಕಳು.

ಭಸ್ಮಾಸುರ: ಓಹೋ! ಏ ಸೇವಕ ನೀನು ಕುಚೇಷ್ಟೆ ಆಡಿನಲಿ. ನನಗಿಂತಲೂ ಮಿಗಿಲಾದ ಚತುರರು ಯಾರಿದ್ದಾರೆ? ಹೇಳು ನೋಡೋಣ.

ಸೇನಾಧಿಪತಿ: ನಿಮಗಿಂತ ದಡ್ಡೇನ್ರಿ!

ಭಸ್ಮಾಸುರ: ನನಗಿಂತ ದೊಡ್ಡವರು.

ಸೇನಾಧಿಪತಿ: ದೊಡ್ಡವರು! ಅಬ್ಬಬ್ಬ! ಐದಾನ್ರೀ!

ಭಸ್ಮಾಸುರ: ಯಾರವನು?

ಸೇನಾಧಿಪತಿ: ಆಕೆ! ಸತ್ಯ ಲೋಕದಲ್ಲಿ ಬ್ರಹ್ಮನಿದ್ದಾನೆ.

ಸೇನಾಧಿಪತಿ: ಹೇ! ಅಹಹಹ... (ಗಟ್ಟಿಯಾಗಿ ನಗುವನು) ಸತ್ಯಲೋಕದಲ್ಲಿ ಬ್ರಹ್ಮನು! ನನ್ನಂಥವನ ಎದುರಿನಲ್ಲಿ! ಅತಳ, ವಿತಳ ಪಾತಳ, ತಳಾತಳಗಲ್ಲಿ ಯಾರಿದ್ದಾರೆ? ಹೀಗಿದ್ದಾಗ ಆ ಬ್ರಹ್ಮನು ಯಾತರವನು?

ಸೇನಾಧಿಪತಿ: ಬ್ರಹ್ಮನೂ ನೋಡಿಬಿಟ್ಟೀರೆನ್ರೀ!

ಭಸ್ಮಾಸುರ: ಹೂಂ.

ಸೇನಾಧಿಪತಿ: ಮತ್ತೆ ಇನ್ನೊಬ್ಬನೈದಾನೆ.

ಭಸ್ಮಾಸುರ: ಮತ್ತ್ಯಾರು?

ಸೇನಾಧಿಪತಿ: ಆತೇ ಗೊಲ್ಲ ಕೃಷ್ಣನು. ವೈಕುಂಠದಲ್ಲಿ.

ಭಸ್ಮಾಸುರ: ಎಲೋ ಸೇವಕ; ರುಕ್ಮಿಮಿ, ಸತ್ಯಭಾಮೆಯರನ್ನು ಬಿಟ್ಟು ಓಡಿ ಹೋಗಿದ್ದಾನೆ. ಆ ಕೃಷ್ಣ, ಸತ್ಯ ಭಾಮೆಯರನ್ನು ಬಿಟ್ಟು ಓಡಿ ಹೋಗಿದ್ದಾನೆ. ಆ ಕೃಷ್ಣನು.

ಸೇನಾಧಿಪತಿ: ಓಹೋ ಆತ ಅಂಗೇನ್ರಿ? ಅಂಗಾದ್ರೆ ಇನ್ನೊಬ್ಬನೈದಾನೆ.

ಭಸ್ಮಾಸುರ: ಮತ್ತ್ಯಾರದು?

ಸೇನಾಧಿಪತಿ: ಆತ ಅಂತ-ಇಂತಾನಲ್ಲ! ನಿನಗಿಂತ ನನಗಿಂತ; ನಿಮ್ಮಪ್ಪಗಿಂತ; ನಿಮ್ ತಾತಗಿಂತ, ನಮ್ ತಾತಗಿಂತ; ನಿಮ್ ಮುತ್ತಾತಗಿಂತ; ನಮ್ಮುತ್ತಾತಗಿಂತ ಓತ್ತಾತಗಿಂತ ಸತ್ತೋದ್ನಲ್ಲ ಓತ್ತಾತ-ಆತನಿಗೂ ದೋಡನು.

ಭಸ್ಮಾಸುರ: ಥೂ, ಯಾರವನು?

ಸೇನಾಧಿಪತಿ: 'ಕುಂಬರಸ'

ಭಸ್ಮಾಸುರ: ಹೇಸರೇನು?

ಸೇನಾಧಿಪತಿ: ಪರಮೇಶ್ವರ ರೀ.

ಭಸ್ಮಾಸುರ: ಆಹಹ..... (ನಗುವನು) ಎಲವೋ ಸೇನಾಧಿಪತಿ
"ಇವನಿಗೆ ಅಪ್ಪನಿಲ್ಲ, ಅವ್ವನಿಲ್ಲ
ಕುಲವೆನ್ನುವುದೇ ಅರ್ಥವಿಲ್ಲ
ಪ್ರಚಾಲ ವಿಪ್ರ ಬಾಂಧವ."॥

ಎಲ್ಲವೋ ಮೂರ್ಖ, ಇಂತವನು ನನಗಿಂತ ದೊಡ್ಡವನು ಹೇಗಾಗುತ್ತಾನೆ?

ಸೇನಾಧಿಪತಿ: ಅಯ್ಯೋ ನಿಮಗೆ ಗೊತ್ತಿಲ್ಲೇನ್ರಿಯಪ್ಪ. ಇರುವಿ ಎಂಭತ್ನಾಲ್ಕು ಲಕ್ಷ ಪ್ರಾಣಿಗಳಿಗೆ ಅನ್ನ ಹಾಕ್ತಾನೆ. ಎಲೆ ನಿನ ಆತನ್ನ ಅಂಬ್ರೀಯಲ್ಲ ನೀನು?

ಭಸ್ಮಾಸುರ: ಎಲವೋ ಸೇನಾಧಿಪತಿ. ನನ್ನ ಆಸ್ಥಾನದಲ್ಲಿ ಕಾಮಧೇನು, ಕಲ್ಪವೃಕ್ಷ, ವೇದಶ್ರೀ ಪುರುಷ ಮೃಗ, ಚಿಂತಾಮಣಿ, ಐರಾ ವತಗಳಿದ್ದಾವೆ. ಆದರೆ; ವಜ್ರ, ವೈಡೂರ್ಯ, ಮರಗತ, ಮಾಣಿಕ್ಯ, ಮುತ್ತು ರತ್ನಗಳು ನನ್ನಲ್ಲ್ಯ ಅಡಗಿ ಇದ್ದಾವೆ. ಅವನ್ನಿಲ್ಲಿ ಹೇಗೆ ಹೇಳಲಿ?

ಸೇನಾಧಿಪತಿ: ನೀವು ಅಂಗಂಬ್ತೀರ್ರಿಯಪ್ಪ ಭಸ್ಮಪ್ಪ ಮಹಾರಾಜರೇ. ಇವೆಲ್ಲಾದಕೂ ಅವ್ರುದು ಒಂದೇ ಸಾಕು.

ಭಶ್ಮಾಸುರ: ಯಾವುದದು?

ಸೇನಾಧಿಪತಿ: 'ತ್ರೈಶೂಲ' ಎಲ್ಲಾರ್ಗಿಂತ ದೊಡ್ಡೋನಲ್ವೆ? ಅಯ್ಯೋ; ಭೋಗಶ್ವಿನಿ! ಉರಿನೇತ್ರವು! ಬಹಳ ದೊಡ್ಡವನು!

ಭಸ್ಮಾಸುರ: ಇದ್ದಿದ್ದೇ ಹೇಳ್ತಾ ಇದ್ದಿ ನಿಜ. ಅವನನ್ನು ಒಲಿಸಿಕೊಳ್ಳುವುದು ಹೇಗೆ?

ಸೇನಾಧಿಪತಿ: ಅಯ್ಯೋ ಉಣ್ಣೆ, ದೇಶದಾಗಿನ ಸ್ಥಾನಕ್ಕೋಗಿ ಘೋರ ತಪಸ್ಸು ಮಾಡಿದ್ರೆ ಒಲಿದು ಬರ್ತಾನ್ರಿಯಪ್ಪ. ಅಲ್ರಿ ಭಸ್ಮಪ್ಪ; ಅಲ್ಲಿಗೆ ಹೋಗಾದು ಬ್ಯಾಡ, ಏನೂ ಬೇಡ, ಇಲ್ಲೇ ಮಾಡ್ಬಿಡಾನ ತಪಸ್ಸು.

ಭಸ್ಮಾಸುರ: ಹೌದು ಸೇವಕ. ನೀನು ಹೇಳುವುದೂ ಸರಿಯೇ. ಇಲ್ಲೇ ಮಾಡ್ಬಿಡಾನ ತಪಸ್ಸು. 'ಜೈ ಶಂಕರ' (ಎನ್ನುತ್ತ ಪದ್ಮಾಸನ ಹಾಕಿ ತಪಸ್ಸಿಗೆ ಕೂರುವನು) (ನಿಧಾನವಾಗಿ) 'ಹರ ಶಂಭೋ ಮಹಾದೇವ,
ಹರಶಂಭೋ ಮಹಾದೇವ,
ದೀನ ಬಂಧು ದಯಾ ಸಿಂಧೂ
ರಕ್ಷಿಸು, ರಕ್ಷಿಸು ನನ್ನನವರತ
ಮಾಯವತಿ ಅನಂತ ಗರುಡಾಯ ನಮಃ
ಭಕ್ತ ವತ್ಸಲ ಶ್ರೀ ಸಾಮಾಯ ನಮಃ
ಓಂ ನಮಃ ಶಿವಾಯ, ಓಂ ನಮಃ ಶಿವಾಯ,
ಓಂ ನಮಃ ಶಿವಾಯ',

ಸೇನಾಧಿಪತಿ: ಓಂ ನಮಃ ಶಿವಾಯ,

ಭಸ್ಮಾಸುರ: ಓ ಗವಿ ಸಿದ್ದೇಶ್ವರ ನೀ ಬಾರಯ್ಯ
ಓ ಗವಿ ಸಿದ್ದೇಶ್ವರ ನೀ ಬಾರಯ್ಯ
ಕವಿ ಮನದೀಶ ಪುರದ ಈಶ
ಓಂ ನಮಃ ಶಿವಾಯ, ಓಂ ನಮಃ ಶಿವಾಯ, ನಮಃ ಶಿವಾಯ

ತಂದಿನಿ ಬಾರಯ್ಯ ಕಂದನ ಕರಿಮಯ್ಯ
ಕರುಣೆ ಸುರಿಯಯ್ಯ
ನಿನ್ನ ನಂಬಿದೆ, ನಿನ್ನ ನಂಬಿದೆ
ಓ ಗವಿ ಸಿದ್ದೇಶ, ನೀ ಬಾರಯ್ಯ ॥
ಓಂ ನಮಃ ಶಿವಾಯ, ಓಂ ನಮಃ ಶಿವಾಯ, ನಮಃ ಶಿವಾಯ
ಗರಮುಡಿ ತುಳಸಿ ವೀಣಾ ತಂತಿ
ಗರ ಮುತ್ತವ ಸುರಿಸೀ ।
ಕುಂತಿಯ ನದಿಯೊಳು ವೀಣಾ ನೆನಿಸಿ
ತಲೆ ವಂದಿಸಿ ಬೇಡುವೆ
ಓ ಗವಿ ಸಿದ್ದೇಶ ನೀ ಬಾರಯ್ಯ
ನಿಜ ರೂಪವ ತೋರಿದೆ ಕೊಪ್ಪಳ ಗವಿ ಸಿದ್ದೇಶ
ಓಂ ನಮಃ ಶಿವಾಯ, ಓಂ ನಮಃ ಶಿವಾಯ
(ತಪಸ್ಸು ಮುಂದುವರೆಸುವನು)
ಓಂ ನಮಃ ಶಿವಾಯ, ಓಂ ನಮಃ ಶಿವಾಯ

ಈಶ್ವರ: (ಈಶ್ವರ ಪ್ರತ್ಯಕ್ಷನಾಗುವನು) ತತಾಸ್ತು ಭಕ್ತ ತತಾಸ್ತು, ಆದರೆ ಶ್ರೀಮದ ಕಮಲ ನಯನ ತುಂಬಿದ ವೈಕುಂಠದೊಳು ಸ್ವರ್ಗವು. ಭಕ್ತರ ತಳಾರ ಕುಟುಂಬಕ್ಕೆ ಅಧಿಕವಾದ ಒಂದು ವರವನ್ನು ಕೊಡುವೆನು. ಓಂ ನಮಃ ಶಿವಾಯ ಎಂದು ಭಕ್ತಾದಿಗಳು ಉಚ್ಚರಿಸಿದರೆ ನಾನಲ್ಲಿರುವೆನು. ನಿಮ್ಮ ಕಷ್ಟಗಳನ್ನು ಪರಿ ಹರಿಸುವುದೇ ನನ್ನ ಕರ್ತವ್ಯ ಓ ಹೋ ಇವನು ಎಷ್ಟು ವರ್ಷಗಳಿಂದ ತಪಸ್ಸಿಗೆ ಕುಳಿತಿರುವನು! ಸಹೋದರ ಏಳು. ಏಳು ಮೇಲೇಳು. ಸಕಲ ಇಂದ್ರಿಯಗಳಲ್ಲಿ ಪಂಚಾಕ್ಷರಿ ಮಂತ್ರವನ್ನು ಹೇಳಿದೆ. ನಾನು ನಿನ್ನ ತಪಸ್ಸನ್ನು ಮಾನ್ಯ ಮಾಡಿರುವೆ. ಭಕ್ತ ಏಳು. ಏಳು. ಮೇಲೇಳು. ನಿನ್ನ ತಪಸ್ಸಿನ್ನು ಸಾಕು ಮಾಡು.

ಭಸ್ಮಾಸುರ: ಧನ್ಯೋಸ್ಮಿ, ಮಹೇಶ್ವರಾ ಧನ್ಯೋಸ್ಮಿ. ಮಹಾದೇವ ಪರಮೇಶ್ವರ ಧನ್ಯೋಸ್ಮಿ. ಮಹಾದೇವ ನಿನ್ನಲ್ಲಿರುವ ತ್ರಿಶೂಲ ದಯಪಾಲಿಸು.

ಈಶ್ವರ: ಭಕ್ತ, ಈ ವಸ್ತುಗಳು ನಿನಗೆ ಸಣ್ಣವು ಅಲ್ಲವೆ? ಆದರೆ ನೀನು ಏನು ಬೇಡುತ್ತೀಯೋ ಬೇಡು. ಬಂಗಾರ ಮುತ್ತು, ರತ್ನ, ಮಾಣಿಕ್ಯ, ಮರಗತ, ವಜ್ರ, ವೈಡೂರ್ಯ, ಮನೆ ಮಠ, ಏನನ್ನಾದರೂ ಬೇಡು.

ಭಸ್ಮಾಸುರ: ಸ್ವಾಮಿ ಮುತ್ತು, ರತ್ನ, ವಜ್ರ, ವೈಡೂರ್ಯ, ಮಾಣಿಕ್ಯ, ಮರಗತ, ಮನೆ, ಮಠ ಇವೆನ್ನೆಲ್ಲ ನಾನೇನು ಮಾಡಲಿ ಸ್ವಾಮಿ, ನಾನು ಬೇಡುವುದು ತ್ರಿಶೂಲ, ತ್ರಿನೇತ್ರ, ಹೋಮಹಸ್ತ.

ಈಶ್ವರ: ಅಹಹ! (ನಗುವನು) ಎಲಾ ಹುಚ್ಚು ಭಸ್ಮಾಸುರನೆ. ನನ್ನ ಕೈಲಿರುವಂತ ಥಳಥಳ ಹೊಳೆಯುವಂತ 'ತ್ರೀಶೂಲವು' ನಿನಗೆ ಆಸೆಯೇ? ನಾನು ವಚನಕೊಟ್ಟ ಮೇಲೆ ಭ್ರಷ್ಟ ಆಗುವುದಿಲ್ಲ. ತೆಗೆದುಕೋ ಈ ಆಯುಧ.

ಭಸ್ಮಾಸುರ: ಧನ್ಯೋಸ್ಮಿ ಸ್ವಾಮಿ, ಧನ್ಯೋಸ್ಮಿ ಮಹಾದೇವ. ಪರಮೇಶ್ವರ, ನಿನ್ನಲ್ಲಿರುವ ತ್ರಿನೇತ್ರ, ಹೋಮಹಸ್ತ ದಯಪಾಲಿಸು.

ಈಶ್ವರ: ತೆಗೆದುಕೋ ತ್ರಿನೇತ್ರ.

ಭಸ್ಮಾಸುರ: (ತ್ರಿನೇತ್ರ ಪಡೆದು) ಉರಿ, ಉರಿ ಸ್ವಾಮಿ (ಸ್ವಲ್ಪ ಸಮಯದ ನಂತರ) ಶಂಭೋ, ಹೋಮಹಸ್ತ?

ಈಶ್ವರ: ತೆಗೆದುಕೋ ಹೋಮಸ್ತವನ್ನು (ಕೊಡುವನು)

ಭಸ್ಮಾಸುರ: (ಹೋಮಹಸ್ತ ಪಡೆದ) ಮಹಾದೇವ ನೀನು ಮೂರನ್ನೂ ಕೊಟ್ಟಿರುವೆ, ಆದರೆ ಈ ತ್ರಿಶೂಲದಿಂದ ಏನಾಗುವುದು?

ಈಶ್ವರ: ಈ ತ್ರೀಶೂಲದಿಂದ ತ್ರೈಲೋಕವೇ ನಾಶವಾಗುವುದು.

ಭಸ್ಮಾಸುರ: ಅಹಹಹ....! (ಗಟ್ಟಿಯಾಗಿ ನಗುವನು). ಮಹಾಸ್ವಾಮಿ ಹಾಗಾದರೆ ಈ ಉರಿನೇತ್ರ ಏತಕ್ಕೆ ಬರುವುದು?

ಈಶ್ವರ: ಈ ಉರಿನೇತ್ರವನ್ನು ಬಿಂದು ನೋಡಿದರೆ ಕಾಮಾದಿಗಳು ಸುಟ್ಟು ಭಸ್ಮವಾಗುವುದು.

ಭಸ್ಮಾಸುರ: ಅಹಹ ...ಅಹಹ..! ಮಹಾಸ್ವಾಮಿ ಈ ಹೋಮಹಸ್ತ ಏತಕ್ಕೆ ಬರುವುದು?

ಈಶ್ವರ: ನಿನ ಹೋಮಹಸ್ತವನ್ನು ಯಾರ ತಲೆಯ ಮೇಲಿಟ್ಟರೂ ಅವರು ಸುಟ್ಟು ಬೂದಿಯಾಗುವರು.

ಭಸ್ಮಾಸುರ: "ನಿಲ್ಲಿ ನಿಲ್ಲು ಶಂಕರ
ನೀನು ಎಲ್ಲಿ ಹೋಗುವೆ?
ನೀನು ನಿಲ್ಲು ಶಂಕರ
ನೀನು ಎಲ್ಲಿ ಹೋಗುವೆ?
ಇದಿಗೊ ನಾನು ನಿನ್ನ
ತಲೆಯ ಮೇಲೆ ಕೈ ಇಡುವೆ".

ಈಶ್ವರ: ಕಾಪಾಡು ಕೃಷ್ಣ, ಕಾಪಾಡು ಕೃಷ್ಣ. (ಓಡುವನು)

ಕೃಷ್ಣ: (ಪ್ರತ್ಯಕ್ಷನಾಗಿ) ಶಾಂತನಾಗು ಶಂಕರ ಶಾಂತನಾಗು.

ಈಶ್ವರ: ಆಹಾ! ಕೃಷ್ಣ! ದುಷ್ಟಾ ಭಸ್ಮಾಸುರನಿಗೆ ವರ ಕೊಟ್ಟು ಮೋಸಹೋದೆ ನಾನು.

ಭಸ್ಮಾಸುರ: ಸ್ವಾಮಿ! ನಿಲ್ಲು, ಮೊದಲು ನಿನ್ನ ತಲೆಯ ಮೇಲೆ ಕೈ ಇಡುತ್ತೇನೆ. ನೀನು ಸುಟ್ಟು ಬೂದಿಯಾದರೆ ಈ ಬ್ರಾಹ್ಮಾಂಡವೆಲ್ಲವೂ ಪೂಜೆ ಮಾಡುವರು ನನ್ನನ್ನು.

ಈಶ್ವರ: ಭಕ್ತ! ಯಾರು? ನೀನು?

ಭಸ್ಮಾಸುರ: ನಿನ್ನ ವೈರಿ; ನಾನೇ ವೀರ ಭಸ್ಮಾಸುರ.

ಈಶ್ವರ: ಅಯ್ಯೋ! ಮೋಸ ಹೋದೆನೆ.

ಭಸ್ಮಾಸುರ: ನಿಲ್ಲು, ಮಹಾದೇವ ನಿಲ್ಲು.

ಈಶ್ವರ: ನನ್ನನ್ನು ಕೊಂದು, ಪಾಪಕ್ಕೆ ಗುರಿಯಾಗಬೇಡ ಭಸ್ಮಾಸುರ.

ಭಸ್ಮಾಸುರ: ಈಶ್ವರ, ನೀನು ಈ ಭೂಮಿಯ ಮೇಲೆ ಎಲ್ಲಿದ್ದರೂ ಬಿಡುವುದಿಲ್ಲ, ನೀನು ಕೈಲಾಸ ಸೇರಿದರೂ ಬಿಡುವುದಿಲ್ಲ! ಎಲ್ಲಿಗೋದರೂ ಬಿಡುವುದಿಲ್ಲ.

ಈಶ್ವರ: ಈ ದುಷ್ಟನಿಂದ ತಪ್ಪಿಸಿಕೊಳ್ಳುವುದು ಸಾಧ್ಯವಿಲ್ಲ. ಏನು ಮಾಡುವುದು (ಸ್ವಲ್ಪ ಹೊತ್ತು ಯೋಚಿಸಿ) ಹಾ! ಕೃಷ್ಣಾ! ಕಾಪಾಡು ನನ್ನನ್ನು ಹಾ! ಕೃಷ್ಣಾ! ಎಲ್ಲಿರುವೆ? ಕಾಪಾಡು ನನ್ನನ್ನು. ಮೋಸಹೋದೆ ಕೃಷ್ಣಾ ನಾನು ಮೋಸ ಹೋದೆ.

ಕೃಷ್ಣಾ: ನೀನೇನೂ ಯೋಚಿಸಬೇಡ ಶಂಕರ. ಈಗಿಂದೀಗಲೇ ನಾನು ಸ್ತ್ರೀ ವೇಷ ತಾಳಿ ಆ ಭಸ್ಮಾಸುರನನ್ನು ಭಸ್ಮಮಾಡುವೆನು.

ಈಶ್ವರ: ಹಾ! ದಯಾಮಯನಾದ ಕೃಷ್ಣ.

ಕೃಷ್ಣ: ಶಾಂತನಾಗು ಶಂಕರ.

ಈಶ್ವರ: ಧನ್ಯ, ಕೃಷ್ಣಾ, ಧನ್ಯ.

ಭಸ್ಮಾಸುರ: (ಮೋಹಿನಿಯ ಪ್ರವೇಶ) ಯಾರದು ಕನ್ಯೆ.

ಮೋಹಿನಿ: ನಿಲ್ಲು ಮೋಹನಾಂಗ ನಿಲ್ಲು!

ಭಸ್ಮಾಸುರ: ಆಹಾ! ಈ ದಟ್ಟವಾದ ಅರಣ್ಯದಲ್ಲಿ, ಈ ಘೋರ ಅರಣ್ಯದಲ್ಲಿ ಓರ್ವ ಹೆಣ್ಣು! ರಂಭೆಯೋ? ಊರ್ವಶಿಯೋ? ಮೇನಕೆಯೋ? ತಿಲೋತ್ತಮೆಯೋ? ಆಹಾ! ನನ್ನ ಕಡೆಯೇ ಬರುತ್ತಿರುವಳು. (ಸ್ವಲ್ಪ ತಡೆದು) ಇವಳು ಯಾರಾಗಿರಬಹುದು? ಓಹೋ, ಸುಂದರಿ ನೀನು ಯಾರು?

ಮೋಹಿನಿ: ನನ್ನ ಹೆಸರು ಮದ್ಯ ಮೋಹಿನಿ ಅಲ್ಲವೆ ಸುಂದರಾಂಗ.

ಭಸ್ಮಾಸುರ: ಅಹಾ! ಹೆಸರಿಗೆ ತಕ್ಕ ಸುಂದರಿಯೇ ಆಗಿರುವೆ. ಆದರೆ ನೀನು ಈ ಜಾಗಕ್ಕೆ ಬರಲು ಕಾರಣ?

ಮೋಹಿನಿ: ನಿನ್ನ ಲಾವಣ್ಯ ಕಂಡು, ನಿನ್ನ ಬಯಸಿ; ಹಿಂದೆ ಹಿಂದೆ ಓಡೋಡಿ ಬಂದೆ ಸುಂದರ.

ಭಸ್ಮಾಸುರ: ಅಹಾ! ಅಹಾ! ಸುಂದರಿ, ನನ್ನನ್ನು ಮದುವೆಯಾಗುವೆಯಾ

ಮೋಹಿನಿ: ನನ್ನದೊಂದು ಕೋರಿಕೆ ಇದೆ ಸುಂದರಾ.

ಭಸ್ಮಾಸುರ: ಅಹಾ! ಅದೆಂತಾ ಕೋರಿಕೆ?

ಮೋಹಿನಿ: ನನ್ನಂತೆ ನಾಟ್ಯವಾಡಿ ನಂತರ ಲಗ್ನ ಆಗು ಸುಂದರಾ.

| | |
|---|---|
| ಭಸ್ಮಾಸುರ: | ಅದೇನು ಮಹಾ! ಆಗಲೀ ಸುಂದರಿ. |
| ಮೋಹಿನಿ: | ನನ್ನಂತೆ ನೀನು ಮಾಡಬೇಕು ಸುಂದರಾ. |
| ಭಸ್ಮಾಸುರ: | ಅಹಾ! ಅದಕ್ಕೇನು; ಆಗಲಿ ಸುಂದರಿ, ಅಗತ್ಯವಾಗಿ. (ಇಬ್ಬರೂ ನಾಟ್ಯ ಮಾಡುವರು) |
| ಮೋಹಿನಿ: | ಸುಗುಣಾಕರ ಬಾ ಸುಂದರಾ<br>ಭಾವ ಬಾಂದಳ ಶಂಕಿತ ಸುಂದರ<br>ಸುಗುಣಾಕರ ಬಾ ಶಂಕಿತ ಸುಂದರಾ |
| ಭಸ್ಮಾಸುರ: | ಸುಗುಣಾಕರಿ ಬಾ ಸುಂದರೀ<br>ಹಾವ ಭಾವವನು ನರ್ತನ ಸಾಗಿಸಿ<br>ಕರಗಳು ತೋರಿಸಿ ಬೆರಳನು ನಟಿಸು<br>ನಾಟ್ಯದ ನರ್ತನ ಕುಮಿಸುತ ತಣಿಸು<br>ಕಾಲು ಗೆಜ್ಜೆಯ ಘಲಘಲ ಘಣಿಸು. |
| ಮೋಹಿನಿ: | ಸುಗುಣಾಕರ ಬಾ ಸುಂದರ<br>ಮೋಹನ ಮಿಲನದ ಮಧು ಸಂಧಾನ<br>ಮದನನ ಮಿಲನದ ಅಮೃತಪಾನ<br>ತಕಧಿಮಿ ತಕಝುಣತಕ<br>ಝುಣ ಝುಣ ಝುಣ ನಾದವ ತುಂಬಿ<br>ಸುಗುಣಾಕರ ಬಾ ಸುಂದರ ॥<br>ತಕಧಿಮಿ ತಕಝುಣ, ತಕಧಿಮಿ ತಕಝುಣ |

ಮೋಹಿನಿ ನೃತ್ಯ ಮಾಡುತ್ತಾ ಎರಡೂ ಕೈಗಳನ್ನು ತನ್ನ ತಲೆಯ ಮೋಲಿಟ್ಟುಕೊಳ್ಳುವಳು. ಇವಳಂತೆಯೇ ನಟಿಸಿದ ಭಸ್ಮಾಸುರ ತನ್ನ ಕೈಗಿಂದಲೇ ಸುಟ್ಟು ಬೂದಿಯಾಗುವನು.

**ಚಾಪೆ ಹೆಣೆಯುವುದು :** ಒಂದು ಕಲೆ ಹೆಣ್ಣು ಮಕ್ಕಳು ತಮ್ಮ ಕಲೆಗಳಾದ ಬುರ್ರಕಥೆ ಗಂಗಮ್ಮ, ಗೌರಮ್ಮ, ಮತ್ತು ಸರ್ವಜ್ಞನ ಹಾಡುಗಳನ್ನು ಹಾಡುವುದು ಜೊತೆಯಲ್ಲಿ ಚಾಪೆಹೆಣೆಯುವುದು ಅವುಗಳನ್ನು ಮಾರಿ ದವಸ ಧಾನ್ಯಗಳನ್ನು ತರುವುದು. ಚಾಪೆ ಹೆಣೆವುದು ಒಂದು ಕಲೆಯು ಹೌದು ವೃತ್ತಿಯು ಹೌದು.

**ಚಾಪೆ ಹಾಡು**

ಈಜಲು ರೆಂಬೆ-ಕೊಂಬೆ ಕೊಯಲು ಬಾರೆ,
ದೋಟಿ ಕುಡುಕೋಲಿನಿಂದ
ದೊಡ್ಡ ದೊಡ್ಡ ಹೊರೆಗಳನ್ನು ಕಟ್ಕೋಣ ಬಾರೆ,
ಗುಟ್ಟಾಗಿ ಕೊಯ್ಕೋಣ ಬಾರೆ
ಈಡಿಗೌಡ ನೋಡಿದರೆ ನಮ್ಮನ್ನು ಹೊಡೆಯುವನು

ಜಪ್, ಜಪ್, ಶಬ್ದ ಬರದಂಗೆ, ಕೊಯ್ಕೋಣಬಾರೆ,
ಒಳ್ಳೆ ಒಳ್ಳೆ ರಂಬೆ ಆರಿಸೋಣ ಬಾರೆ
ಅವುಗಳನ್ನು ಸೀಳಿ, ಚಾಪೆ ಹೆಣೆಯ್ಕೋಣಬಾರೆ
ಹೆಣೆದ ಚಾಪೆ ಮಾರೋಣ ಬಾರೆ
ಸಂಜೆ ಉಟಕ್ಕೆ ದವಸ ಧಾನ್ಯ ತರೋಣ ಬಾರೇ

ಸಿದ್ಧರವೇಷದಲ್ಲಿ ಆಟ ತೋರಿಸುವಾಗ
ನೋಡುಗರು ಜೋಳಿಗೆಯಿಂದ
ಎಲ್ಲ ಹೊರತೆಗೆದು ನಿನ್ನ
ಆಟ ತೋರಿಸು ಎಂದಾಗ ಬಳಸುವ ಸಾಹಿತ್ಯ
ಬೊಲಾ ಶಿವ ಶಿವ- ಹರಾಹರಾ.....,
ಮಹಾದೇವ ಚೆನ್ನಬಸವ ಎನ್ನುತ್ತಾ
ಮೊಸಳೆಯಾಟ ನೀರಾಗಂತ
ಅಮ್ಮರ ಆಟ ಗಡಿಗ್ಯಾಗಂತ
ಹಾವಿನ ಆಟ ಹುತ್ತ್ಯಾಗಂತ
ಮಂಗನಾಟ ಗಿಡದಾಗಂತ
ಸಿದ್ಧಾರಾಟ ಜೋಳಿಗ್ಯಾಗಂತ
ಹಟ್ ಗರ್, ಗರ್, ಗರ್, ಗರ್
ಇವೆಲ್ಲ ಖರೆ, ಖರೆ ಆದ್ರ
ನಾವೆಲ್ಲ ಇಲ್ಯಾಕ ಬರುತ್ತಿದ್ವಿ
ಎಲ್ಲಾ ಖಾಲಿ ನೋಡಾಕ್ಕೊಂದು ಸಿದ್ಧಾರಾಟ ಚಮತ್ಕಾರಾಟ
ಆಗಾಟ, ಓಗಾಟ ಒಮ್ಮೆ ಲಗಾಟ
ಶಿವ... ಶಿವ.... ಬೋಲಾ.... ಕ್ಯೂಯಿಂ...
ಬೋಲಾ ಕ್ಯೂಯಿಂ ಕ್ಯೂಯಿ....

ರಾಮಶಾಸ್ತ್ರ (ಕೊಂಡಮಾಮವೇಷಂ) ಸಾಹಿತ್ಯ
ತಲೆಗೆ ಜುಟ್ಟು ಆ ಜುಟ್ಟಿಗೆ ಬಣ್ಣದ ಕೋಳಿಯ ಅಥವಾ ಗಿಡುಗದ
ಪುಕ್ಕ ಇಲ್ಲವೆ ನವಿಲಿನ ಗರಿ ಮತ್ತು ಮುಳ್ಳಂದಿಯ
ಚಿತ್ತಾರದ ಮುಳ್ಳನ್ನು ಶೃಂಗಾರಿಸಿ ನಡಕ್ಕೆ ವಿಶೇಷ ಶೈಲಿಯ
ಬಣ್ಣದ ಲುಂಗಿ ಸುತ್ತಿ, ಏಕನಾದ, ಚಿಟಿಗೆ, ಪುಸ್ತಕ ಹಿಡಿದು
ಹೇಳುವ ಸಾಹಿತ್ಯ ಎಂತವರನ್ನು ಮೋಡಿ ಮಾಡದೆ ಇರಲಾದು
ರಾಮನಾಥಡಾ ಗುರುನಾಥನ್ನ ಗುರುನಾಥನ್ನ
ರಾಮನಾಥಡಾ ರಾ ರಾ ಜೀವಿ

ಹುಟ್ಟಿದಗಳಿಗೆ ರೈಟ್ ಎಂಟು
ಇಟ್ಟ ಹೆಸರು ರೈಟ್‌ಉಂಟು ಬಾಬುನಿಂದು
ಪುಟ್ಟಿನ ಪೇರು ದೇವ್ರುಗಣಮು
ಪೆರಿಗಿನ್ನಾ ಪೆರು ರಾಹು ಗಣಮು ಬಾಬುನೀದಿ
ಹುಟ್ಟಿದ ಒಂದು ದೊಡ್ಡ ಸಂಸಾರ
ಮಲ್ಲಿಕಾರ್ಜುಡು ಯಗಡುಂಡಾವು
ಸಂತಾನನ್ನ, ಮಸ್ತಾನನ್ನ ಯಾಡುಂಡಾವು
ಚಿಂಚೆಟ್ಟಿಕಿ ಶಿಂತಲು ಕಟ್ಟಿ
ಯಾಪಚೆಟ್ಟಿಕಿ ತಾಳಿಲು ಕಟ್ಟಿ
ಯಗಡುಂಡಾವು ರಾಮಚಂದ್ರುಡಾ ಯಗಡುಂಡಾವು
ಮನುಸುಲಾ ಪ್ರಶ್ನೆ ಆಡುಗುಲಾ ಮಾಮ
ಮೀ ಕೇಮ ಕಾವಲಿ ಅಡುಗುರಾ ಮಾಮ
ರೈಟ್ ಬಂದರೆ ರೈಟ್ ಅನ್ನು
ಡೊಂಕು ಬಂದರೆ ಡೊಂಕು ಅನ್ನು
ಅರ್ಥಮಾಡಿಕೇಳು ಬಾಬು
ಮಾಡೋ ಲೆಕ್ಕ ಕೂಡೋ ಲೆಕ್ಕ
ಮುಂದೆ ಮಾಡುವ ವಿಚರಾ ಲೆಕ್ಕ ಕೇಳು ಬಾಬು
ಒಂದು ವರ್ಷದ ಮೂರು ತಿಂಗಳು ಆಯಿತು ಬಾಬು
ಮನದಲಿ ಮಾಡಿದ ಲೆಕ್ಕಮು ನಿನಗೆ ರೈಟುಂ ಇಲ್ಲ
ಮುಂದ ಬರುವ ದೀಪಾವಳಿ ಬೆಳಿಗ್ಗೆ
ಮಾಡೋ ಲೆಕ್ಕ ಕೂಡೊ ಲೆಕ್ಕ
ನಡೆಸುವ ಉದ್ಯೋಗಮು
ಮುಂದೆ ನಿನ್ನಂತೆ ಜಯಮು ಉಂಟು ಬಾಬು
ಮನೋಲೆಕ್ಕದಲಿ ಮಧ್ಯ ನಿಲ್ಲುವ ಮುಂದೆ ಹೋಗುವ ದಾರಿ ಒಳಗೆ
ಅಡ್ಡ ವಿರೋಧ ನಿನಗು ಮಾತ್ರ ಜಾಸ್ತಿ ಉಂಟು ಬಾಬು
ಇಲ್ಲಿಗೆ ಒಂದು ವರ್ಷ ಮೂರು ತಿಂಗಳು ದಿನದಲಿ ನಿನಗೆ
ವೈರಿಕಣ್ಣು ಮಕಸತ್ತು ನುಡಿ ನಿನಗೆ
ಕೆಟ್ಟದಾಗಿ ನಿಂತ್ಯತೆ ಬಾಬು
ಮನಿಯೊಳಕೆ ಒಂದಕ್ಕೊಂದು ಒಕ್ಕಟ್ಟಿಲ್ಲ
ಮಾಡೊಲೆಕ್ಕ ಸಮಕಟ್ಟಿಲ್ಲ
ಹೋಗೋ ಲೈನು ರೈಟುಂ ಇಲ್ಲ

ಉದ್ಯೋಗ ಮಾರ್ಗ ಕಟ್ಟಾಗಿ ನಡೆಯುತ್ತಾ ಉಂಟು ಮಾಮಾ ನಿನಗೆ
ಈಗ ಮುಂದೆ ಮಾಡೋಂತ ಲೆಕ್ಕದ ಒಳಗೆ
ಇನ್ನು ಒಂದು ಜಾಗ ಪ್ರವೇಶ ಮಾಡಬೇಕು ಅನ್ನೋದು ಮಾತ್ರ
ಮನಸ್ಸೀಲಿ ಇಟ್ಬೇಯ ಮಾಮ
ಎರಡನೆಯ ಒಂದು ಲಕ್ಷೀ ವಿಚಾರ
ಕೆಲಸ ಮಾಡ್ಬೇಕು ಅನ್ನೋದು ವೇಚನೆ ಉಂಟು
ಮಧ್ಯ ಒಂದು ಅಧಿಕಾರ ಜನಮು ಸಹಾಯಮು ಉಂಟು ಮಾಮ
ಮುಂದೆ ಒಂದು ನಾಲ್ಕು ಜನಕೆ ಅಧಿಕಾರವಾಗಿ
ನಡೆಯೋ ಉದ್ಯೋಗ ನಿನಗೆ ಮಾತ್ರ ಖಂಡಿತಾ ಉಂಟು ಮಾಮ
ನಾಳೆ ಬರುವಂಥ ದೀಪಾವಳಿ ಕಳೆದ ಮ್ಯೆಮೇಲೆ
ಮಾಡೊ ಕೆಲ್ಲ ನಿನ್ನಂತೆ ಮುಂದು
ಜಯವುಂಟು ರಾಮ ನಿನಗೆ....ಕುರ್‌ರ್..... ಮಾಮ
ಪರ ಹರ ಸೀತಮ್ಮ ಅಯೋಜ್ಯರಾಮ
ಬಾಲಿಂತ ವೆಯ್ಯಾವು ಬಾಲಲು ಕನ್ನಾವು
ಗಾತಲ್ಲಿ ಸೀತಮ್ಮ, ಗಾಯಮ್ಮವಾರು
ಪಾಲ್ದಾಗೆ ನಿಬಾಲ ಪೆರ್ನತ್ತಾಬಾಲ
ನಿನೇಷ್ಟೋ ಕುಂಕುಮನಿ ಸುಮು ದಂಡ
ತಟ್ಟಾಕುಗೊಳ್ಳಲೋ ಚಿಟ್ಲಿಗಟ್ಟಾಲು
ಆ ಮಾಟ ಇನ್ನಾಡು ಅನ್ನ ರಾಮುಡು
ವಲ ವಲ ಸಿತಮ್ಮ ವಲ ಪೋತದಮ್ಮ
ಪಟ್ಟಮ್ಮ ಓ ತಲ್ಲಿ ಬಾಲಿಂತರಾಲ
ಓ ಎರ್ರ ಸೀತಮ್ಮ ಓ ಎಡ್ಡಿ ಸೀತಮ್ಮ
ಅನ್ನಂತ ಮಾತ್ತಾನ ಆ ತಲ್ಲಿ ಸೀತ
ಮಾಯಬಾಲುಸೀಚೇಸ್ತಿ ಮನ್ನಿಂಚವಮ್ಮ
ಅಯೋಜ್ಯ ಪಟ್ನಾನಿ ಅತಿಪೊತುಲಮ್ಮ
ಮುತ್ತೈದು ಗಾಜುಲು ವಸ್ತ್ರದಿ ಬಲಮು
ಎಲ್ಲಿ ಪೋದಮು ಮೀಮು ತಲ್ಲಿ ಸೀತಮ್ಮ
ಎಮಮ್ಮ ವಗಾಲು ಎಡ್ಡಿ ಮೃಗಾಲು
ಹಾದಿಸೀನು ಅಡವಿಲೋ ಹೊದಿಲಿ ಹೊದಿಲ ಪೆಟ್ಟೊಸ್ತಿ
ಪಂಡುಂಡಿ ಬಾಲುಡು ಪಲ್ಕಂತಲೇಡು
ಬೊಂಮ್ಮಕು ಪ್ರಾಣಾಲು ಭೋಸಿ ನಿಲ್ಪಂಡು
ಎದುಕು ಎದುಕು ಎರ್ರಿನಾ ಬಾಲ

ಒಗಟುಗಳು

೧. ಹತ್ತು ಮಂದಿ ಬೇಟೆಗೋಗಿ ಒಂದು ಪ್ರಾಣಿಹಿಡಿದು ತಂದರು ಒಬ್ಬರು ಒಂದೊಂದು ಕಾಲು ತೆಗೆದುಕೊಂಡರು - ಏಡಿ

೨. ಚಿಟುಕು ಚಿಟುಕುಲಾಡೆ- ಗೊಡೆಯ ಮೇಲೆ ಕಿಲಾಡಿ - ಬೆಕ್ಕು

೩. ಬಟ್ಟಲು ತುಂಬ ಗುಗ್ಗಿರಿ ನಿಮ್ಮಪ್ಪ ತಿನ್ನಲಿಲ್ಲ ನಮ್ಅಪ್ಪ ತಿನ್ನಲಿಲ್ಲ ಮನೆಗೆ ಬಂದ ಬೀಗ ತಿನ್ನಲಿಲ್ಲ - ಉಣ್ಣೆ

೪. ಬುತ್ತಿ ತಿನ್ನುವರು ಬಟ್ಟೆ ಬಿಸಾಕುವರು - ಬಾಳೆಹಣ್ಣು

೫. ಅಯ್ಯಪ್ಪ ಕುದರೆಗೆ ಮೈಯಲ್ಲಿ ಕಣ್ಣು - ಮಂಚ (ನೂಲಿನ)

೬. ಭಯಲಿನ ಮರ ಬಂಗಾರು ಕೊಂಬೆ ಎಷ್ಟು ಕಡೆದರು ತುಂಡೇ ಇಲ್ಲ - ನೆರಳು

೮. ತಿರುಗಿ ತಿರುಗಿ ಜಲ್ಲಾಡಿ ಬಾಯಲ್ಲಿ ಬಲು ನುಡಿ ನಿನ್ನಿಂದ ಮನೆಯಲಿ ಬಡಿ ಬಡಿ - ಬೀಸುಕಲ್ಲು

೯. ಬಾವಿಯಲ್ಲಿ ಬಂಗಾರು ಬಿಲ್ಲೆ - ಆಮೆ

೧೦. ಸತ್ತವನು ಸಂತೆಗೋದ - ಮೀನು

೧೧. ತಗ್ಗಿನ ಭೂತ ಎದೆದ್ದು ನೊಡುತಿದ್ದ - ಚೆಂಕಿ

೧೨. ಪಟ್ಟಿ ಪಟ್ಟಿ ಕುಡಿಕೆ ಬೊನಾಲು ಕುಡಿಕೆ ಮಲ್ಲಗೆ ಇಳಿಸು ಬೆಲ್ಲದ ಕುಡಿಕೆ - ಸಿತಾಫಲ

ಬುಡ್ಗ ಜಂಗಮರ ಚುಟುಕು ಒಗಟುಗಳು

೧. ಆಲೇಟಿ ಸಂಜನ್ನ ಮಗಳು ಆದೃಷ್ಟವಂತೆ ಬಾಯಿತೆರೆದರೆ ಜೊಗುಳ ಹಾಡು ಕಾಲು ಕೆರೆದರೆ ರಂಗೋಲಿ ಆಗುವುದು - ಕೋಳಿ (ಯಾಟೆ)

೨. ಸರಸರ ಕತ್ತಿಗಳು ನುಣಿಪಿನ ಕತ್ತಿಗಳು ಕೆಳಗೆ ಹಾಸಿದರೆ ಕಲಾಕೃತಿಯಾಗುತ್ತದೆ- ಈಚಲು ಚಾಪೆ

೩. ಒಳಗಿನ ಸ್ವರ ಮೇಲಿನ ಹಲ್ಲು ರಾಗಹಾಡಿದರೆ ರಾಜರು ಮೆಚ್ಚುವರು - ಹಾರ್ಮೋನಿಯಂ

೪. ಎದೆಗೆ ಒತ್ತಿಕೋ ಎಗಲಿಗೆ ಹಾಕಿಕೋ ಅಡಹಿಡಿದು ಗಡ್ಡಹಿಡಿ ರಾಗ ಹಾಡುತ್ತದೆ - ತಾಂಬುರಿ

೫. ಹೊಟ್ಟೆಯಲ್ಲಿ ಮೂರು ಕರಳು ಕೈ ಮೀಟಿದರೆ ಕೊಂಯಂ ಎಂದತ್ತದೆ - ತಾಂಬುರಿ ತಂತಿ

೬. ಬೆರಳಿಗೆ ಸುತ್ತಿಕೊಂಡು ತಲೆಗೆ ಅಂಟಿಕೊಂಡು ಅಲ್ಲಾಡಿಸಿದರೆ ಒದರುತವೆ - ಚಿಟಿಕೆ, ಅಂದೆಲು

ಗಾದೆಮಾತು

೧. ತಲೆ ಸುಡದೇ ಜೋಳಿಗೆ ತುಂಬದು

೨. ಒಂದು ದಿನದ ವೇಷಕ್ಕೆ ಮೀಸೆ ಬೋಳಾಯಿತು,

೩. ಮನೆ ಸುಟ್ಟಿದೆ ಜಂಗಮಯ್ಯ ಅಂದರೆ ನನ್ನ ಜೋಳಿಗೆ ನನ್ನತ್ರ ಸುರಕ್ಷೀತ

೪. ಬುಡ್ಗಜಂಗಮರಿಗೆ ಮಕ್ಕಳು ಹುಟ್ಟಿದರೆ ಊರಿನವರು ಗೋಳಾಡುತ್ತಾರಂತೆ.

೫. ಏಡಿ ಕೊಂಡಿಗೆ ಏಳುನೂರು ದಂಢ.

೬. ಸಾಸಿವೇ ಕಾಳಿನಷ್ಟು ಅಯುಷ್ಯವಿದ್ದರೆ ಕುಂಬಳಕಾಯಿ ಸೈತಾನನು ಒಡುತ್ತೆ.

೭. ದಕ್ಕುವವರಿಗೆ ವಿನಯದಿಂದ ಇರಬೇಕು.

೮. ಅಯ್ಯನ ನೋಡಿದರೆ ಆಕಾರ ಲೆಖ್ಖನೋಡಿದರೆ ವಿಕಾರ

೯. ಅಯ್ಯ ದಾಸರಿಗೆ ನೀಡಿದರೆ ಅಮ್ಮ ಜಂಗಮಂಗೆ ನೀಡುವಳು

೧೦. ಅರವತ್ತು ಮೈಲುಧಾರಿ ಹೋಗಿ ಹರಿಕಥೆ ಕೇಳಬೇಕು ತೊಂಬತ್ತು ಮೈಲು ಹೋಗಿ ತೊಗಲು ಗೊಂಬೆ ಆಟ ನೋಡಬೇಕು.

೧೧. ಆಟ ಆಡಲಿಕ್ಕಾಗದವ ಮದ್ದಲೀ ಸರಿಯಾಗಿ ಭಾರಿ ಸಿಲ್ಲಾ ಎಂದನಂತೆ

೧೨. ಆಕಳು ಕಾದವನೆ ಅರ್ಜುನಾ.

೧೩. ಕಂಜಿಮೆಸ್ಕೆ ಕಾರಿಗಾಡು - ದತ್ತು ಪೆಟ್ಟದಾರಿಗಾಡುತಿ.

೧೪. ಕುಲಸ್ಥರ ಕಣ್ಣು ಹದ್ದಿನ ಕಣ್ಣು

೧೫. ಕುಲದ ಹಾಳ ಕುತ್ತಿಗೆವರಿಗೆ - ಸಮುದ್ರಹಾಳು ಮಣಕಾಲುವರಿಗೆ

೧೬. ಕುಲಬಿಟ್ಟ ಪಕ್ಷೀ ಇಲ್ಲಾ - ವನಬಿಟ್ಟ ಕೋತಿ ಇಲ್ಲಾ.

೧೭. ಕುಂತರೆ ಬುಡ್ಗಜಂಗಮ - ಎದ್ದರೆ ಸನ್ಯಾಸಿಗಳು.

೧೮. ಹೊಸದಾಗಿ ಸಿರಿ ಬಂದರೆ ಅರ್ಧರಾತ್ರಿ ಕೊಡೆ ಹಿಡಿದನಂತೆ

೧೯. ಕಾಸು ಹಡದವ್ವ - ಹಗಳು ಸೊದರಅತ್ತೆ.

೨೦. ಗೂಬೆಗೆ ಹಿರಿತನ ಕೊಟ್ಟರೆ - ಗುಬ್ಬಕ್ಕಿಗಳನ್ನು ತಿಂದಂತೆ.

೨೧. ಜಂಗಮಯ್ಯನ ಹಿಂದೆ ಜಾತಿ ಬರುವದಿಲ್ಲ.

೨೨. ನ್ಯಾಯ ಹೇಳು ಧರ್ಮರಾಜ ಅಂದರೆ - ಆಕಳುಕರು ನನ್ನದೇ ಅಂದ.

೨೩. ಕನ್ಯ ಇದ್ದಲ್ಲಿ ಹಣವಿದ್ದಲ್ಲಿ ಹತ್ತುಮಂದಿ ಬರುವರು.

೨೪. ತಪ್ಪಿಸಿಕೊಂಡ ಮೊಲ ದೊಡ್ಡದು.

೨೫. ಪಾಚಿಹಲ್ಲಿನವ ಕೂಡಿಟ್ಟ ಹಣ - ಬಂಗಾರು ಹಲ್ಲಿನವ ತಿಂದಾಕಿದಾ.

೨೬. ಬೇರೆಯವರ ಸ್ವತ್ತು ಇಟ್ಟುಕೊಂಡು - ಗಂಡನಪಾದ ಮುಗಿದಳಂತೆ

ವಾಕ್ಯಗಳು

೧. ಮಂಕಾಡು ಕಾರ್ಕೋಟುಡು ಕರ್ಕುವಾಂಲಂಟಿಂಟೆ ನಟ್ಟೆಯ್ಯ ವಟ್ಟಿನಾಗನ.
*ತೋಟದ ಯಜಮಾನ ಕೋಪಿಷ್ಟ, ನಾಯಿಗಳು ಕೆತ್ತ ಬೇಡ*

೨. ಸಿದಾನಂ ಪುನ್ನಂಮೆಸ್ಕಿಂಡು
*ಹೆಂಡ ಬಹಳ ಕುಡಿದವನೆ*

೩. ಜಿವ್ವಾಲು ಮಾರ್ಪಿಲ್ಲಿತೆ ಐದು ತೆಲ್ಲಾಲು ವಚ್ಚಿನದಿ.
*ಕಾಳು ಮಾರಿದರೆ ಐದು ರೂಪಾಯಿ ಬಂದಿದೆ*

೪. ಮಿಡ್ಡಗಾಲ್ಲು ಕರ್ರಟ್ಲ ಜಾನಿ ಮಿಟಪಿಲ್ಲು ಅಂಡ್ಕ ಪೋತರು
*ಕಳ್ಳರು ರಾತ್ರಿ ಬಂದು ಅಕ್ಕಿತೆಗೆದುಕೊಂಡು ಹೋಗುವರು*

೫. ಕುಚ್ಚುಗಾಡು ಬಂದಿಚ್ಚುಕೋನಿ ಗಿಂಜಲು ನಾಪ್ಕುಂಟಿಡು.
*ಪೋಲಿಸು ಹಿಡ್ಕಂಡು ಹಣ ತೆಗೆದು ಕೊಳ್ಳುವನು*

೬. ನೆಟ್ಟಿ ಶಾಂತಿ ನೆಟ್ಟು ಶಾವಿಡಿ ಏಗಿಸ್ತದಿ
*ಮನೆಯಾಕಿ ಒಳ್ಳೆ ಅನ್ನ ನೀಡುವಳು*

೭. ಆ ಗೊಂಟಿಗಾಡು ಗೊಟ್ಟೆಪುನ್ಕಂ
*ಆಶೆಟ್ಟಿ ಬಹಳ ಕೆಟ್ಟವನು*

೮. ಪಚ್ಚಿಗಾಲ್ಲು ಮಂಕಾನ್ನಿ ದೈಪಿ, ಕರಿಂಪಿ, ಕಲ್ಪಾಂ ಗಟ್ಟಿ ಬಾಯಲು ಪುನ್ಕೆಂ ಐಕಂ ಜೇಸಿಂಡ್ರು, ಕುಚ್ಚುಗಾಳ್ಳು ಜಾನುಸ್ತುರು
*ಕಳ್ಳರು ಒಬ್ಬನ್ನು ಹೊಡೆದು ಸಾಯಿಸಿ ಕಟ್ಟಿಬಾಯಿಯಲ್ಲಿ ಹಾಕಿದ್ದಾರೆ. ಪೋಲಿಸರು ಬರುತಿದ್ದಾರೆ.*

ಭಾಷೆ

ಬುಡ್ಗ ಬುಡಕಟ್ಟು ಭಾಷೆಯ ಪದಗಳ ಅಂತ್ಯದಲ್ಲಿ 'ಳ್ಳು' ಎನ್ನುವ ಪ್ರತ್ಯಯ ಸೇರಿದರೆ ಅವೆಲ್ಲ ಬಹುವಚನ ರೂಪ ಪಡೆಯುತ್ತವೆ. ಜಿಡ್ನಡು ಎನ್ನುವ ಪದ ಬಹುವಚನವನ್ನೂ ಪ್ರತಿನಿಧಿಸುತ್ತದೆ. ಇವರಲ್ಲಿಯ ಮರಗು ಭಾಷೆ ಸಮುದಾಯವನ್ನು ಗುರುತಿಸುವುದಕ್ಕೆ ಸಹಕಾರಿಯಾಗುತ್ತದೆ. ಇದು ದಿನೆ ದಿನೆ ಮರೆಯಾಗುತ್ತಿದೆ.

| ಮರಗು | ಕನ್ನಡ |
|---|---|
| ಈಕಿನಗಾಡು | ಹೊಲೆಯ |
| ಎಗ್ಗಾಡು | ಸಮಾಜದಲ್ಲಿನ ದೊಡ್ಡ ವ್ಯಕ್ತಿ |
| ಎಲಕೋಡು | ಗೌಡ |
| ಕಡ್ಡಿಗಾಡು | ಈಡಿಗ |
| ಕೀನಗಾಡು | ಮಾದಿಗ |
| ಕೆಂದಲಗಾಡು | ಆಗಸ |
| ಕೊರಗಾಡು | ಹಜಾಮ |
| ಗೊಂಟಿಗಾಡು | ಕೋಮಟಿ ಅಥವಾ ಶೆಟ್ಟಿ |
| ಜಿಡ್ನುಡು | ಕುರುಬ |
| ತಾಟಿಗಾಡು | ಬ್ರಾಹ್ಮಣ ಅಥವಾ ಶಾನುಭೋಗ |
| ಪಿಟಿಗ್ಗಾಡು | ಲಿಂಗಾಯಿತ |
| ಒಡ್ಡೇರು ಗಾಡು | ವಡ್ಡ,ಬೋವಿ |
| ಮೊಬ್ಬಗಾಡು | ನಾಯಕ,ಬೇಡ |

ಮಂಕಾಡು ಕುಲಸ್ಥನಲ್ಲದವನನ್ನು ಕರೆಯುವ ರೀತಿ. ಬಹುವಚನ ರೂಪ ಮಂಕಾಳ್ಳು, ಕಾರಿಗಾಡು ಕಲುಸ್ಥನನ್ನು ಕರೆಯುವ ರೀತಿ. ಬಹುವಚನ ರೂಪ ಕಾರಿಗ್ಗಾಳ್ಳು, ಶಾಂತಲು,

ಅಥವಾ ಶ್ಯಾರಾಲು ಅಥವಾ ಮಸಿಕೋಟ್ಲು ಹೆಂಗಸರು. ಬಳ್ಳಾರಿ ಕಡೆ ಹೆಂಗಸರನ್ನು ಶಾಂತಲು ಎಂದು, ರಾಯಚೂರು ಕಡೆ ಶ್ಯಾರಾಲು ಎಂದು, ಧಾರವಾಡದ ಕಡೆ ಮಸಿಕೋಟ್ಲು ಶಾಂತಲು ಎಂದು ಕರೆಯುತ್ತಾರೆ. ಹೆಂಗರಿಗೆ ಗೌರವಕೊಡುವಂಥ ಸಂದರ್ಭದಲ್ಲಿ ಹೆಂಗಸರನ್ನು ಶಾಂತಲು ಎಂದು ಕರೆಯುತ್ತಾರೆ. ಭಯ ಅಥವಾ ಆಶ್ಚರ್ಯ ಪಡುವ ಸಂದರ್ಭದಲ್ಲಿ ಹೆಂಗಸರನ್ನು ಶ್ಯಾರಾಲು ಅಥವಾ ಮಸಿಕೋಟ್ಲು ಎಂದು ಕರೆಯುತ್ತಾರೆ. ಹತ್ತು ಅಥವಾ ಹನ್ನೆರಡು ವರ್ಷದ ಹೆಣ್ಣು ಹುಡುಗಿಯನ್ನು ಶಿರಪಕೋಟಿ ಎಂದು, ಇದೇ ವಯಸ್ಸಿಯನ ಗಂಡು ಹುಡುಗ ನನ್ನು ಶಿರಪಗಾಡು ಎಂದು ಎಳೇ ಮಕ್ಕಳನ್ನು ಪಿಂಕಿಲು ಎಂದು ಕರೆಯುತ್ತಾರೆ.

| ಮರಗು | ಕನ್ನಡ |
|---|---|
| ಮತ್ತೆಲು | ಮನೆಗಳು |
| ಸೆತ್ತಾಲು | ಹೋಲಗಳು |
| ಬಡಸ್ಯಾಲು | ದನಗಳು |
| ಮ್ಯಾಸಾಲು | ಕುರಿ, ಮೇಕೆ |
| ಕೊಕ್ಕಡಾಲು | ಕೋಳಿಗಳು |
| ಕೈಕಲು | ನಾಯಿಗಳು |
| ಕಾಶಿಗ್ಯಾಲು | ಬೆಕ್ಕುಗಳು |

ಇಲ್ಲಿ ದ್ರಾವಿಡ ಪದವಾದ ಕುಕ್ಕುಟ ಎನ್ನುವುದು ಕೊಕ್ಕಡ ಎಂದು, ತೆಲುಗು ಪದವಾದ ಮ್ಯಾಕ ಎನ್ನುವುದು ಮ್ಯಾಸ ಆಗಿರುವುದನ್ನು ಗಮನಿಸಬಹು. ಜಿವ್ವಟಾಲು ಎಲ್ಲ ಕಾಳುಗಳು

| ಮರಗು | ಕನ್ನಡ |
|---|---|
| ಮಿಟುಪಿಳ್ಳು | ಅಕ್ಕಿ |
| ಶ್ಯಾವುಡಿ | ಅನ್ನ |
| ಶ್ಯಾಕಂ | ಸಾರು. |

| ಮರಗು, ಬುಡ್ಗ | | ಕನ್ನಡ | ಮರಗು, ಬುಡ್ಗ | | ಕನ್ನಡ |
|---|---|---|---|---|---|
| ಅಲಿಗೆ ಪಂತು | - | ಬಾಲಸಂತೋಷಿ | ಗಿಂಜಾಂ | - | ರೂಪಾಯಿ. |
| ಇಗ್ಲಾಟಂ | - | ನಗುವದು | ಗೀತಾಟ್ಕಂ | - | ಹಳುವದು |
| ಉನ್ನಸಿಗಾಡು | - | ಇಲಿ | ಗುಯಂ | - | ಗುದಾ |
| ಎಂಟ್ಕಿ | - | ಮುಂಗೀಸ್ | ಗೂಸು | - | ಅವಮಾನ |
| ಒಲ್ತುಗಾಡು | - | ಬಿಕ್ಷುಕ | ಗೊಟ್ಯಾಂ | - | ಮುಕಳಿ |
| ಕಂಚಿಕದಾರಿ | - | ಶ್ರೀಮಂತ | ಜಿಡ್ಡಗಾಡು | - | ಕುರುಬ |
| ಕನ್ನದಾರಿ | - | ವೈದ್ಯ | ಜಿವಟ್ಯಾಲು | - | ಕಾಳು |
| ಕಬ್ಬಿ | - | ರಾಹಾಸ್ಯೆ | ತಾಟಗಾಡು | - | ಬ್ರಾಹ್ಮಣ |

| ಮರಗು, ಬುಡ್ಗ | | ಕನ್ನಡ | ಮರಗು, ಬುಡ್ಗ | | ಕನ್ನಡ |
|---|---|---|---|---|---|
| ಕರಿಂಪ್ರ | - | ಸಾಯಿಸು | ಕಿತ್ತಮಾಪ್ರ | - | ಸಾಯಿಸು |
| ಕರ್ಕುವಾಂ | - | ಮಾವಿನ ಕಾಯಿ | ಕುಚ್ಚುಗಾಡು | - | ಪೋಲಿಸು |
| ಕರ್ರ್ವಡಿ | - | ರಾತ್ರಿ | ಕುರಂಗಾಡು | - | ಆಮೇ |
| ಕಲ್ಲುಗಾಡು | - | ಅಕ್ಕಾಸಲಿಗ | ಕೆಂದಲುಗಾಡು | - | ಆಗಸ |
| ಕಸಿಂಪ್ರ | - | ಬೈಯುವದು | ಕೊರವಂಜಿಗಾಡು | - | ಕೊರವರು |
| ಕಾಜಲು | - | ಮೀನು | ಕೊಂಕಣಂ | - | ಪುರಶಾಂಗ |
| ಕಾರಿಗಾಡು | - | ಬುಡ್ಗಜಂಗಮ | ಕೈಕಾ | - | ನಾಯಿ |
| ಅಶ್ಕೋಟಿ | - | ಮಾಂಸ | ಮೀಡ್ಸಡು | - | ಕಳ್ಳ |
| ಇಕ್ರಕೋಟಿ | - | ಮರ ಗಿಡ | ಗಾಸ್ಟಂ | - | ಹುಲ್ಲು |
| ಊರುಗಾಶ್ಕಂ | - | ಊರುಬೇಕ್ಕು | ಗಿಜಿಗಾಡು | - | ಅಜಾಮ ಕ್ಷೌರಿಕ |
| ಜಂಗಾಶ್ಕಂ | - | ಅಡವಿಬೇಕ್ಕು | ಗೊಂಟಗಾಡು | - | ವೈಶ್ಯ ಶೆಟ್ಟಿ |
| ಎಲ್ಕೋಡು | - | ರೆಡ್ಡಿ | ಗೊಟ್ಟಿ | - | ಕೆಟ್ಟವನು |
| ಐಕೊಂಚೆಯ | - | ಬಚ್ಚಿಡು | ಚೆಕ್ರಕೋಟಿ | - | ರೊಟ್ಟಿ |
| ಒಲ್ತು | - | ಭೀಕ್ಷೇ | ಕಂಚಿಕ | - | ಹಣ |
| ಜಾನು | - | ಹೋಗು | ಮಶ್ಕೋಟಿ | - | ಹೆಂಗಸು |
| ಕಡ್ಡಿಗಾಡು | - | ಇಡೀಗಗೌಡ | ತುಕರಿಗಾಡು | - | ಕಟುಕ |
| ಕರ್ಕೋಟಿಗಾಡು | - | ಚೇಳು, ಏಡಿ | ದಾರಿಗಾಡು | - | ಮುಸ್ಲಿಂ ಪೋಲೀಸ್ |
| ಕಲ್ವಾಂ | - | ಕಲ್ಲು | ದೇಪ್ರ | - | ಬಡಿ |
| ಕಶಾದಂ | - | ಅಪಾಯ | ನರ್ಸಿಗಾಡು | - | ನರಿ |
| ಕಾಶ್ಕಂ | - | ದೆವ್ವ | ವರ್ರ್ಲು | - | ನೆಲ್ಲು |
| ಕೀನಗಾಡು | - | ಹರಿಜನ | ನಾಪ್ಕೋ | - | ತೆಗೆದುಕೋ |
| ಕುಮ್ಮಿಗಾಡು | - | ಕುಂಬಾರ | ನಟ್ಕೇ | - | ನೋಡು |
| ಕೆಂದ | - | ವಸ್ತ್ರ | ಪಂತು | - | ವೇಷಂ |
| ಕೊಕ್ಕಡಿಗಾಡು | - | ಕೋಳಿ | ಪಚಾಂ | - | ಈಚಲು ರೆಂಬೆ |
| ಕೊಡಿ | - | ತಪ್ಪು | ಪತ್ರಕೋಟೆ | - | ಕಲ್ಲು |
| ತೋಡ್ಡಿಗಾಡು | - | ಅಳಿಲು | ಪಾಣಸ್ಕಾಲು | - | ನೀರು |
| ದಬ್ಲಿಕೋಟಿ | - | ಗಂಜಿ | ಪಿಂಕೆಲು | - | ಮಕ್ಕಳು |
| ನಚ್ಕುಂಡು | - | ಇರು ತಡಿ | ಪೀಸಾಂ | - | ಬಲೆ |
| ನಾಗನ | - | ಬ್ಯಾಡ | ಪುಲ್ಲ | - | ಮುಚ್ಚಳಿಕೆ |
| ನಾಟಿಪಂತು | - | ಜೋತಿಷ್ಯ | ಪೊಟ್ಟಕೋಟಿ | - | ಹೊಟ್ಟೆ |

| ಮರಗು, ಬುಡ್ಗ | ಕನ್ನಡ | ಮರಗು, ಬುಡ್ಗ | ಕನ್ನಡ |
|---|---|---|---|
| ನಲಪು | - ಸಾರಾಯಿ | ಮಟ್ಟಗಾಡು | - ಗ್ರಾಮಾದೇವರು |
| ನೆಟ್ಟಿಗಾಡು | - ದೊರೆ | ಮತ್ತೆ | - ಮನೆ |
| ನೆಟ್ಟು | - ಬಂಗಾರ | ಮಬ್ಬಗಾಡು | - ಬ್ಯಾಡರ (ವಾಲ್ಮೀಕಿ) |
| ಪಾಷ್ಟಾಂ | - ಚಪ್ಪಲೀ | ಮೈತ | - ಊಟ |
| ಪುಚ್ಚಾಂ | - ಸ್ತ್ರಿಮಾರ್ಮಾಂಗ | ಮಿಟಪಿಳ್ಳು | - ಅಕ್ಕಿ |
| ಪುಲ್ಲಾಂ | - ಹುಣಸೆಹಣ್ಣು | ಮುಕ್ಕರಾಸಿಗಾಡು | - ಹಂದಿ |
| ಬಡ್ಡ್ಯಾಲೋಡು | - ದನಗಾಯಿ | ಮೆಂಡ್ಯಾಸ್ಕಂ | - ಮೊಂಡ |
| ಬಡ್ಡಾಂ | - ದನ | ಲಕ್ಕು | - ನಟ |
| ಬಿಡಂಗಾಡು | - ಡೊಮ್ಮರಿ(ದೊಂಬರು) | ವಲೆಂಗಾಡು | - ಉಡಾ |
| ಬೀರುಗಾಡು | - ಧಣಿ | ಮುತ್ತಡು | - ದೇವರು |
| ಬೊಲ್ಲಕೋಟಿ | - ರಕ್ತ | ಶಾಕಂ | - ಕೂರ ಸಾರು |
| ಬೋಡ್ಡಂ | - ಭಟ್ಟಿ | ಶ್ಯಾವಿಡಿ | - ಅನ್ನ |
| ಮಂಡಿಗಾಡು | - ಹಂದಿ | ಶಿರ್ರಗಾಡು | - ಹುಡುಗ |
| ಮಕ್ಕಡಿಗಾಡು | - ಲಂಬಾಣಿ | ಶಿರ್ರಕೋಟಿ | - ಹುಡಿಗಿ |
| ಮಟ್ಟಿವಾಂ | - ಮಣ್ಣು | ಶಂಡ್ರ | - ವಲಸೆ |
| ಮಲ್ಗು | - ನಿದ್ದೇ | ಶೀಲಕೋಟಿ | - ಹಾಲು |
| ಮಾರ್ರಿಲ್ಲು | - ಮಾರು | ಸೊನ್ನಂ | - ಆಭರಣ |
| ಮ್ಯಾಸಂ | - ಮೇಕೆ | ಸಾಕ | - ಬ್ಯಾಡ |
| ಮೀಟಂ | - ಉಪ್ಪು | ಶತ್ತಾಂ | - ಹೊಲ |
| ಮೀಟಾಂಗಾಡು | - ಚೇಳು | ಸಿದಾನಂ | - ಹೆಂಡ |
| ಮುತ್ಯಾರಿ | - ಮುದುಕಿ | ಸಿರ್ರುವಾಂ | - ತಲೆ |
| ಮೆಸ್ಕು | - ತಿನ್ನುವದು | ಸೊಕ್ಕಲು | - ಜೋಳ |
| ಯಾಸ್ಕಂ | - ಭಿಕ್ಷೆ | ದಂತಾಲು | - ಹಲ್ಲುಗಳು |
| ಯಾಸಾಂ | - ಹಾವು | ಹಸ್ತಲು | - ಕೈಗಳು |
| ಲಕಡಾಂ | - ಕಟ್ಟಿಗೆ | ನಯನಕೊಟ್ಲು | - ಕಣ್ಣುಗಳು |
| ವಾಡಿವಾಂ | - ಕತ್ತಿ | ಶಾರಾಂ | - ಸ್ತ್ರೀ |
| ಬಾರ್ತಿಗಾಡು | - ವಡ್ಡು | ಬಿರಾಡು | - ಬುಡ್ಗ ಜಂಗಂರ ವಾಡಿ |
| ಭೂತಕಾಶ್ಕಂ | - ಭೂತಬೆಕ್ಕು | ಬೋಗಾಟ್ಟಂ | - ಸಂಭೋಗ |
| ಮಂಕಾಡು | - ಊರಿನವರು | ಮಕಟಾಂ | - ಯಮ್ಮೆ |
| ಮತ್ತೆಲು | - ಮನೆಗಳು | ಸೆತ್ತಾಲು | - ಹೊಲಗಳು |

| ಮರಗು, ಬುಡ್ಗ | ಕನ್ನಡ | ಮರಗು, ಬುಡ್ಗ | ಕನ್ನಡ |
|---|---|---|---|
| ಬಡಸ್ಕ್ಯಾಲು | - ದನಗಳು | ಮ್ಯಾಸಾಲು | - ಕುರಿ ಮೇಕೆ |
| ಕೊಕ್ಕಡಾಲು | - ಕೋಳಿಗಳು | ಕೈಕಲು | - ನಾಯಿಗಳು |
| ಕಾಶಿಗ್ಯಾಲು | - ಬೆಕ್ಕುಗಳು | | |

ಇಲ್ಲಿ ದ್ರಾವಿಡ ಪದವಾದ ಕುಕ್ಕಟದ ಎನ್ನುವುದು ಕೊಕ್ಕಡ ಎಂದು, ತೆಲುಗು ಪದವಾದ ಮ್ಯಾಕ ಎನ್ನುವುದು ಮ್ಯಾಸ ಆಗಿರುವುದನ್ನು ಗಮನಿಸಬಹುದು.

| | | | |
|---|---|---|---|
| ಜವ್ರುಟಾಲು | - ಎಲ್ಲ ಕಾಳುಗಳು | ಮಿಟುಪಿಳ್ಳು | - ಅಕ್ಕಿ |
| ಶ್ಯಾವ್ರುಡಿ | - ಅನ್ನ | ಶ್ಯಾಕಂ | - ಸಾರು |

ದೇಹದ ಅಂಗಾಗಳು

| ಬುಡ್ಗ | ಕನ್ನಡ | ಬುಡ್ಗ | ಕನ್ನಡ |
|---|---|---|---|
| ಶಿರಸ್ಕ್ಯಾಂ | - ತಲೆ | ಕುಸುವಾಲು | - ಕೂದಲು |
| ನಯನಕೋಟ್ಲು | - ಕಣ್ಣುಗಳು | ಚೆವ್ವಲು | - ಕಿವಿಗಳು |
| ವಾಗಡ | - ಬಾಯಿ | ಮುಕ್ಕ | - ಮೂಗು |
| ದಂತಕೋಟ್ಲು | - ಹಲ್ಲುಗಳು | ದಾಡಿವಾಂ | - ದಾಡಿ |
| ಶೆಂಪಲು | - ಕೆನ್ನೆಗಳು | ಹಸ್ತಕೋಟ್ಲು | - ಪೂರ್ತಿಕೈಗಳು (ಅಂಗೈ ಮುಂಗೈ ಮಣಿಕಟ್ಟು ಎಲ್ಲವಕ್ಕೂ) |
| ಕರಕಾಲು | - ಹೆಂಗಸರ ಮೊಲೆಗಳು | ಪಾದಕಷ್ಟಾಲು | - ಕಲುಗಳು (ಪಾದ, ಬೆರಳು ಎಲ್ಲ ಸೇರಿ) |
| ಕೊಂಕಣಂ | - ಬೀಜ ಸೇರಿ ಪುರುಷಾಂಗ ಕುಂಡಿಗಳು ಸೇರಿ) | ಗೊಟ್ಟಂ | - ಮುಕುಳಿ (ಪಿರ್ರೆ ಅಥವಾ |
| | | ಆಸನಂ | - ಹೆಣ್ಣಿನ ಗುಪ್ತಾಂಗ |
| ಬೀರುದಿ | - ಉದ್ದನೆಯದು | ಚಿಕ್ಕದಿ | - ಸಣ್ಣದು |
| ಪಾಸ್ಟಾಲು | - ಚಪ್ಪಲಿ | ಜಾನ್‌ಪೋ | - ಹೋಗು |
| ಜಾನ್‌ರಾ | - ಹೋಗಿಬಾ | ನಿಕ್ಕು | - ಹೋಗು (ತುರ್ತಿನ ಸಂದರ್ಭದಲ್ಲಿ) |
| ಇಕಿ. ಐಕಂಚ್ಕೆ | - ಬಚ್ಚಿಡು | | |
| ನಚ್ಚಿಂಡು | - ಇರು | ವಾಲ್ಕೋ | - ಕುಳಿತುಕೋ (ಮಾತನ್ನು ತಡೆದುಕೋ ತಡೆದು ಮಾತನಾಡು) |
| ಸಾಕ | - ಮರೆ | | |

ಹಣಕ್ಕೆ ಸಂಬಂಧಿಸಿದ್ದು

| | | | |
|---|---|---|---|
| ಗಿಂಜ ಒಕಗಿಂಜಿ | - ಒಂದು ರೂಪಾಯಿ | ಅರ್ಧಗಿಂಜ | - ಅರ್ಧರೂಪಾಯಿ. |
| ಗೀಟು | - ನಾಲ್ಕಾಣೆ | ದೆಸಂಪೈಸ | - ಹತ್ತು ಪೈಸೆ |

| ಮರಗು, ಬುಡ್ಗ | ಕನ್ನಡ | ಮರಗು, ಬುಡ್ಗ | ಕನ್ನಡ |
|---|---|---|---|
| ಪದಿತುಕ್ಕುಲು | - ಹತ್ತು ಪೈಸೆ | ಪಂಚಂಪೈಸೆ | - ಐದು ಪೈಸೆ |
| ಮೂಡುಗೀಟ್ಲು | - ಎಪ್ಪತ್ತೈದು ಪೈಸೆ<br>ಮೂರು ಪಾವಲಿ<br>ಮುಕ್ಕಾಲು ರೂಪಾಯಿ | ದೋಯುಗಿಂಪಾಲು | - ಎರಡು ರೂಪಾಯಿ |
| ದೋಯುಗಿಂಪಾಲು | - ಎರಡು ರೂಪಾಯಿ | ಮೂಡುಗಿಂಬಾಲು | - ಮೂರು ರೂಪಾಯಿ |
| ದಶಗಿಂಪಾಲು | - ಹತ್ತು ರೂಪಾಯಿ | ದಶ ವೊಂಟಿಗಿಂಬಾಲು | - ಹನ್ನೊಂದು ರೂಪಾಯಿ |
| ದಶಪಂಚೆಗಿಂಪಾಲು | - ಹದಿನೈದು ರೂಪಾಯಿ | ಇಮುಚಿತುಗಿಂಪಾಲು | - ಇಪ್ಪತ್ತು ರೂಪಾಯಿ |
| ಗೌರ ಗಿಂಬಾಲು | - ನೂರು ರೂಪಾಯಿ | ಬೀರುವಿರುಪಾಟು | - ಒಂದು ಸಾವಿರ ರೂಪಾಯಿ |
| ಪ್ರಾಣಿಗಳು | | | |
| ಕಮುಜು | - ಕೌಜ | ಲಾವ್ರಕಲು | - ಬುರ್ಲಿ ಹಕ್ಕಿ |
| ಎಂಟುವ | - ಮುಂಗಸಿ | ವಲಿಂಗಾಡು | - ಉಡ |
| ಕುರಿಂಗಾಡು | - ಆಮೆ | ಕುಂದೇಲು | - ಮೊಲ |
| ಎಲಕಲು | - ಇಲಿ | ನರಿಸಿಗಾಡು | - ನರಿ |
| ತೋರ್ಸಿಗಾಡು | - ಅಳಿಲು ಇಣಚಿ | ಜಂಗಾಶಿಕಂ | - ಅಡವಿ ಬೆಕ್ಕು |
| ಮಾನಗಾಶಿಕಂ | - ಮರದ ಬೆಕ್ಕು | ಏದು | - ಮುಳ್ಳಂದಿ |
| (ಮರಕರಡಿ ಎಂದು ಬಳ್ಳಾರಿಯ ಕಡೆ ಕರೆಯುತ್ತಾರೆ.) | | | |
| ಆಲವ | - ಮೈಮೇಲೆಲ್ಲಾ ಚಿಪ್ಪು ಇರುವ ಪ್ರಾಣಿ | ಪುನುಗಾಸಿಗೆಂ | - ಪುನುಗಿನ ಬೆಕ್ಕು |
| ಕಾಜಾಲು | - ಮೀನು | ಕರಗೋಟಿಗಾಡು | - ಎಂಡ್ರಕಾಯಿ ಏಡಿ |
| ಬಟ್ಟೆಗಳು | | | |
| ಕೆಂದಲು | - ಬಟ್ಟೆಗಳು | ತೊಗಡುವಾಂ | - ಅಂಗಿ, ಷರಟು |
| ಲಾಗು | - ಡ್ರಾಯರ್, ನಿಕ್ಕರ್ | ಸುಟ್ಟಿಕೆಂದ | - ರುಮಾಲುಲು, ವಲ್ಲಿ |
| ಒಡವೆಗಳು | | | |
| ಸೋಣಪಂ | - ಆಭರಣ | ನೆಟ್ಟು | - ಬಂಗಾರ |
| ಚಿಕ್ಕನೆಟ್ಟು | - ಬೆಳ್ಳಿ | ಸುದಿಬುದಿ | - ತೋಳುಬಂದಿ (ಬೆಳ್ಳಿಯದು) |
| ಬೊಡಿಶ್ಯಾಲು | - ಎಲ್ಲಾ ರೀತಿಯ ಪಾತ್ರೆಗಳು | | |
| ಬಲೆಗಳು | | | |
| ಪಿಸಾಲು | - ಬಲೆಗಳು | ದೋರ್ಶ್ಯಾಲು | - ಉರುಲುಗಳು |
| ಪಾದಿ | - ಕೌಜನ ಬಲೆ | ವಲೆಂ | - ಉಡಹಿಡಿಯುವ ಉರುಲು |
| ದೋಟಿಗಾಲಂ | - ಆಮೆ ಹಿಡಿಯುವ ಗಾಳ | ಗಾಲಂ | - ಮೀನು ಹಿಡಿಯುವ ಸಾಧನ |
| ವಾಡಿವಾಂ | - ಎಲ್ಲಾ ರೀತಿಯ ಆಯುಧಗಳು | ವತಾರಗಳು | - ಆಮೆ |

**ಬೇಟೆ ಪ್ರಾಣಿಗಳ ಬುಡ್ಗ ಭಾಷೆಯ ಒಡಪುಗಳು**

| | | |
|---|---|---|
| ವಾಗುಲ ವನ್ನಗಾಡು | - | ಕಾಜಾಲು (ಮೀನು) |
| ಬುರದಲ ಬುಸ್ಸಿಗಾಡು | - | ಕುರುಂಗಾಡು (ಆಮೆ) |
| ಚೆಟ್ಟುಮೀದ ಜಾನೆಗಾಡು | - | ತೋರ್ರಿಗಾಡು (ಅಳಿಲು) |

**ಪಕ್ಷಿಗಳ ಹೆಸರುಗಳು**

| | | | | | |
|---|---|---|---|---|---|
| ನರಿಸಿಗಾಡು | - | ನರಿ | ತೋರಿಸಿಗಾಡು | - | ಅಳಿಲು |
| ಔತರಗಾಡು | - | ಆಮೆ | ಸೆವಲಪ್ರೋತು | - | ಮೊಲ |
| ಪಟ್ಟಿಕೊಟ್ಲು | - | ಕೌಜಗ | ಪುಲ್ಲಂಕೋಡಿ | - | ನೀರಕೋಳಿ |
| ಮರನಾಗಿ | - | ಮಂಜಿಟಿಗ | ಮತ್ತೆಗಾಸಿಗೆಮು | - | ಬೆಕ್ಕು |
| ಕಾಜಾಲು | - | ಮೀನು | ವಲಿಂಗಾಡು | - | ಉಡ |
| ಕೊರೆಂಕ | - | ಗೊರವಂಕ | ಲಾವಂಕಿ | - | ಲ್ಯಾವಕ್ಕಿ |
| ಎಲ್ಟೇಲು - ಬುರ್ಲಿ (ಚುಕ್ಕೆ ಆಕಾರದ) | | | ಕೊರಗ | - | ಬೆಳ್ಳಕ್ಕಿ |

ಈಗೀಗ ಕರ್ನಾಟಕದಲ್ಲಿ ವಾಸಿಸುವ ಬುಡ್ಗ ಜಂಗಾಲು ಜನಾಂಗದವರು ಬುಡಕಟ್ಟು ಭಾಷೆಯ ಪದಗಳನ್ನು ಕನ್ನಡಕ್ಕೂ ಕನ್ನಡ ಭಾಷೆಯ ಪದಗಳನ್ನು ಇವರ ಭಾಷೆಗೂ ಸೇರಿಕೆಯಾಗಿ ಬಳಕೆಯಾಗುತ್ತಿರುವುದು ಕಂಡು ಬಂದಿದೆ. ಚಿಕ್ಕದು ಎನ್ನುವ ಕನ್ನಡ ಪದಕ್ಕೆ ತೆಲುಗಿನ ಪ್ರತ್ಯಯ ಸೇರಿ ಚಿಕ್ಕದಿ ಎನ್ನುವ ಪದವಾಗಿ ಬಳಕೆಯಾಗುತ್ತಿದೆ. ಇವರ ಮೂಲ ಭಾಷೆಯಲ್ಲಿ ಅಳತೆಯ ಯಾವ ಪದಗಳೂ ಕಂಡು ಬರುವುದಿಲ್ಲ.

ಒಟ್ಟಿನಲ್ಲಿ ಇವರ ಬುಡಕಟ್ಟು ಪದಗಳು ಇವರು ಬದುಕುವ ಪರಿಸರ ಭಾಷೆಯಲ್ಲಿ ಸೇರಿಕೊಂಡು ಬಳಕೆಯಾಗುವುದನ್ನು ಗುರ್ತಿಸಬಹುದಾಗಿದೆ. 'ಆಟಿಕಿ, ನಿಕ್ಕಿ ಅಡ ಮಾಮ ನಚ್ಚಿಡಾಂಡು, ತೋಲುಕೋನಿ ಜಾನ್‌ರಾ', ಈ ವಾಕ್ಯದ ಕನ್ನಡಾನುವಾದದ ರೂಪ 'ಅಲ್ಲಿಗೆ ಹೋಗಿ, ಅಲ್ಲಿ ಮಾವ ಇದ್ದಾನೆ, ಕರೆದುಕೊಂಡುಬಾ' ಎಂದಾಗುತ್ತದೆ. ಅವರಾಡುವ ಭಾಷೆಯ ಮೇಲಿನ ವಾಕ್ಯದಲ್ಲಿ 'ಆಟಿಕಿ', ಮಾಮ 'ತೋಲುಕೋನಿ' ಎನ್ನುವ ಪದಗಳು ಶುದ್ಧ ತೆಲುಗು ಭಾಷೆಯವು. ಆದರೆ ಇವುಗಳ ಜೊತೆಯಲ್ಲಿ ಬರುವ 'ನಿಕ್ಕಿ', 'ನಚ್ಚಿಂಡಡು', 'ಜಾನ್‌ರಾ' ಎನ್ನುವ ಪದಗಳು ತೆಲುಗು ಭಾಷೆಯಲ್ಲಿ ಕಂಡುಬರುವುದಿಲ್ಲ. ಆದುದರಿಂದ ಈ ಪದಗಳು ಬುಡ್ಗ ಜನಾಂಗದ ಬುಡಕಟ್ಟಿನ ಮೂಲ ಭಾಷೆಯ ಪದಗಳಿರಬೇಕೆಂದು ನಿರ್ಧರಿಸ ಬಹುದಾಗಿದೆ. 'ನಿಕ್ಕಿ' ಅಂದರೆ ಹೋಗಿ, ನಚ್ಚಿಂಡಡು ಅಂದರೆ ಇದ್ದಾನೆ, 'ಜಾನ್‌ರಾ' ಅಂದರೆ ಬಾ ಎನ್ನುವ ಅರ್ಥಗಳು ಈ ಪದಗಳಿಗೆ ಇರುವುದು ಕಂಡುಬಂದಿದೆ.

ಇದೇ ರೀತಿ ಮತ್ತೊಂದು ವಾಕ್ಯವನ್ನು ಪರಿಶೀಲಿಸಿದರೆ; ಆಡ ಮಂಕಾಡು ಜಾನಿ ವಚ್ಚಿಂಡು, ಏಮಿ ತೆಲುಪಲ್ಲೋ ನೂವು 'ಜಾನ್‌ರಾ' ಎನ್ನುವ ವಾಕ್ಯದ ಕನ್ನಡ ರೂಪ 'ಅಲ್ಲಿ ಯಾರೋ ಒಬ್ಬಾತ ಬಂದಿದ್ದ, ಏನು ಹೇಳಬೇಕೋ, ನೀನೂ ಬಾ' ಎಂದಾಗುತ್ತದೆ. ಈ ವಾಕ್ಯದಲ್ಲಿ

ಬರುವ 'ಅಡ', 'ಏಮಿ', 'ತೆಲುಪಲ್ಲೋ', 'ನೂವು' 'ವಚ್ಚಿಂಡು' ಇವು ತೆಲುಗುಪದಗಳು. ಆದರೆ 'ಮಂಕಾಡು' 'ಜಾನ್' ಎನ್ನುವ ಪದಗಳು ಅವರ ಮೂಲ ಭಾಷೆಯಿಂದ ಬಂದವು ಆಗಿವೆ.

ಈ ಬುಡಕಟ್ಟು ಭಾಷೆಯ ಬಹುತೇಕ ಕ್ರಿಯಾಪದಗಳು ಹಾಗೂ ನಾಮ ಪದಗಳಿಗೆ ತೆಲುಗು ಭಾಷೆಯ ಪ್ರತ್ಯಗಳು ಸೇರಿರುವುದು ಕಂಡುಬಂದಿವೆ. 'ಜಾನ್‌ರಾ' 'ಜಾನ್‌ಪೋ' 'ಮಂಕಾಡು' ಮುಂತಾದ ಪದಗಳ ಕೊನೆಯಲ್ಲಿ ಬರುವ ಕ್ರಿಯಾಪದಗಳ ಹಿಂದೆ ಪ್ರತ್ಯಯಗಳು ಸೇರಿಸುವುದನ್ನು ಗುರ್ತಿಸಬಹುದು.

ಬುಡ್ಗ ಜಂಗಾಲು ಬುಡಕಟ್ಟಿನ ಭಾಷೆಯಲ್ಲಿ ಬರುವ ಕೆಲವು ಪದಗಳು ಹಾಗೂ ಅವುಗಳ ಕನ್ನಡದ ಅರ್ಥವನ್ನು ಈ ಕೆಳಗಿನ ಪದಗಳಿಂದ ಗಮನಿಸಬಹುದು.

ಮಂಕಾಡು=ಕುಲಸ್ಥನಲ್ಲದವನನ್ನು ರೀತಿ. (ಬಹುವಚನ ರೂಪ ಮಂಕಾಳ್ಳು), ಕಾರಿಗ್ಗಾಡು=ಕುಲಸ್ಥನನ್ನು ಕರೆಯುವ ರೀತಿ. (ಬಹುವಚನ ರೂಪ ಕಾರಿಗ್ಗಾಳ್ಳು) ದಾರಿಗ್ಗಾಡು ಮುಸ್ಲಿಂ ಅಥವಾ ಸಾಬು. (ಬಹುವಚನ ರೂಪ ದಾರಿಗ್ಗಾಳು) ಶಾಂತಲು, ಅಥವಾ ಶ್ಯಾರಾಲು ಅಥವಾ ಮಸಿಕೋಟ್ಲು=ಹೆಂಗಸರು. ಬಳ್ಳಾರಿ ಕಡೆ ಹೆಂಗಸರನ್ನು ಶಾಂತಲು ಎಂದು, ರಾಯಚೂರು ಕಡೆ ಶ್ಯಾರಾಲು ಎಂದು, ಧಾರವಾಡದ ಕಡೆ ಮಸಿಕೋಟ್ಲು ಎಂದು ಕರೆಯುತ್ತಾರೆ. ಹೆಂಗಸರಿಗೆ ಗೌರವಕೊಡುವಂಥ ಸಂದರ್ಭದಲ್ಲಿ ಹೆಂಗಸರನ್ನು ಶಾಂತಲು ಎಂದು ಕರೆಯುತ್ತಾರೆ. ಭಯ ಅಥವಾ ಆಶ್ಚರ್ಯ ಪಡುವ ಸಂದರ್ಭದಲ್ಲಿ ಹೆಂಗಸರನ್ನು ಶ್ಯಾರಾಲು ಅಥವಾ ಮಸಿಕೋಟ್ಲು ಎಂದು ಕರೆಯುತ್ತಾರೆ. ಹತ್ತು ಅಥವಾ ಹನ್ನೆರಡು ವರ್ಷದ ಹೆಣ್ಣು ಹುಡುಗಿಯನ್ನು 'ಶಿರಪಕೋಟೆ' ಎಂದು, ಇದೇ ವಯಸ್ಸಿನ ಗಂಡು ಹುಡುಗ ನನ್ನು ಶಿರಪಗಾಡು ಎಂದು; ಎಳೇ ಮಕ್ಕಳನ್ನು 'ಪಿಂಕಲು' ಎಂದು ಕರೆಯುತ್ತಾರೆ.



೯

# ಪ್ರದರ್ಶಕ ಕಲೆಗಳು

## ಜನಪದ ನೃತ್ಯ

ಅಲೆಮಾರಿ ಬುಡ್ಗ ಜಂಗಾಲರು ಮೂಲತಃ ಕಲಾವಿದರೇ ಆಗಿರುವುದರಿಂದ ವಿಶಿಷ್ಟ ಸಂದರ್ಭಗಳಲ್ಲಿ ಜಾನಪದೀಯ ನೃತ್ಯಗಳನ್ನು ಮಾಡುತ್ತಾರೆ. ಅಂದರೆ ಜಾತ್ರೆಗಳಲ್ಲಿ ನಾಟಕ ಮಾಡುವ ಸಂದರ್ಭಗಳಲ್ಲಿ ಜನರನ್ನು ನಾಟಕದ ಕಡೆ ಆಕರ್ಷಿಸಲು ನಾಟಕದ ಮಧ್ಯ ಮಧ್ಯ ಪ್ರಾಂತೀಯವಾಗಿ ಪ್ರಚಲಿತದಲ್ಲಿರುವ ಜನಪದರ ಹಾಡುಗಳಿಗೆ ನೃತ್ಯ ಮಾಡುತ್ತಾರೆ. ಆಂಧ್ರದ ಗಡಿಭಾಗ ಅಂದರೆ ಕೋಲಾರ ಜಿಲ್ಲೆಯ ಕೋಲಾರ, ಮುಳಬಾಗಿಲು ಶ್ರೀನಿವಾಸಪುರ, ಗೌರೀ ಬಿದನೂರು ಮುಂತಾದ ತಾಲ್ಲೂಕುಗಳಲ್ಲಿ ಸಂಕ್ರಾತಿ ಹಬ್ಬದ ವೇಳೆಯಲ್ಲಿ ಗೌರಿಯನ್ನು ವಿಶಿಷ್ಟವಾಗಿ ಪೂಜಿಸಿ ಕಾಟಂರಾಜು ಪೂಜೆ ಮಾಡಲು ಗೌರಿಯ ಹೆಸರಿನಲ್ಲಿ ಸಗಣಿಯಲ್ಲಿ ತಯಾರಿಸಿದ ಗೊಬ್ಬಿಯ ಸುತ್ತಲು ತಿರುಗುತ್ತಾ ಗೊಬ್ಬಿಯಾಳೊ ಪದಗಳೊಂದಿಗೆ ನೃತ್ಯ ಮಾಡುತ್ತಾರೆ.

ಆಂಧ್ರದ ಗಡಿಭಾಗವಾದ ಬಳ್ಳಾರಿ ರಾಯಚೂರು ಗುಲಬರ್ಗಾ ಮತ್ತು ಉತ್ತರ ಕರ್ನಾಟಕದ ಬೆಳಗಾವಿ, ವಿಜಾಪೂರ, ಧಾರವಾಡ ಕಡೆಗಳಲ್ಲಿ ತಮ್ಮ ಸಾಂಪ್ರಾದಾಯಿಕ ಆಚರಣೆ ಗಳಾದ ಮದುವೆ, ದೇವರ ಕಾರ್ಯ ಮಾಡುವ ಸಂದರ್ಭದಲ್ಲಿ ಡಿಮ್ಮಿಕಿಹಾಡು, ಮತ್ತು ಭಜನೆ ಹಾಡು, ಹಾಡುವುದಲ್ಲದೆ ಪುರುಷನು ಸ್ತ್ರೀವೇಷ ಧರಿಸಿ ನರ್ತಿಸುತ್ತಾನೆ. ಅಲೆಮಾರಿ ಬುಡಕಟ್ಟಿನ ಬುಡ್ಗ ಜಂಗಮರು ಅನಾದಿ ಕಾಲದಿಂದಲೂ ನಾಡಿನ ಇತಿಹಾಸ ಮತ್ತು ಧಾರ್ಮಿಕತೆಯನ್ನು ಜಾಗೃತಗೊಳಿಸಿ ಚೆದುರಿ ಹೋಗಿರುವ ದೇಶದ ಇತಿಹಾಸ ಮತ್ತು ಐಕ್ಯತೆಗಾಗಿ ವೇಷ, ಶಾಸ್ತ್ರ, ನೃತ್ಯ, ಗಾಯನ, ಕಥೆ, ಭವಿಷ್ಯ, ಪ್ರದರ್ಶನ ಇವುಗಳನ್ನು ಹೊತ್ತು ಆಯಾ ಪ್ರದೇಶಕ್ಕೆ ತಕ್ಕ ಹಾಗೆ ಕಲೆಗಳನ್ನು ಮೈಗೂಡಿಸಿಕೊಂಡು ಆಂಧ್ರ ಮೂಲದಿಂದ ಈ ಸಮುದಾಯ ದೇಶದ ಅನೇಕ ಪ್ರದೇಶಗಳ ಕಡೆ ಹೊರಟು ಲಿಪಿ ಇಲ್ಲದ ಭಾಷೆ, ಪರಿಚಯವಿರದ ಈ ಸಮುದಾಯ, ದಿನಾಲು ಅಲೆಯುವದರಿಂದ ವಿಳಾಸವಿಲ್ಲದ ಡೇರೆ (ಟೆಂಟು) ಹೀಗಿರುವಾಗ ತನ್ನವರನ್ನು ಸೇರುವುದು ಮಾತನಾಡುವುದು ಸಂಬಂಧ ಬೆಳೆಸುವುದು, ಕಷ್ಟಕರವಾಗಿ ಆಯಾ ಪ್ರಾಂತ್ಯಕ್ಕೆ ಸಂಬಂಧಿಸಿದ ಹಾಗೆ ಕಟ್ಟಗಳನ್ನು ನಿರ್ಮಿಸಿಕೊಂಡು ಮೂರು ವರ್ಷಕ್ಕೊಮ್ಮೆ ಸೇರುವ ಬಿಡಾರ (ಗಡ್ಡ) ವಾಗ್ದಾನದೊಂದಿಗೆ ಸೇರಿ ಕುಶಲೋಪರಿ ಮತ್ತು ವೈವಾಹಿಕ ಸಂಬಂಧ ಬೆಳೆಸಿಕೊಳ್ಳುತ್ತಿದ್ದ

ಇವರು ಈಗಲೂ ಕೆಲವು ಕಟ್ಟುಗಳು ಪ್ರಚಲಿತದಲ್ಲಿವೆ ಬಹಳ ದಿನಗಳ ಅಂತರದಿಂದ ಮತ್ತು ಒಬ್ಬರಿಗೊಬ್ಬರು ಪರಿಚಯವಿಲ್ಲದ್ದರಿಂದ ಒಂದು ಕಟ್ಟಾದಿಂದ ಇನ್ನೊಂದು ಕಟ್ಟದವರಿಗೆ ಕೊಟ್ಟು ತೆಗೆದುಕೊಳ್ಳುವ ಸಂಬಂಧ ಬಹಳ ವಿರಳವಾಗಿ ನಡೆದಿತ್ತು. ಇದರಿಂದಾಗಿ ಈ ಕಟ್ಟದವರನ್ನು ಬಿಟ್ಟು ಇನ್ನುಳಿದ ಕಟ್ಟದವರು "ತಿಕ್ಕಜಂಗಾಲು" (ಹುಚ್ಚು ಜಂಗಾಲು) ಅಥವಾ "ಮನ ಜಂಗಾಲು" (ನಮ್ಮ ಜಂಗಾಲು) ಕಾದು ಎಂದು ಹೇಳುತ್ತಿದ್ದರು. ಆದರೆ ಹತ್ತಿರ ಹೋಗಿ ವಿಚಾರಿಸಿದಾಗ ಮಾಮು ಮೀವೋಳಮೆ "ಜಂಗಾಲಮೋಳು" ಎಂದಾಗ ಮೀ ಇಂಟಿ ಪೇರೇಮಿ (ನಿಮ್ಮ ಮನೆತನದ ಹೆಸರೇನು) ಎಂದು ಕೇಳುತ್ತಾರೆ. ಬೆಡುಗುಗಳ ಸಾಮ್ಯತೆ ಬಂದಾಗ ಹೌದು ನಮ್ಮವರೆ ಎಂದರು ಕೂಡಾ ನಂತರ ಸಂಶಯದಿಂದ ಕಾಣುತ್ತಾರೆ. ಕಾರಣ ಮೇಲೆ ಹೇಳಿದ ಹಾಗೆ ಆಯಾ ಪ್ರದೇಶಕ್ಕೆ ತಕ್ಕ ಹಾಗೆ ವೇಷಗಳನ್ನು ಹಾಕಿರುವುದರಿಂದ ಉದಾ. ಬೆಳಗಾವಿ ವಿಭಾಗದಲ್ಲಿ ಬುಡ್ಗಜಂಗಮರನ್ನು ಬಹುರೂಪಿಗಳು, ಸಿದ್ದರು ಕೊಂಡಮಾಮರೆಂದು ಕರೆದರೆ, ಗುಲಬರ್ಗಾ ಭಾಗದಲ್ಲಿ ವೇಷಗಾರರು, ಹಗಲುವೇಷಗಾರರು, ಬಾಲಸಂತರು ಹಾಗೂ ಸುಡುಗಾಡುಸಿದ್ದರು ಎಂತಲು ಮೈಸೂರು ವಿಭಾಗದ ಕಡೆ ಭಾಜಪಂತು, ಕೊಂಡಮಾಮ ಜಗ್ಗಾಲಿ, ಎಂದು ಕರೆದರು ಬೆಂಗಳೂರು ಮತ್ತು ತಮಿಳು ನಾಡಿನ ಗಡಿಭಾಗಗಳಲ್ಲಿ ಬಾಬಾ ಬುಡರು, ಬಾಗೋತ ಕಥೆ ಹೇಳುವವರು. ಶಾಸ್ತ್ರದವರು ಗೊರಮಯ್ಯಿಗಳು ಎಂದು ಕರೆದರು.

ಆಂಧ್ರದ ಗಡಿ ಪ್ರದೇಶಗಳಲ್ಲಿ ಬುರ್ರಕಥೆಯವರು, ಕಥಗಾಳ್ಳು, ಕಥಾಲೋಳು ಕೊಯ ಪಂತಲು, ಪಗಟಿ ವೇಷಗಾಳ್ಳು (ಹಗಲುವೇಷಗಾರರು) ಎಂದು ಕರೆಯುವುದರಿಂದ "ವೀಳುಮನವಾಳ ಅವ್ವೋಕಾದೊ"(ಇವರು ನಮ್ಮವರೋ ಅಲ್ಲವೋ)ಎಂದು ಸಂಶಯದಿಂದ ಮಾತನಾಡುತ್ತಿದ್ದರು. ಆದರೆ ಇತ್ತೀಚಿಗೆ ಬೆರಳೆಣಿಕೆಯಷ್ಟು ಜನ ಅಲ್ಪಸ್ವಲ್ಪ ಅಕ್ಷರ ಜ್ಞಾನ ಆಧುನೀಕರಣದ ಪ್ರಭಾವ ಮತ್ತು ಸಂಪರ್ಕ ಮಾಧ್ಯಮಗಳಿಂದ ಒಂದು ಕಟ್ಟಾದಿಂದ ಇನ್ನೊಂದು ಕಟ್ಟಾದ ಕಡೆಗೆ ಗಮನ ಹರಿಸಿದ್ದಾರೆ. ಇದು ಸಂಪೂರ್ಣ ಹೋಗಬೇಕಾದರೆ ಇನ್ನು ಕಾಲಾವಕಾಶಗಳು ಬೇಕೆನಿಸುತ್ತವೆ. ಶಿಕ್ಷಣದತ್ತ ಮುಖಮಾಡಿದರೆ ಇವುಗಳಿಗೆ ಪರಿಹಾರ ಸಿಗಬಹುದು.

ಇಂತಹ ನಂಬಿಕೆಗಳುಳ್ಳ ಈ ಸಮುದಾಯ ತಮ್ಮ ಉಡಿಯಲ್ಲಿ ಕಲೆಯ ನಿಧಿ ತುಂಬಿಕೊಂಡು ಪ್ರದರ್ಶಿಸುವ ಕಲೆಗಳು. ಬುರ್ರಕಥೆ ಹಗಲು ವೇಷಗಾರಿಕೆ, ಬೈರಾಗಿವೇಷ, ಸನ್ಯಾಸಿ, ಜಗ್ಗಾಲಿ, ಬಾವಚ ಕೊಂಡ ಮಾಮ, ಕುರ್ರಚಮಾಮ, ಗಿಳಿಶಾಸ್ತ್ರ, ದಾರಿಗೆಪಂತು, ಸಾರಪಂತು, ಕೊಯಪಂತು, ಪಾತ್ಸಾಮ ಪಂತು, ಅಲಿಗಪಂತು, ಶೆವಟಿಪಂತು ಕೈಕಪಂತು, ತುಪಾಕಿ ರಾಮಣ್ಣ ವೇಷ, ಬ್ರಾಹ್ಮಣವೇಷ, ಬಾಲಸಂತು, ಮುತ್ತಡಿ ಪಂತು, ಏಕತಾರಿ ಪಂತು, ಕಾಟಿಪಾಪಲು, ಮೆಂದಚ್ಚು (ಗುರ್ರಪ್ಪ) ಗೊರವಯ್ಯ ವೇಷ ನಾಟಿ ಪಂತು.

ಹಗಲು ವೇಷ ಗಾರಿಕೆಯಲ್ಲಿ ಪ್ರದರ್ಶನಾತ್ಮಕ ಕಲೆಗಳು

೧. ವಿಶ್ವಾಮಿತ್ರ ತಪೋಭಂಗ
೨. ಮೋಹಿನಿ ಭಸ್ಮಾಸುರ,
೩. ಸುಂದೋಪಸುಂದ
೪. ಭೀಮಾಂಜನೇಯ ಯುದ್ಧ
೫. ರಾಮ-ರಾವಣನ ಯುದ್ಧ
೬. ಕಿರಾತಾರ್ಜುನ

| | |
|---|---|
| ೭. ವಾಲಿ-ಸುಗ್ರಿವ | ೮. ಅರ್ಧನಾರೇಶ್ವರ, |
| ೯. ಭಿಂಕದ ರಮಣ (ಅಗಸರ ವೇಷ) | ೧೦. ಭೀಮಜಟಾಸೂರವೇಷ |
| ೧೧. ಕುರುಡದಾಸರವೇಷ | ೧೨. ಬೊಡಮ್ಮಜ್ಜಿ ವೇಷ |
| ೧೩. ಲಂಬಾಣಿ ವೇಷ | ೧೪. ಜಂಗಮ ವೇಷ |
| ೧೫. ಲವಕುಶ ವೇಷ | ೧೬. ದಾನಶೂರ ಕರ್ಣ ವೇಷ |
| ೧೭. ಐನೋರುವೇಷ | ೧೮. ಬೈರಾಗಿ ವೇಷ |
| ೧೯. ಪೋಲೀಸು ವೇಷ | ೨೦. ದಾನಶೂರ ಕರ್ಣ ವೇಷ |
| ೨೧. ಬ್ಯಾಡರು ವೇಷ | ೨೨. ಪೋಟೇಶಂ ವೇಷ |
| ೨೩. ಪಾರ್ವತಿ-ಪರಮೇಶ್ವರ ವೇಷ | ೨೪. ತುಪಾಕಿ ರಾಮಣ್ಣನ ವೇಷ |
| ೨೫. ಗೊರವಯ್ಯನ ವೇಷ | ೨೬. ವೀದಿ ಭಾಗೋತಲು ವೇಷ |
| ೨೭. ಏಕತಾರಿ ಪಂತು ವೇಷ | ೨೮. ಬ್ರಾಹ್ಮಣ ವೇಷ |
| ೨೯. ಮುತ್ತಡಿ ಪಂತು ವೇಷ | ೩೦. ನಾಟಿ ಪಂತು ವೇಷ |

ಒಟ್ಟು ೩೩ ವೇಷಗಳಿಕ್ಕಿಂತಲೂ ಹೆಚ್ಚಿಗೆ ವೇಷಗಳನ್ನು ಹಾಕುತ್ತಾರೆ. ಜಾತಿಗೊಂದು ವೇಷ ಹಾಕಿ ಪ್ರದರ್ಶಮಾಡಿರುವ ನಿದರ್ಶನಗಳಿವೆ.

ಬ್ರಾಹ್ಮಣ ವೇಷ : ಬ್ರಾಹ್ಮಣ ವೇಷದಲ್ಲಿ ಬರುವ ಭಾಗೀರಥಿ ಪಾತ್ರ ಸಮುದಾಯದಲ್ಲಿ ಇರುವ ಆಚಾರವಿಚಾರಕ್ಕೆ ವಿಡಂಬನೆಯಾಗಿ ನಟಿಸುತ್ತಾ ಸ್ನಾನ, ಪೂಜೆ, ಸಂಪ್ರದಾಯ, ಶ್ಲೋಕ, ವಿಷಯಗಳನ್ನು ತಿಳಿಸುತ್ತಾ ಹಾಸ್ಯದಲ್ಲಿ ಯಾವುದೇ ವ್ಯಕ್ತಿಗಳಿಗೆ ಅಸಯ್ಯವಾಗದಂತೆ ಕಲೆಯನ್ನು ಪ್ರದರ್ಶಿಸುತ್ತಾರೆ.

ತುಪಾಕಿ ರಾಮಣ್ಣಾ ವೇಷ (ಪಿಟ್ಟಿಲ ದೊರ) : ಇದು ಏಕವ್ಯಕ್ತಿಯ ಪ್ರದರ್ಶನ ಕಲೆ ಖಾಖಿ ಬಟ್ಟೆಯನ್ನು ಹಾಕಿ ತಲೆಯ ಮೇಲೆ ಇಂಗ್ಲೀಷ್ ಟೋಪಿ ಹಾಕಿ ಬುಜದ ಮೇಲೆ ಕಟ್ಟಿಗೆಯ ತುಪಾಕಿಯನ್ನು ಹಿಡಿದು ಅರ್ಧಪ್ಯಾಂಟು ಮೇಲಕ್ಕೆ ಎರಿಸಿ ತಾನು ಯುದ್ಧದಲ್ಲಿ ವೀರ ಯೋಧನಾಗಿ ಬಂದಿದ್ದೇನೆ ನನಗೆ ದೊಡ್ಡ ಬಂಗ್ಲೆ ಇದೆ. ಬಂಗ್ಲೆಯ ಹತ್ತಿರ ಊರಜನರಿಗೆ ಊಟ ಹಾಕಿಸುವೆ. ನನ್ನಲಿರುವ ಬಂಗಾರವನ್ನು ನಾಯಿ ಮುಟ್ಟಿದ್ದಕ್ಕೆ ಅದನ್ನು ಬಾವಿಯಲ್ಲಿ ಬಿಸಾಡಿದೆ. ನನಗೆ ಬಹಳ ಜಮೀನಿದೆ ನಿಮಗೆಲ್ಲರಿಗೂ ಸ್ವಲ್ಪ ಹಂಚುತ್ತೇನೆ ನಮ್ಮ ಅತ್ತೆ ಮದುವೆ ಇದೆ. ಅದಕ್ಕೆ ಮಂತ್ರಿಮಹಾಶಯರು ಎಲ್ಲಾರು ಬರುವರು ಅದಕ್ಕೆ ನೀವೂ ಬನ್ನಿ. ನಿಮಗೆಲ್ಲರಿಗೂ ಮನೆ ಕಟ್ಟಿಸುವೆ, ಅಕ್ಕಿದಾನಮಾಡುವೆ ಎಂದು ಹಾಸ್ಯಮಯವಾಗಿ ಜನರನ್ನು ನಗಿಸುವುದು ಈ ವೇಷದ ಉದ್ದೇಶ. ಈ ವೇಷದಲ್ಲಿ ಬಳಸುವ ಭಾಷೆ ಜಲ್ದಿ ಜಿಪ್ಪಿ, ಸರ್ಕಾರ್, ಉಕುಮ್, ಲಡಾಯಿ ಉಲ್ಟಾ ಪಲ್ಟಾ ಹೀಗೆ ಭಾಷೆಯಲ್ಲಿ ಆಂಗ್ಲ ಮತ್ತು ನಿಜಾಮ್ ಶಬ್ದಗಳು ಬರುತ್ತವೆ.

ಅರ್ಧನಾರೇಶ್ವರ ವೇಷ : ಇವರು ಸಾಮಾನ್ಯವಾಗಿ ಹಾಕುವ ವೇಷವೆಂದರೆ ಅರ್ಧನಾರೇಶ್ವರ ವೇಷ. ಒಬ್ಬನೇ ಶಿವ ಹಾಗೂ ಪಾರ್ವತಿಯರ ಅರ್ಧರ್ಧ ಭಾಗವನ್ನು ವೇಷ ಧರಿಸುತ್ತಾನೆ.

ವೇಷ ಹಾಕುವವನ ದೇಹದ ನೀಳ ಬಲಾರ್ಧ ಭಾಗದಲ್ಲಿ ಶಿವನ ವೇಷವನ್ನು ಉಳಿದ ಎಡಾರ್ಧ ಭಾಗದಲ್ಲಿ ಪಾರ್ವತಿಯ ವೇಷವನ್ನು ಧರಿಸುವುದುಂಟು. ತಲೆಗೂದಲನ್ನು ನೆತ್ತಿಯ ಮೇಲೆ ತುರುಬು ಕಟ್ಟಿ ಅದರ ಬಲಭಾಗಕ್ಕೆ ಅರ್ಧ ಚಂದ್ರಾಕಾರದ ತಗಡನ್ನು ಸಿಕ್ಕಿಸಿಕೊಂಡಿದ್ದರೆ ಎಡ ಭಾಗಕ್ಕೆ ಹೂವು ಮುಡಿದಿರುತ್ತಾನೆ. ಮುಖದ ಬಲ ಭಾಗಕ್ಕೆ ನೀಲಿ ಬಣ್ಣ ಕೆಲವು ವೇಳೆ ಬೂದಿ ಬಳಿದಿದ್ದರೆ ಎಡಭಾಗಕ್ಕೆ ಗುಲಾಬಿ ಕೆಂಪು ಬಣ್ಣ ಬಳಿದಿರುತ್ತಾನೆ. ಬಲ ಹಣೆಯ ಮೇಲೆ ಅರ್ಧ ಭಾಗದ ಮೂರು ಬಿಳಿ ಪಟ್ಟೆ (ವಿಭೂತಿ)ಎಳೆದು ಅದರ ಮೇಲೆ ಕೆಂಪು ನಾಮ ಇಟ್ಟರೆ ಎಡಭಾಗದ ಹಣೆಯಮೇಲೆ ಕೆಂಪು ಬಣ್ಣದ ದುಂಡನೆ ನಾಮ ಮಾತ್ರ ಇಟ್ಟಿರುತ್ತಾನೆ. ಮೂಗಿನ ಕೆಳಗೆ ತುಟಿಯ ಬಲಭಾಗದ ಮೇಲೆ ಚೂಪಾದ ಕರಿಯ ಮೀಸೆ ಹಚ್ಚಿರುತ್ತಾರೆ ತುಟಿಯ ಎಡಭಾಗದ ಮೇಲೆ ಏನೂ ಇರುವುದಿಲ್ಲ. ಮೂಗಿನ ಎಡಭಾಗದಲ್ಲಿ ಮೂಗುತಿ ಹಾಕಿಕೊಂಡಿರುತ್ತಾನೆ. ಕುತ್ತಿಗೆಯ ಬಲಭಾಗಕ್ಕೆ ಎಡೆಬಿಚ್ಚಿದ ಬಟ್ಟೆಯ ಹಾವಿದ್ದರೆ ಎಡಭಾಗಕ್ಕೆ ಹೊಳೆಯುವ ಕಂಠಿಹಾರವಿರುತ್ತದೆ. ಬಲ ತೋಳು ಹಾಗೂ ಎದೆಯ ಬಲ ಭಾಗದಮೇಲೆ ಮೂರು ಮೂರು ಬಿಳಿ ಪಟ್ಟೆಗಳನ್ನು (ವಿಭೂತಿ ಪಟ್ಟೆ)ಎಳೆದಿದ್ದರೆ ಎಡಭಾಗದಲ್ಲಿ ಬಣ್ಣದ ಕುಪ್ಪಸ ತೊಟ್ಟಿರುತ್ತಾನೆ. ಬಲ ಮುಂಗೈ ಮೇಲೆ ವಿಭೂತಿ ಪಟ್ಟೆ ಎಳೆದಿದ್ದರೆ ಎಡ ಮುಂಗೈಗೆ ಬಳೆ ತೊಟ್ಟಿರುತ್ತಾನೆ. ಸೊಂಟದ ಬಲಭಾಗಕ್ಕೆ ಹುಲಿ ಚರ್ಮದಂತೆ ಕಾಣುವ ಬಟ್ಟೆ ಕಟ್ಟಿದ್ದರೆ ಎಡಭಾಗಕ್ಕೆ ಸೀರೆಯನ್ನು ಕಚ್ಚೆ ಹಾಕಿರುತ್ತಾನೆ. ತಲೆಯ ತುರುಬಿನಿಂದ ಬೆನ್ನಿನ ಮೇಲೆ ಬೀಳುವಂತೆ ಒಂದು ಬಣ್ಣದ ಬಟ್ಟೆ ಇಳಿಬಿಟ್ಟಿರುತ್ತಾನೆ. ಈಶ್ವರನ ಪಾತ್ರ ಕಾಣುವಂತೆ ಮಾಡುವಾಗ ಈ ಬಟ್ಟೆಯಿಂದ ದೇಹದ ಎಡಭಾಗವನ್ನು ಮುಂದಿನಿಂದ ಅಂದರೆ ಮೂಗಿನ ನೇರದಲ್ಲಿ ಮುಚ್ಚುತ್ತಾನೆ. ಪಾರ್ವತಿ ವೇಷ ಕಾಣುವಂತೆ ಮಾಡುವಾಗ ಈಶ್ವರನ ವೇಷವನ್ನು ಮುಚ್ಚಿಕೊಳ್ಳುತ್ತಾನೆ.

**ಪೋಟೀಷಂ (ಬ್ಯಾಡರ ವೇಷ) :** ಪೋಟಿ ವೇಷ ಹಾಕುವವನು ತಲೆಗೂದಲ ಮೇಲೆ ಪೇಟಾ ಸುತ್ತಿ, ಮುಖಕ್ಕೆ ಕೆಂಪು, ಹಳದಿ ಹಾಗೂ ಬಿಳಿ ಬಣ್ಣಗಳನ್ನು ಬೇಕಾದ ಪ್ರಮಾಣದಲ್ಲಿ ಕಲೆಸಿ, ಕಣ್ಣುಬ್ಬುಗಳಿಗೆ ಕಪ್ಪು ಬಳಿದು, ದಪ್ಪವಾದ ಗಲ್ಲಮೀಸೆ, ತೋಳಿಗೆಗೆಜ್ಜೆ ಹೋಲಿದಿರುವ ಹಾಗೂ ತೊಡೆಗಳಿಗೆ ಅಂಟಿಕೊಂಡು ಮೊಣಕಾಲವರೆಗಿರುವ ಕೆಂಪು ಚಡ್ಡಿ, ಮುಂದೆ ಕಶೆಹಾಕಿ, ಸೊಂಟಕ್ಕೆ ಕಟ್ಟಿ, ಕಾಲಿಗೆ ಗೆಜ್ಜೆಕಟ್ಟಿ, ಎರಡೂ ತೋಳಿಗೆ ದಪ್ಪನೆಯ ಕಪ್ಪು ಉಣ್ಣೆಯ ದಾರ ಕಟ್ಟಿ, ಬಲಗೈನಲ್ಲಿ ಒಂದು ಖಡ್ಗ ಹಿಡಿದಿರುತ್ತಾನೆ. ಕುತ್ತಿಗೆಯನ್ನು ಹಿಂದಿನಿಂದ ಸುತ್ತಿ ಕುತ್ತಿಗೆಯ ಬಲಭಾಗದಿಂದ ತೂರಿ ಹೊರಟಂತೆ ಕಾಣುತ್ತದೆ.

ಅಗಲ ಮತ್ತು ಉದ್ದದಲ್ಲಿ ಕಿರುಬೆರಳಿನಷ್ಟಿರುವ ಹಾಗೂ ಎರಡು ಅಂಗುಲ ಹೊಂದಿರುವ ಬೆಳ್ಳಿ ಚಾಕಿನ ಒಂದು ತುದಿ ಸಣ್ಣ ಸೂಜಿಯಾಕಾರದಲ್ಲಿರುತ್ತದೆ. ಈ ಸೂಜಿಯನ್ನು ಹೊರಗಿನಿಂದ ಬಾಯಿಯ ಒಳಕ್ಕೆ ಕೆನ್ನೆ ಚರ್ಮದ ಮೂಲಕ ಏರಿಸಿ ಬಾಯಿಯಲ್ಲಿರುವ ಕೊಳವೆ ಯೊಳಕ್ಕೆ ಹಾಯಿಸಿರುತ್ತಾರೆ. ಇದನ್ನು ದವಡೆ ಚಾಕು ಎನ್ನುತ್ತಾರೆ. ಹೊರಗಿನಿಂದ ನೋಡು ವವರಿಗೆ ಚಾಕನ್ನೇ ತಿವಿದು ತೋರಿಸಿರುವಂತೆ ಕಾಣುತ್ತದೆ. ಬಾಯಿಯಲ್ಲಿ ಬಾಟೀನು

(ಮಡ್ಡಿ ಬಣ್ಣ) ಇಟ್ಟುಕೊಂಡಿರುವುದರಿಂದ ರಕ್ತ ಸೋರುವಂತೆ ಆ ಬಣ್ಣ ಕಾಣುತ್ತದೆ. ಈ ವೇಷದ ಕುಣಿತಕ್ಕೆ ತಪ್ಪಡೆಗಳನ್ನು (ರಣ ಹಲಗೆ)ಬಳಸುತ್ತಾರೆ. ಹಗಲು ವೇಷದವರು ಈ ವೇಷ ಹಾಕುವುದು ಬಹಳ ಅಪರೂಪ.

**ಕೊಂಯ್ಕಪಂತು (ಕೊಂಡಮಾಮಲು) :** ಲುಂಗಿ ಕಟ್ಟಿಕೊಂಡು ಹಣೆಯಲ್ಲಿ ದೊಡ್ಡ ನಾಮ ಇಟ್ಟುಕೊಂಡು ತಲೆಗೆ ಒಂದು ರುಮಾಲು ಸುತ್ತಿಕೊಂಡು ಕಿವಿಯಲ್ಲಿ ದೊಡ್ಡ ದೊಡ್ಡ ಲೋಲಾಕ ಹಾಕಿಕೊಂಡು ಹೆಗಲಿಗೆ ಒಂದು ಕಡೆಗೆ ಜೋಳಿಗೆಯನ್ನು ಹಾಕಿಕೊಂಡು ಭವಿಷ್ಯ ಪಂಚಾಂಗ, ಶಾಸ್ತ್ರ, ಹೇಳುವುದುಂಟು. ಇವರು ರಾಜ್ಯ, ವಿದೇಶಗಳಿಗೂ ಸಂಚರಿಸುತ್ತಾರೆ.

**ಬೊಡಮ್ಮ್ಮಜ್ಜಿ ವೇಷ :** ಈ ವೇಷ ಹಾಕುವವನು ನುಣ್ಣಗೆ ಕ್ಷೌರ ಮಾಡಿಕೊಂಡು ಅದರ ಮೇಲೆ ಕೆಂಪು ಮತ್ತು ಬಿಳಿ ಬಣ್ಣಗಳನ್ನು ಪ್ರಮಾಣಕ್ಕನುಗುವಾಗಿ ಸೇರಿಸಿ ಮುಖಕ್ಕೆ ಬಳಿದು ಕಣ್ಣುಬ್ಬುಗಳನ್ನು ಕಾಡಿಗೆಯಿಂದ ತೀಡಿ ಹಣೆಯ ಮೇಲೊಂದು ಕಪ್ಪು ಬಣ್ಣದ ಉದ್ದನೆಯ ನಾಮ ಎಳೆದು, ಕೆಂಪುಬಣ್ಣದ ಸೀರೆಯಿಂದ ಕಚ್ಚೆ ಹಾಕಿ ಉದ್ದವಾದ ಸೆರಗಿನಿಂದ ತಲೆಯ ಕೂದಲು ಕಾಣದಂತೆ ಮುಚ್ಚಿ ಅದನ್ನು ಎರಡೂ ಕಿವಿಗಳ ಮೇಲಿನಿಂದ ಹಿಂದಕ್ಕೆ ತೆಗೆದು ಕೊಂಡು ಭುಜದ ಮುಂಭಾಗಕ್ಕೆ ಇಳಿ ಬಿಟ್ಟಿರುತ್ತಾನೆ. ಎಡಗೈನಲ್ಲೊಂದು ಹಿತ್ತಾಳೆ ಚೆಂಬು ಹಿಡಿದಿರುತ್ತಾನೆ.

**ಮುತ್ತಡಿ ಪಂತು :** ಗುಡ್ಡದ ದೇವತೆ ಪೂಜೆ ಮಾಡಲು ಹೆಂಗಸರು ಮನೆಮನೆಗೆ ಹೋಗಿ ಅರಿಶಿನ ಕುಂಕುಮ ನೀಡಿ ದೇವತೆಗೆ ಪೂಜೆ ಮಾಡಲು ತಿಳಿಸುತ್ತಾ, ವಿವಿಧ ಸಾಮಾಗ್ರಿಗಳನ್ನು ವಸೂಲಿ ಮಾಡುತ್ತಾ ಅವರಿಗೆ ದೇವರ ಬಗ್ಗೆ ಪೂಜೆ ಮಾಡಬೇಕೆಂದು ಹೇಳಿ ದೇವರನ್ನು ಹೆಗಲ ಮೇಲೆ ಎತ್ತುಕೊಂಡು ಭಿಕ್ಷೆ ಬೇಡುವ ಪದ್ದತಿ.

**ಆಂಜನೇಯನ ವೇಷ :** ಅಂಜನೇಯನ ವೇಷ ಹಾಕುವವನು ಮುಖಕ್ಕೆ ತೆಳು ಹಸಿರು ಬಣ್ಣ ಬಳಿದು ಕಣ್ಣುಬ್ಬುಗಳಿಗೆ ಬಿಳಿ ನಾರಿನ ಕೂದಲನ್ನು ಅಂಟಿಸಿಕೊಂಡು ಹಣೆಯ ಮೇಲೆ ಎರಡು ಬಿಳಿ ನಾಮ ಮಧ್ಯದಲ್ಲಿ ಕೆಂಪು ನಾಮ ಎಳೆದು ತಲೆಯ ಗಿರ್ದಾ ಮೇಲೆ ಕಿರೀಟವಿಟ್ಟು, ಬಿಳಿನಾರಿನ ಗಡ್ಡ ಹಾಗೂ ಕೆಂಪು ಬಟ್ಟೆ ದಿಂಡಿನ ತುಟಿಗಳನ್ನು ಸೇರಿಸಿ ಹೊಲಿದಿರುವ ದಾರವನ್ನು ಬಾಯಿ ಹಾಗೂ ಕೆನ್ನೆಗಳಿಗೆ ಹೊಂದುವಂತೆ ಜೋಡಿಸಿ ಕಿವಿಗಳ ಮೇಲಿಂದ ತಲೆಯ ಕೂದಲಿನ ಕೆಳಭಾಗಕ್ಕೆ ಎಳೆದು ಕಟ್ಟಿರುತ್ತಾನೆ. ಉಬ್ಬಿದ ತುಟಿಗಳು ಮೂಗಿನ ಕೆಳಭಾಗಕ್ಕೆ ಸರಿಯಾಗಿ ಹೊಂದಿಕೊಂಡಿರುತ್ತವೆ ಹಾಗೂ ಅವುಗಳ ಮಧ್ಯೆ ಒಂದು ರಂಧ್ರವಿರುತ್ತದೆ. ಇದನ್ನು ಸುಲಭವಾಗಿ ಧರಿಸಬಹುದು ಹಾಗೂ ಕಳಚಬಹುದು. ಕಿವಿ ಆಭರಣಗಳು ಯಾವುವೂ ಇರುವುದಿಲ್ಲ. ಕೊರಳಿನಿಂದ ಎದೆಗೆ ನೇತುಬಿದ್ದ ಅಗಲವಾದ ಮೆಡಕಂಠಿ, ತೋಳುಬಂದಿ, ಮಣಿಕಟ್ಟುಗಳನ್ನು ಕಟ್ಟಿ, ಮಡಿಕೆ ಹಾಕಿರುವ ಝರಿ ಶಾಲನ್ನು ಬಲಭುಜ. ಬಲ ಮುಂಗೈ ಮೇಲಿನಿಂದ ಹಾಯಿಸಿ ಇಳಿಬಿಟ್ಟಿರುತ್ತಾನೆ. ಕೊರಳಿಗೆ ಬಣ್ಣದ ಕಾಗದದ ಹೂವಿನಹಾರ ಹಾಕಿ ಕೊಂಡಿರುತ್ತಾನೆ. ಮೊಣಕಾಲವರೆಗೆ ಮಾತ್ರ ಇರುವಂತೆ ಬಣ್ಣದ ಝರಿ ಪಂಚೆಯಿಂದ ಮೋಟು ಕಚ್ಚೆ ಹಾಕಿ, ಮೊಣಕಾಲ ಚಿಪ್ಪಿನ ಕೆಳಗೆ ಎರಡೂ ಕಾಲುಗಳ ಮೇಲೆ ಮಧ್ಯದಲ್ಲಿ ಕೆಂಪು

ಬಿಳಿಯ ಮೂರು ನಾಮಗಳನ್ನು ಬಳಿದಿರುತ್ತಾನೆ. ಬಲಗಾಲಿಗೆ ಕಡಗ ಹಾಗೂ ಎಡಗಾಲಿಗೆ ಗೆಜ್ಜೆ ಕಟ್ಟಿರುತ್ತಾನೆ. ಕೈನಲ್ಲಿ ಹಗುರಾದ ಗದೆ ಹಿಡಿದಿರುತ್ತಾನೆ. ಹಾಗೆಯೇ ಸೊಂಟಕ್ಕೆ ಹಿಂದಿನ ಭಾಗಕ್ಕೆ ಕೂದಲಿನಿಂದ ತಯಾರಿಸಿದ ಬಾಲವನ್ನು ಕಟ್ಟಿರುತ್ತಾನೆ.

**ಏಕತಾರ ಪಂತು :** ಇದರಲ್ಲಿ ಪ್ರಧಾನವಾಗಿ ಸನ್ಯಾಸಿ ವೇಷ ಜನರು ಇವರನ್ನು ಸನ್ಯಾಸಿ ಸಾಧು, ಬೈರಾಗಿ, ಗೋಸಾಯಿ, ಎಂದು ಕರೆಯುತ್ತಾರೆ. ಕಾವಿ ಬಟ್ಟೆಗಳನ್ನು ಧರಿಸಿ ರುದ್ರಾಕ್ಷಿ ಕೊರಳಿನಲ್ಲಿ ಹಾಕಿಕೊಂಡು ವಿಭೂತಿ ತಿದ್ದಿಕೊಂಡು ಜಿಂಕೆಯ ಚರ್ಮವನ್ನು ಕೈಯಲ್ಲಿಡಿದು ಸೊರೇಕಾಯಿ ಕಮಂಡಲ ಹಿಡಿದು ಹೋಗುವ ಸನ್ಯಾಸಿ ಬೈರಾಗಿ ವೇಷದ ಕೆಲವು ಈ ಬೈರಾಗಿ ವೇಷ ದಾರರು ಏಕತಾರಿ ಹಿಡಿದು ರಾಮದಾಸ ಕೀರ್ತನೆಗಳು, ಯಾದಗಿರಿ ನರಸಿಂಹ ಸ್ವಾಮಿ ಕೀರ್ತಿನೆಗಳು ಹೇಳುವುದುಂಟು.

**ಜಂಗಮನ ವೇಷ :** ಜಂಗಮನ ವೇಷ ಹಾಕುವ ವ್ಯಕ್ತಿ ತಲೆಯ ಕೂದಲು ಕಾಣದಂತೆ ಕಾವಿ ಬಣ್ಣದ ಚೌಕದಿಂದ ಮುಸುಗು ಹಾಕಿ ಕಟ್ಟಿರುತ್ತಾನೆ. ಮುಖಕ್ಕೆ ವಿಭೂತಿ ಬಳಿದುಕೊಂಡು ಲಿಂಗವನ್ನು ಕಟ್ಟಿದ ಕಾವಿ ಬಟ್ಟೆಯನ್ನು ಕುತ್ತಿಗೆಗೆ ಒತ್ತಿ ಸುತ್ತಿ ಕಟ್ಟಿರುತ್ತಾನೆ. ರುದ್ರಾಕ್ಷಿ ಕಟ್ಟಿದ ದಾರವನ್ನು ಕೊರಳಿಗೆ ಹಾಕಿಕೊಂಡು ಮೈಯೆಲ್ಲ ವಿಭೂತಿ ಬಳಿದುಕೊಂಡು, ಕಾವಿ ಬಣ್ಣದ ಕಚ್ಚೆ ಉಟ್ಟು ಕಾಲು ಮತ್ತು ಕೈಗಳಿಗೆ ಕಡಗಗಳನ್ನು ಹಾಕಿರುತ್ತಾನೆ. ಕಂಕುಳಲ್ಲಿ ಒಂದು ಜೋಳಿಗೆ ಇರುತ್ತದೆ.

**ಕಪ್ಪೆರ ಪಂತು :** ಒಬ್ಬ ಹಿತ್ತಾಳೆಯ ಬೊಂಬೆಗಳನ್ನು ತೆಗೆದುಕೊಂಡು ಅರಿಶಿಣ ಕುಂಕುಮ ಹಚ್ಚಿಕೊಂಡು ಮೇಲೆ ಗೊಂಬೆಗಳಿಗೆ ವಸ್ತ್ರವನ್ನು ಮುಚ್ಚಿ ಎಡಗೈಗೆ ಜೋಳಿಗೆಯನ್ನು ಹಾಕಿ ಕೊಂಡು ರಾಗಿಕಂಠಿಯಲ್ಲಮ್ಮ ಬಂದಿದ್ದಾಳೆ. ಗುಡಿ ಪೇಟೆ ಮೈಸಮ್ಮ ಮುತ್ಯಾಲಮ್ಮ. ಬಿಜವಾಡ ಕನ್ನಕ ದುರ್ಗಮ್ಮ ಆದಿಶಕ್ತಿ, ಪರಾಶಕ್ತಿ ಧರ್ಮನೀಡಿ ಎಂದು ಭಿಕ್ಷೆಬೇಡುವ ಈ ವ್ಯಕ್ತಿ ಕಪ್ಪೇರು ಬೆಡುಗಿನವರು ಮಾಡುವುದರಿಂದ ಈ ಇವರನ್ನು ಕಪ್ಪೇರು ಪಂತು ಎನ್ನುವರು.

**ತೆಲ್ಲ ಪಂತು :** ಬಿಳಿಯ ರೂಮಾಲು ಮತ್ತು ಬಿಳಿಯ ಬಟ್ಟೆಗಳನ್ನು ಧರಿಸಿ ಕೈಯಲ್ಲಿ ಚೆಂಬು ಹಿಡಿದು ಬಗಲಿಗೆ ಜೋಳಿಗೆ ಹಾಕಿ ಭಿಕ್ಷೆಬೇಡುವರು ಈ ರೀತಿ ಇರುವುದರಿಂದ ಬಿಳಿ (ತೆಲ್ಲ)ಪಂತುಗಳು ಎನ್ನುವರು.

**ಚಕ್ಕ ಬೊಂಮ್ಮಲಾಟ :** ಒಂದು ಉದ್ದನೆಯ ಬಿದಿರಿನ ಮೇಲುಭಾಗ ಒಂದು ಒಂದುವರೆ ಅಡಿ ಉದ್ದದಲ್ಲಿ ಒಂದು ಚಕ್ಕ ಗೊಂಬೆಯನ್ನು ಗಟ್ಟಿಯಾಗಿ ಕಟ್ಟುತ್ತಾರೆ. ಈ ಚಕ್ಕ ಗೊಂಬೆಗೆ ಕೈಕಾಲುಗಳು ಗಟ್ಟಿಯಾಗಿ ಮಾಡಿರುತ್ತಾರೆ. ಆ ಕೈಕಾಲುಗಳಿಗೆ ಸಣ್ಣದೊಂದು ದಾರ ಕಟ್ಟಿ ಈ ಗೊಂಬೆಯನ್ನು ಆಡಿಸುತ್ತಾರೆ. ತೊಗಲು ಗೊಂಬೆಯಾಟ ಮತ್ತು ಬಾಗವತೆಯನ್ನು ಆಡಿಸುವ ವ್ಯಕ್ತಿ ಹಾಸ್ಯ ಹಾಡು ಹೇಳುತ್ತಾರೆ. ಇದು ಪ್ರಜೆಗಳಿಗೆ ವಿನೋದವಾಗಿ ಕಾಣಿಸುತ್ತದೆ.

**ಭಸ್ಮಾಸುರನ ವೇಷ :** ಈ ವೇಷ ಹಾಕುವವನು ಸಾಮಾನ್ಯವಾಗಿ ತಲೆಗೊದಲಿನ ಗಿರ್ದಾ ಬಿಟ್ಟಿರುತ್ತಾನೆ. ಮುಖಕ್ಕೆ ಹಳದಿ, ಕೆಂಪು ಹಾಗೂ ಬಿಳಿ ಬಣ್ಣಗಳನ್ನು ಬೇಕಾದ ಪ್ರಮಾಣದಲ್ಲಿ ಮಿಶ್ರಮಾಡಿ ಬಳಿದುಕೊಂಡು ಕಣ್ಣುಬ್ಬುಗಳನ್ನು ಕರಿ ಬಣ್ಣದಿಂದ ದಪ್ಪವಾಗಿ ತೀಡಿ ಅವುಗಳ

ಕೆಳಗೆ ಕಣ್ಣಿನ ಸುತ್ತು ಕೆಂಪು ಹಾಗೂ ಹಳದಿ ಬಣ್ಣದ ಪಟ್ಟೆಗಳನ್ನು ಎಳೆದು, ಕಣ್ಣುಬ್ಬು ಹಾಗೂ ಪಟ್ಟೆಗಳ ಅಂಚಿನಲ್ಲಿ ಕಣ್ಣಿನ ಸುತ್ತೂ ಕಪ್ಪು ಮತ್ತು ಬಿಳಿ ಬಣ್ಣದಿಂದ ಮೂರು ಅರ್ಧಚಂದ್ರಾಕಾರದ ಪಟ್ಟೆಗಳನ್ನೆಳೆದು ಅವುಗಳ ಮಧ್ಯದಲ್ಲಿ ಮೂಗಿನ ನೇರದಲ್ಲಿ ನೀಲಿ ಬಣ್ಣದ ಅಗಲವಾದ ಚುಕ್ಕಿಯನ್ನಿಟ್ಟು, ದಪ್ಪನಾದ ಕೃತಕ ಮೀಸೆಯನ್ನು ರಬ್ಬರ್ ಸೆಲ್ಲೋಫೇನ್‌ನಿಂದ ಅಂಟಿಸಿಕೊಳ್ಳುತ್ತಾನೆ. ಹಿಂದೆ ದಾರದಿಂದ ಕಟ್ಟಿಕೊಳ್ಳುವ ಅಭ್ಯಾಸವಿತ್ತೆಂದು ತಿಳಿದುಬಂದಿದೆ. ತುಟಿಗಳಿಗೆ ಕೆಂಪು ಬಣ್ಣ ಹಚ್ಚಿ ಗದ್ದದ ಮೇಲೊಂದು ಕೆಳಮುಖವಾಗಿರುವಂತೆ ಕಪ್ಪು ಬಣ್ಣದ ಅರ್ಧ ಚಂದ್ರಾಕಾರದ ಪಟ್ಟಿ ಎಳೆದಿರುತ್ತಾನೆ. ಕಿವಿಗೆ ದಪ್ಪ ಹಾಗೂ ಹಗುರವಾದ ಹೊಳೆಯುವ ಗುಂಡುಗಳನ್ನು ಇಳಿಬಿಟ್ಟಿರುತ್ತಾನೆ. ಎದೆಗೆ ಹೊಳೆಯುವ ಕವಚ, ಕುತ್ತಿಗೆಗೆ ಮೆಡಕಂಠಿ, ತೋಳುಬಂದಿ, ಮಣಿಕಟ್ಟುಗಳನ್ನು ಕೈಗಳಿಗೆ ಕಟ್ಟಿ, ಕೆಂಪು ಬಣ್ಣದ ಝರಿ ಪಂಚೆಯಿಂದ ಬಿಗಿಯಾಗಿ ಕಟ್ಟಿ ಅದರ ಮೇಲೆ ಸೊಂಟಪಟ್ಟಿ ಕಟ್ಟಿ ಕೊರಳಿಗೆ ಬಣ್ಣ ಬಣ್ಣದ ಕಾಗದಗಳಿಂದ ಮಾಡಿದ ಹೂವಿನ ಹಾರವನ್ನು ಹಾಕಿಕೊಂಡು ಕೈನಲ್ಲೊಂದು ಹಗುರಾದ ಗದೆ ಹಿಡಿದಿರುತ್ತಾನೆ.

**ಸಾಕಲೇಷಂ (ಅಗಸನ ವೇಷ) :** ಮೊಣಕಾಲವರೆಗೆ ಕಚ್ಚೆಹಾಕಿ ಕಟ್ಟಿರುವ ಪಂಚೆ, ಟೈಲರ್ ಹೊಲೆದಿರುವ ಬನಿಯನ್ ತೊಟ್ಟು, ತಲೆಗೆ ವಲ್ಲಿ ಸುತ್ತಿ, ಹೆಗಲ ಮೇಲಿನಿಂದ ಬೆನ್ನಿನ ಮೇಲೆ ಇರುವಂತೆ ಒಂದು ಬಟ್ಟೆಗಂಟನ್ನು ಹೊತ್ತಿರುತ್ತಾನೆ. ಈ ವೇಷಕ್ಕೆ ಯಾವ ಬಣ್ಣವನ್ನೂ ಬಳಿದುಕೊಳ್ಳುವುದಿಲ್ಲ.

**ದಾಸರೇಷಂ (ದಾಸರ ವೇಷ) :** ತಲೆಯ ಬಿಳಿಪೇಟ, ಬರಿ ಮೈ, ಭುಜದ ಮೇಲಿನಿಂದ ಬಲ ಭುಜದ ಕೆಳಕ್ಕೆ ಇಳಿ ಬೀಳುವಂತೆ ಕಟ್ಟಿರುವ ಜನಿವಾರ, ಹಣೆಯ ಮೇಲೆ ಮೂರು ನಾಮ, ಎದೆಗೆ ಅನಿಸಿ ಇಳಿಬಿಟ್ಟಿರುವ ತಂಬೂರಿ, ಎಡಗೈನಲ್ಲಿ ಚಕ್ಕೆ, ಬೆನ್ನಿನ ಮೇಲೊಂದು ಶಲ್ಯ, ಬಿಳಿ ಕಚ್ಚೆ ಪಂಚೆ, ಕಾಲಿಗೆ ಗೆಜ್ಜೆ, ಈ ವೇಷಕ್ಕೆ ಯಾವ ಬಣ್ಣವನ್ನೂ ಬಳಿದು ಕೊಳ್ಳುವುದಿಲ್ಲ. ದಾಸರ ವೇಷದಲ್ಲಿ ಪುರಂದರ, ಕನಕದಾಸ, ಕಬೀರದಾಸರ ವೇಷಗಳು ಹಾಕಿ ಅವರು ಹುಟ್ಟು, ಪದ್ಯ ಹಾಡು ವಿಸ್ತಾರವಾಗಿ ತಿಳಿಸುವರು.

### ಜಂಗಮೈಯ್ಯವಾಲ್ಕಂ

**ಶಂಖು (ಜಂಗಮ ವೇಷ) :** ಈ ವೇಷವನ್ನು ಬುಡ್ಗ ಭಾಷೆಯಲ್ಲ ಪಿಟಿಕ್ಯಾ ವಾಲ್ಕಂ ಎಂದು ಕರೆಯುತ್ತಾರೆ. ಕಾವಿಬಟ್ಟೆ ಧರಿಸಿ ಕೊರಳಲ್ಲಿ ಲಿಂಗ, ರುದ್ರಾಕ್ಷಿಮಾಲೆ ಧರಿಸಿ ಹಣೆಯಲ್ಲಿ ವಿಭೂತಿ ಧರಿಸಿ, ಒಂದು ಕೈಯಲ್ಲಿ ಘಂಟೆಯನ್ನು ಅಳಡಿಸುತ್ತಾ; ಮತ್ತೊಂದು ಕೈಯಲ್ಲಿ ಶಂಖವನ್ನು ಊದುತ್ತಾ ಹರಹರ ಮಾಹಾದೇವ ಜಂಗಮಯ್ಯ ಬಂದಿದ್ದೇನೆ ಎಂದು ಭಿಕ್ಷೆಬೇಡುವನು ವಿಶೇಷವಾಗಿ ಸಂಕರಮಣ ಹಬ್ಬದಲ್ಲಿ ಜಾಸ್ತಿ ಪ್ರಾಮುಖ್ಯತೆ ಇಡುವರು.

**ತಾಟಿ ವಾಲ್ಕಂ (ಬ್ರಾಹ್ಮಣ ವೇಷ) :** ಒಂದು ಕೈಯಲ್ಲಿ ಕಮಂಡಲ ಮತ್ತೊಂದು ಕೈಯಲ್ಲಿ ತಾಳಿಪತ್ರಗ್ರಂಥ ಹೆಗಲಿಗೊಂದು ಚೀಲ ಕೊಂಕಳಲ್ಲಿ ಒಂದು ಛತ್ರಿ ಕುತ್ತಿಗೆಯಲ್ಲಿ ರುದ್ರಾಕ್ಷಿ ವಿಭೂತಿ ಧರಿಸಿ ಬ್ರಾಹ್ಮಣ ಭಾಷೆಯನ್ನು ಉಚ್ಚರಿಸುತ್ತಾ ಅವರ ಜೀವನ ಸರಪಳಿ ಸಂಬಂಧಿಸಿದ ಕುಲಗೋತ್ರ ಆಚಾರ ವಿಚಾರಗಳನ್ನು ಹೇಳುತ್ತಾ ಅವರ ವಂಶದ ಪರಂಪರೆ ಹೇಳುತ್ತಾ ಭಿಕ್ಷಾಟನೆ ಮಾಡುವರು.

ಬಾಲಸಂತರ ವೇಷ : ಬಾಲಸಂತರ ವೇಷವನ್ನು ಅಲಿಗೆ ಪಂತು ಎಂದು ಕರೆಯುತ್ತಾರೆ. ತಲೆಗೆ ಕಾವಿರುಮಾಲನ್ನು ಸುತ್ತಿ ಕಾವಿ ದೊತರ ಅಂಗಿ ತಾವೇ ತಯಾರಿಸಿಕೊಂಡಿರುವ ಬಣ್ಣದ ಬಣ್ಣ ಬಟ್ಟೆಗಳ ವಸ್ತ್ರವನ್ನು ಹಾಕಿಕೊಂಡು ಹೆಗಲಮೇಲೆ ಬಿದಿರಿನ ದಬ್ಬೆಯ ಎರಡು ಬದಿಗಳಲ್ಲಿ ಜೋಳಿಗೆಗಳು ಹಾಕಿ ಕೈಯಲ್ಲಿ ಘಂಟೆ ಮತ್ತು ಶಂಖು ಹಣೆಗೆ ವಿಭೂತಿ ಕುಂಕುಮ ಧರಿಸಿ ಮುಂಜಾನೆ ೪ರ ಸಮಯ ಮನೆ ಮನೆಗೆ ಹೋಗಿ ಘಂಟೆಯನ್ನು ಬಾರಿಸುತ್ತಾ ಶಂಕನು ಊದುತ್ತಾ ಇಷ್ಟಾದೇವತೆಗಳನ್ನು ನೆನೆಯುತ್ತಾ ಅರಿಕೆಮಾಡುವುದು ನಂತರ ಬೆಳ್ಳಿಗೆ ಮನೆಮನೆಗೆ ಬಂದು ಚಿಕ್ಕಮಕ್ಕಳಿಗೆ ಆರ್ಶಿವಾದ ಮಾಡಿ ಬಾಲಸಂತ "ಸಂತೋಷಂಗ ಉಂಡಾಲಿ" ಬಾಲಕರು ಸಂತೋಷವಾಗಿ ಇರಬೇಕೆಂದು ಹರಿಕೆ ಮಾಡುವರು. ಇದರ ಬಗ್ಗೆ ಅನೇಕ ಸಂಶೋಧಕರು ಅವರ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಇದಕ್ಕೆ ರಾಮಾಯಣದ ಒಂದು ನಿದರ್ಶನವನ್ನು ಹೀಗೆ ಹೇಳುತ್ತಾರೆ. ರಾಮನು ಸೀತೆಯ ಮೇಲೆ ಅನುಮಾನಪಟ್ಟು ತುಂಬು ಗರ್ಭಿಣಿಯನ್ನು ಅರಣ್ಯದಲ್ಲಿ ಬಿಟ್ಟು ಬಂದಾಗ ಸೀತೆಗೆ ಲವಕುಶ ಹುಟ್ಟುವರು. ಲಕ್ಷ್ಮಣನಿಗೆ ಸೀತೆ ಮತ್ತು ಅವರ ಮಕ್ಕಳನ್ನು ನೋಡಿ ಆರ್ಶೀವಾದ ಮಾಡಲು ಅಣ್ಣನ ಅಜ್ಞೆಯನ್ನು ಮೀರಬೇಕಾಗಿ ಬರುತ್ತದೆ. ಅದಕ್ಕಾಗಿ ಈ ಭಾಲಸಂತವೇಷ ಧರಿಸಿ ಹೋಗಿ ಸೀತೆ ಮತ್ತು ಮಕ್ಕಳಿಗೆ ಆರ್ಶೀವಾದಿಸಿ ಬರುತ್ತಾನೆ. ಈ ನೀತಿ ಈ ಸನ್ನಿವೇಶವನ್ನು ಬಾಲಸಂತರು ಎನ್ನುತ್ತಾರೆ.

ಬಾಲಸಂತು ಘಂಟಾ ಶಂಖಿ ಊದಿ ದೇವರ ಹರಕೆ ಮಾಡುತ್ತಾ ಅಲೆದರೆ ಭೂತ ಪ್ರೇತಗಳು ಅಲ್ಲಿ ಸುಳಿಯುವದಿಲ್ಲವೆಂದು ಒಂದು ನಂಬಿಕೆ ಬಾಲಸಂತರು ಅದಕ್ಕೆ ಈ ರೀತಿಯಾಗಿ ಹರಕೆ ಮಾಡುವರು.

ಹರಹರ ಸೀತಮ್ಮ - ಅಯೋದ್ಯರಾಮ
ಭಾಣತಿ ನನ್ನವ್ವ - ಬಯಲಿಗೆ ಬಾರಮ್ಮ
ಹಾಲುಕುಡಿಯುವ ನಿನ್ನ ಬಾಲಗಳು - ಆರೋಗ್ಯ ಹ್ಯದಾವೆ
ನಿನ್ನ ಹಣೆಯ ಕುಂಕುಮವು - ಚಿರಕಾಲ ಉಳಿಯಲೀ
ಈ ಮಾತು ಹೇಳುತ್ತಾನೆ -ನಿನ್ನ ರಾಮಯ್ಯ
ಓ ತಾಯಿ ಸೀತಮ್ಮ - ಬಾಣತಿ ಬಾರೆಮ್ಮ
ಓ ಹುಚ್ಚು ಸೀತಮ್ಮ - ನಿನ್ನ ಮನಸ್ಸು ಬಿಚ್ಚಮ್ಮ
ಅಯ್ಯೋದ್ಯ ಪಟ್ಟಣದ - ಮುತ್ತೈದೆ ಬಾರಮ್ಮ
ಗೊರಾರಣ್ಣ ಅಡವಿಯಲ್ಲಿ - ಬಿಟ್ಟುಬಂದ ಪಾಪಿ ನಾನು
ನಿನ್ನ ಮುದ್ದು ಮಕ್ಕಳನ್ನು - ಆಡಿಸಲು ಬಂದಿರುವ ಈ ಬಾಲಸಂತ.

ಭೈರಾಗಿ ಪಂತು : ಕಾವಿ ಬಟ್ಟೆ, ಕಾವಿ ಪೇಟಾ ಹಾಗೂ ಕೊರಳಲ್ಲಿ ರುದ್ರಾಕ್ಷಿಮಾಲೆ ಹಣೆಗೆ ವಿಭೂತಿ ಧರಿಸಿ ಕೈಯಲ್ಲಿ ಶಂಖ ಘಂಟೆ ಹಿಡಿದು ಬಗಲಿಗೆ ಜೋಳಿಗೆ ಹಾಕಿ ಭಿಕ್ಷೆಕೇಳುವ ವೇಷ. ಹಾಕಿ ಕೈವಾರ ತಾತಯ್ಯ ವೀರ ಬ್ರಹ್ಮೇಂದ್ರ ಮತ್ತು ಯೋಗಿ ವೇಮನ್ನರ ತತ್ವ ಪದಗಳನ್ನು ಹೇಳುತ್ತಾರೆ. ಇವರು ಬಳಸುವ ಸಾಹಿತ್ಯ "ಕೈವಾರ ತಾತಯ್ಯ ಜೀವಾನಾವಿದಿಕಾನಾ

ನೀ ಉಂಡೇಟಿ ಇಂಟಿಮರ್ಮಮುಲೆ ರುಗಾದ್ರ, ವೀರ ಬ್ರಹ್ಮೇಂದ್ರನ ಮಾಯಾದಾರಿ ಮರಳಾ ಬಂಡಿರಾ ಇದಿ ಆರು ಚಕ್ರಮುಲಾ ಅದುರಿ ಪೋದಮುರಾ ಯೋಗಿ ವೇಮನ್ ಶ್ಲೋಕ ಭಿಕ್ಷೆಗಾಳ್ಳು ಇಂಟ್ಲಲ್ಲೋ ಕ್ಷೇಮಮುಗಾ ವಚ್ಚುರಾ ವಿಶ್ವದಾಬಲರಾಮ ವಿನುರಾ ಮೇಮ" ಎಂದು ಬಾಲೆ ಕಟ್ಟಾದ ಕೋಲಾರ ಮುಳುಬಾಗಿಲು ವಿಭಾಗ ಕಡೆಗಳಲ್ಲಿ ಈ ವೇಷಗಳು ಪ್ರಚಲಿತವಾಗಿವೆ. ಅಯಂಗಾರ ಅವರ ವರದಿಯಲ್ಲಿ ಬೈರಾಗಿ ಅಪರಾಧಿ ಬುಡಕಟ್ಟನ್ನು ಕುರಿತು ಹೀಗೆ ವಿವರಗಳನ್ನು ನೀಡಿದ್ದಾರೆ

Bairagis are notified as a Criminal Tribe in Bhopal State Bairagis are a class of religious mendicants who roam over the whole of India and are recruited from North Indian Castes. The Bairagis of Bhopal claim to have descendent from the Rajputs and originally belonging to Gwalior and Karauli. They live in *Deras* (Tents) or groups and keep their women-folk with them. They are habitual house are Akers. They seldom keep their stolen property in their camps. They do not generally commit crimes near the locality they live in, but move about far and wide in gangs for the purpose. In Bhopal they are not nomadic ಬೈರಾಗಿ ವೇಷ ಹಾಕುವ ಬುಡ್ಗ ಜಂಗಮರು ಕರ್ನಾಟಕದಲ್ಲಿ ಕಾಣಸಿಗುವರು.

**ಸಾರಪಂತು :** ಬಿಳಿ ಪಂಚೆ ಹಾಗೂ ಜುಬ್ಬಾಧರಿಸಿ ಅದರ ಮೇಲೊಂದು ಅರ್ಧತೋಳಿನ ಇಲ್ಲವೆ ಪೂರ್ಣ ತೋಳಿರುವ ಕೊಟನ್ನು ಧರಿಸಿ ಕಂಕುಳ ಬಗಲಿನಲ್ಲಿ ವೃತ್ತಿ ಇಟ್ಟುಕೊಂಡು ಜೋಳಿಗೆ ಹಾಕಿ ಶಾಸ್ತ್ರ ಶ್ಲೋಕ ಹೇಳಿ ಕಲೆ ಪ್ರದರ್ಶಿಸುವುದು.

**ಶಾಸ್ತ್ರ ಪ್ರದರ್ಶನದ ವಿವರ :** ತಾಳೆಗೆರೆಯ ಪುಸ್ತಕ (ಪಸ್ತಕಮು)ದಲ್ಲಿ ಅನೇಕ ಚಿತ್ರಪ್ರತಿಗಳ ಗೆರೆಗಳಿದ್ದು ಪ್ರತಿ ಗರಿಯಲ್ಲಿ ಒಂದೊಂದು ಸನ್ನಿವೇಶದ ದೈವ ಮತ್ತು ದೃಷ್ಟಾಂತ ಕಥೆಗಳ ಕುರಿತಾದ ಚಿತ್ರಗಳು ಹಾಗೂ ಕೆಲವು ಪ್ರಾಣಿ ಪಕ್ಷಿಗಳ ಚಿತ್ರಗಳು ಕೂಡಾ ಇರುತ್ತವೆ. ಇದರೊಂದಿಗೆ ಒಂದು ಪುಲ್ಲ (ಕಡ್ಡಿ), ಬಿದಿರಿನ ದಬ್ಬಣ ಇಟ್ಟಿರುತ್ತಾರೆ. ಶಾಸ್ತ್ರ ಕೇಳುವವನು ಆ ಪುಲ್ಲದಿಂದ ಪುಸ್ತಕದಲ್ಲಿ ಹಾಕಿ ಒಂದು ಪುಸ್ತಕದ ಗರಿಯನ್ನು ತೆಗೆಯಿಸುತ್ತಾನೆ. ಅದರಲ್ಲಿ ಯಾವ ಚಿತ್ರ ಬಂದಿದೆಯೋ ಆ ಚಿತ್ರದ ವಿಷಯವಾಗಿ ವಿವರಿಸಿ ಮನಸ್ಸಿನಲ್ಲಿ ಅಂದುಕೊಂಡ ಕಾರ್ಯ ಆಗುತ್ತದೆಯೇ ಇಲ್ಲವೊ ಹೇಳುತ್ತಾರೆ. ಹೀಗೆ ಶಾಸ್ತ್ರ ಹೇಳುವಾಗ ಕೇಳುಗನಿಗೆ ಮೂರು ಪ್ರಶ್ನೆಗಳನ್ನು ಕೇಳಲು ಹೇಳುತ್ತಾರೆ.

**ಮೊದಲನೆ ಪುಸ್ತಕ ಗೆರೆಯಲ್ಲಿನ ಸಾರಾಂಶ :** ನೋಡಿ ಸ್ವಾಮಿ ಪಾಂಡವರು ದುರ್ಯೋಧನ ವಾಚಕ ಜೂಜವನ್ನು ಆಡಿ ರಾಜ್ಯ ಸಮೇತ ಹೆಂಡತಿಯನ್ನು ಸೋತು ಪಾಂಡವರು ವನವಾಸಕ್ಕೆ ಹೋಗುವ ಚಿತ್ರ ಬಂದಿದೆ. ಈ ತರಹದ ವನವಾಸದ ಚಿತ್ರ ಬಂದಾಗ ನಿಮ್ಮ ಮನಯಲ್ಲಿ ಯಾವ ಶುಭಕಾರ್ಯಗಳು ಆಗುವುದಿಲ್ಲ ಎಂದು ಹೇಳಿ ಮತ್ತೆ ಪುಲ ಹಾಕಲು ಹೇಳುವರು.

**ಹಗಲು ವೇಷ :** ಬುಡ್ಗ ಜಂಗಮರು ಪ್ರದರ್ಶಿಸುವ ಜಾನಪದ ಕಲೆಗಳಲ್ಲಿ ಹಗಲು ವೇಷ ಒಂದು ಸಾಂಪ್ರದಾಯ. ಹಗಲಿನಲ್ಲಿ ವೇಷವನ್ನು ಧರಿಸಿ ತಮ್ಮ ಕಲಾನೈಪುಣ್ಯವನ್ನು ಪ್ರಜೆಗಳ

ಮುಂದೆ ಪ್ರದರ್ಶಿಸುವವರು ಅದರಿಂದ ಇವರಿಗೆ ಹಗಲು ವೇಷಗಾರರೆಂದು ಹೆಸರು ಬಂದಿದೆ. ಒಬ್ಬ ವ್ಯಕ್ತಿ ಆಯಾ ಸಂದರ್ಭದಲ್ಲಿ ಅನೇಕ ವೇಷಗಳನ್ನು ಪ್ರದರ್ಶಿಸುವುದರಿಂದ 'ಬಹುರೂಪಿ'ಗಳೆಂದು ಕರೆದಿದ್ದಾರೆ. ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿ ಕಾಣಿಸುವರು. ಜಾನಪದ ಕಲೆಗಳಲ್ಲಿ ವಿಶೇಷವಾಗಿ ಜನಮನ್ನಣೆ ಪಡೆದಿರುತ್ತದೆ.

ಆಂಧ್ರಪ್ರಾಂತ್ಯದಲ್ಲಿಯೂ ಸಹ ಇವರನ್ನು "ಪಗಟಿ ವೇಷಗಾಳು" ಎಂದು, ತಮಿಳು ನಾಡು ಪ್ರದೇಶದಲ್ಲಿಯೂ ಸಹ ಪೊಗಟಿ ಪಿಚ್ಚಗಳ್ ಪ್ರಚಾರ ಹೊಂದಿದೆ. ಇವರು ಮಹಾರಾಷ್ಟ್ರ, ರಾಜಸ್ಥಾನ್, ಗುಜರಾತ್, ಮೊದಲಾದ ಉತ್ತರಾದಿ ರಾಷ್ಟ್ರಗಳಲ್ಲಿ ಕೂಡ ಈ ಜಾನಪದ ಕಲಾರೂಪವು ಪ್ರದರ್ಶಿಸಿ ಪ್ರಸಿದ್ಧಿ ಪಡೆದ್ದಿದೆ. ಅಲ್ಲಿಯೂ ಸಹ ನೆಲೆ ಮಾಡಿದ್ದಾರೆ. ಕೆಲವರು ಕೆಲವು ತಿಂಗಳಿನಿಂದ ವರ್ಷದವರೆಗೆ ಅಲ್ಲಿ ನೆಲೆಯೂರಿರುವುದುಂಟು. ಮೆಹಭೂಬುನಗರ ಮಾನಕೊಂಡ ಸಮೀಪ ಓಬಲಾಪಿಪಲ್ಲಿ ನಿವಾಸ ತುರುಪಾಟ್ಟಿ ನಗರ ಕರ್ನೂಲು ವಿಭೂತಿ ರಾಮಯ್ಯ ನಲ್ಲಗೊಂಡಜಿಲ್ಲೆ ಮಿರ್‍ಯಾಲಗುಂಟ ಪರಿಸರದಲ್ಲಿ ಸಿರಿವಾಟರಾಮದಾಸ ವರಂಗಲು ಕಮ್ಮ್‌ಮು, ಕರ್ನೂಲು ಮೊದಲಾದ ಪ್ರಾಂತ್ಯದಲ್ಲಿ ವೃತ್ತಿ ಕಲಾವಿದರು ಇರುವುದು ಕಂಡುಬರುತ್ತದೆ.

**ಮುರಂಡಿ ಪಂತು ವೇಷ :** ಶ್ರೀಮಠಗಳ ಶ್ರೀ ಪುರುಷರಂತೆ, ಬಿಳಿ, ಪಂಚೆ, ಕಾವಿ ಅಂಗಿ ಕಾವಿ ಪೇಠ, ಹಣೆಯಲ್ಲಿ ಗಂಧವನ್ನು ಹಚ್ಚಿ ಪತ್ರಗಳನ್ನು ತೆಗೆದುಕೊಂಡು ಮೈಮೇಲೆ ಶಾಲು ಹಾಕಿಕೊಂಡು, ನಾವು ಶ್ರೀಮಠದಲ್ಲಿ ಕೆಲವೊಂದು ಭಕ್ತಾದಿಗಳಲ್ಲೆ ಊಟ ಉಪಚಾರ ನಡೆಸ ಬೇಕೆಂದು ಕೇಳಿ ಅವರು ಕೊಡುವ ಧಾನವನ್ನು ಸ್ವೀಕರಿಸುತ್ತಾರೆ. ಅದನ್ನು ತೆಗೆದುಕೊಂಡು ಬಂದು ತಾವಿರುವ ಸ್ಥಳದಲ್ಲಿ ಧರಿಸಿದ ವೇಷವನ್ನು ಬಿಚ್ಚಿಟ್ಟು ಬೇಟೆಗೆ ತೆರಳುತ್ತಾರೆ.

**ಪಾತ್ಸಾಮ ಪಂತು :** ಬ್ರಾಹ್ಮಣರೂಪ ಕೈಯಲ್ಲಿ ಪಂಚಾಂಗ, ಕವಡೆ ಹಿಡಿದು ಮನೆ ಮನೆಗೆ ತೆರಳಿ ಜ್ಯೋತಿಷ್ಯ ಶಾಸ್ತ್ರ ಹೇಳುತ್ತಾರೆ. ಸಾದು ಪಂತು ಈ ಪಂತನ್ನು ಬಾಳ್ಯೆಕಟ್ಟಿದವರು ಪ್ರದರ್ಶಿಸುತ್ತಾರೆ. ಕಾವಿವಸ್ತ್ರ, ಕಾವಿ ಪೇಟಾ ರುದ್ರಾಕ್ಷಿಮಾಲೆ ಹಾಕಿ ಘಂಟೆಯನ್ನು ಬಾರಿಸುತ್ತ ಮೌಖಿಕ ಕಾವ್ಯಗಳನ್ನು ಮತ್ತು ಕೈವಾರ ತಾತನ ಹಾಡುಗಳನ್ನು ಹಾಡುತ್ತ ಕಲೆಯನ್ನು ಪ್ರದರ್ಶಿಸುತ್ತಾರೆ.

**ದಾರಿಗ ಪಂತು :** ತುರಕಾಣಮಕಟ್ಟದಲ್ಲಿ ಕೆಲವು ಜನ ಲುಂಗಿ ಕಟ್ಟಿಕೊಂಡು ಅರ್ಧಅಂಗಿ ಹಾಕಿ ಅದರ ಮೇಲೊಂದು ಜಾಕೇಟು ಹಾಕಿ ನವಿಲಿನ ಗರಿಗಳ ಕಟ್ಟನ್ನು ಹಿಡಿದುಕೊಂಡು ಫಕೀರನಂತೆ ಮನೆಮನೆಗೆ ತೆರಳಿ ಕಲೆ ಪ್ರದರ್ಶನ ಮಾಡುವುದು.

ಪ್ರಸಂಗಗಳು

**ಪುರುಷ ವೇಷ :** ನಮಸ್ಕಾರ ನಾವು ವಡ್ಡರ ಜನರು, ನನ್ನ ಹೆಸರು ಸತ್ತ್ಯಯ್ಯ, ಈ ಗ್ರಾಮಕ್ಕೆ ಬಂದಿದ್ದೇವೆ, ನಮಗೆ ಏನೂ ಕೆಲಸವಿಲ್ಲ, ನಾಲ್ಕು ಕುಟುಂಬದವರು ಬಂದಿದ್ದೇವೆ. ಇರುವುದಕ್ಕೆ ಮನೆ ಇಲ್ಲ. ಹುಡುಗರಿಗೆ ಗಂಜೀಇಲ್ಲ. ಮರಾಮರ ಎಂದು ವರ ಮರ ಗುತ್ತಾಇದ್ದಾರೆ ದೊರೆಗಳು ಏನಾದರೂ ಆಧಾರ ಮಾಡುತ್ತಾರೆಂದು ಬಂದಿದ್ದೇವೆ. ಮೂರು ಬಂಡಿಗಳಿವೆ. ಅದರಲ್ಲಿ ನಾನು

ದೊಡ್ಡವನು. ಅವರು ಏನೂ ತಿಳಿಯದವರು. ಈಗ ನಾನು ಬಂದಿದ್ದೇನೆ. ಬಂಗ್ಲೆ ಕೆಲಸ ಹೇಳುತ್ತೀರಾ? ಅಥವಾ ಬಾವಿ ಕೆಲಸ ಹೇಳುತ್ತೀರಾ? ಕೆರೆ ಕೆಲಸ ಹೇಳುತ್ತೀರಾ? ಕಾಲುವೆ ಕೆಲಸ ಹೇಳುತ್ತೀರಾ? ಕಂದಕಾಳು ತಗಿಸ್ತೀಯಾ? ಕಲ್ಲು ಹೊಡೆಸುತ್ತೀರಾ? ಯಾವ ಕೆಲಸವಾದರೂ ನಾನು ಮಾಡುತ್ತೇನೆ ಎಂದುತಮ್ಮ ಕಲೆಯನ್ನು ಪ್ರದರ್ಶಿಸುತ್ತಾರೆ.

**ಸ್ತ್ರೀ ವೇಷ :** ನಾನು ಶುಕ್ರವಾರ ದಿನ ಹುಟ್ಟಿದ್ದೇನೆ. ನನ್ನ ಹೆಸರು ಕುಳಿಸಿ ಇಟ್ಟಿದ್ದಾರೆ. ಈತ ಸೊದರ ಅತ್ತೆಯ ಮಗನಂತೆ, ಸೋದರ ಅತ್ತೆ ನಾನು ಐದು ತಿಂಗಳ ಗರ್ಭಿಣಿ ಸ್ತ್ರಿ. ಹುಳಿಬೆಲ್ಲ ಬೇಕೆಂದರೆ ಇಲ್ಲ ಸಿಹಿಯಾದ ಉಂಚ್ಚೆಕಾಯಿ, ಹುಣಸೆಕಾಯಿ ತೆಗೆದುಕೊಂಡು ಬನ್ನಿ ಎಂದರೆ ಇಲ್ಲ. ಇವನನ್ನು ಮದುವೆ ಮಾಡಿಕೊಂಡಿದ್ದಕ್ಕೆ ನನಗೇನು ಸುಖವಿಲ್ಲ. ದೊರಗಳ ಎದುರಿಗೆ ನಮ್ಮಿಬ್ಬರ ಇಸ್ಸಾ ಹೇಳಿ, ನನ್ನ ತವರೂರಿಗೆ ಹೋಗಬೇಕೆಂದುಕೊಂಡು ಬಂದಿದ್ದೇನೆ. ಪ್ರಭು ಶರಣ್ರಿ ನನ್ನ ತಪ್ಪಿನ ಅರ್ಥ ಏನಾದರೂ ನನಗೆ ಹೇಳಿ, ನನ್ನ ತವರು ಮನೆಗೆ ಕಳಿಸಿಕೊಡುವುದು ಇವನ ಹಂತೆಕ ಬಂದದಿನ ಕೆಲಸಕ್ಕೆ ಹೋದರೆ, ಮತ್ತು ಹೆಚ್ಚು ಕೆಲಸ ಮಾಡುವುದು ಕಡಿಮೆ. ಒಂದು ಸಾರಿ ನನಗೆ ಕಾಲು ನೋಯುತ್ತಿವೆ ನನಗೆ ನಡುವು ನೋಯುತ್ತಿದೆ. ನನಗೆ ಮೈ ನೋಯಿತ್ತಿದೆ. ಎಂದು ಕೂರುತ್ತಾನೆ. ಇವನು ಕೆಲಸ ಮಾಡುವುದಿಲ್ಲ. ನನ್ನ ಈ ಪ್ರಭುಗಳಿಗೆ ಹೇಳಿ ಕೆಲಸ ಮಾಡದಿದ್ದಕ್ಕೆ ಮರಕ್ಕೆ ಕಟ್ಟಿಸುತ್ತೇನೆ. ಬಗ್ಗಿಸಿ ಬಂಡೆಗಳಿಲೆಸುತ್ತೇನೆ.

**ಪುರುಷ ವೇಷ :** ಏನೇಂದಿಯೇ ನನ್ನ ಸೊದರತ್ತೆ ಮಗಳೆ, ಕೆಲಸ! ಗಿಲಸ ಮಾಡಲಾರೆನೆ! ಯಾವ ಕೆಲಸವೆಂದರೆ ಆ ಕೆಲಸ ಮಾಡುತ್ತೇನೆ. ಬಂಗ್ಲ ಕೆಲಸ ಬಾವಿ ಕೆಲಸ, ಸರಾಸರಿ ಮಾಡುತ್ತೇನೆ ಬಂಗ್ಲಕೆಲಸ ಹೇಗೆ ಮಾಡಬೇಕು ಹಾಗೆ ಮಾಡುತ್ತೇನೆ.

ಬುನಾದಿ ತೆಗೆಯಬೇಕು, ಬುನಾದಿ ಮೇಲೆ ಅಥವಾ ಕೆಳಗೆ (ಒಳಗೆ) ಕಲ್ಲು ಹಾಕಬೇಕು ಕಲ್ಲು ಮೇಲೆ ಹಾಕಬೇಕು ಮೇಲೆ ಬೂದಿ ಹಾಕಬೇಕು ಆ ಬೂದಿ ಮೇಲೆ ಎದುರು ಇಡಬೇಕು. ಉದ್ದಂತಕಲ್ಲುಗೆ ಇಡಬೇಕು ನಾಲ್ಕುದಿಕ್ಕಿಗೆ ಓಲೆ ಇಟ್ಟು ಸೀಳು ನಡುಮನೆಯಲ್ಲಿ ಆಗ ಸುಕ್ಕ ಸತ್ತಯ್ಯ ಯಾವಕಡೆಗೆ ಹೋದ, ಸುಕ್ಕ ಸತ್ತಯ್ಯ ಯಾವ ಕಡೆಹೋದ ಎಂದು, ಬಡಿಗೆ, ಕಲ್ಲು ಹಿಡಿದು ದೇಶಗಳಲ್ಲಾ ತಿರುಗಾಡುವರು ನನಗೋಸ್ಕರ. ನಾನು ಮಾಡುವ ಕೆಲಸ ಇಷ್ಟು ಜಾಗ್ರತೆಯಿಂದ ಮಾಡುವೆ. ನಾನು ಯಾವಯಾವ ಕಡೆ ಕೆಲಸ ಮಾಡಿಬಂದಿದ್ದೇನೆ ಗೊತ್ತಾ! ಗೋಲ್ಕಂಡ ಕೋಟೆ ನಾನು ಕಟ್ಟಿಕಿದ್ದೇನೆ. ವರಂಗಲ್ಲು ದರ್ಗ ನಾನು ಕಟ್ಟಿದ್ದೇನೆ. ಚಾರ್‌ಮಿನಾರ್ ನಿಂತು ಕಟ್ಟಿಸಿದ್ದೇನೆ ಪಟ್ಟಣದಲ್ಲಿ ಇರೋ ಕುಣಿಗಲ್ಲುಕೆರೆ ತೋಡಿಸಿದ್ದೇನೆ. ಮೈಸೂರು ಅರಮನೆ ಕಟ್ಟಿದ್ದೇನೆ, ಚಿತ್ರದುರ್ಗಕೋಟೆ ಕಟ್ಟಿದ್ದೇನೆ. ವಿಧಾನ ಸೌಧಕ್ಕೆ ಬುನಾದಿ, ಕಿತ್ತೂರು ಕೋಟೆಗೆ ಕಲ್ಲು ನಾನು ಇಟ್ಟಿನಿ ಹಾಕಿದ್ದೇನೆ ದೇಶ-ದೇಶಗಳ ದೊರೆಗಳು ನನ್ನ ಕರೆಸಿಕೊಂಡು ದೊಡ್ಡ ದೊಡ್ಡ ಬಂಗ್ಲೆಗಳು ಕಟ್ಟಿಸಿಕೊಂಡಿದ್ದಾರೆ. ಈ ಊರಿನಲ್ಲಿ ಗೌಡರ ಬಂಗ್ಲೆಕಟ್ಟಿದ್ದೇನೆ. ಸಾವುಕಾರರ ಬಾವಿ ತೋಡಿಸಿದ್ದೇನೆ. ಈ ದೊರೆಗಳು ತೇಗೆಸಿಕೊಂಡಿದ್ದಾರೆ. ಆ ಕಂದಕ ತೆಗೆಸಿಕೊಂಡ ಹಣ ಇನ್ನು ಕೊಟ್ಟಿಲ್ಲ. ಅದಕ್ಕೆ ಹಣ ತೆಗೆದುಕೊಂಡು ಹೋಗಲಿಕ್ಕೆ

ಬಂದಿದ್ದೇನೆ ನಾನು. ದೊರೆಗಳು ಗೋವುದಾನ ಕೊಟ್ಟರೆ, ಭೂದಾನ ಕೊಟ್ಟರೆ, ವಸ್ತ್ರದಾನ ಕೊಟ್ಟರೆ, ಸುವರ್ಣದಾನ ಕೊಟ್ಟರೆ ತೆಗೆದುಕೊಂಡು ಹೋಗುತ್ತೇನೆ.

**ಮುಂದೆಚ್ಚು ವೇಷ :** ಇದು ಯಾದವ ಸಮುದಾಯದ ಕುರಿ ಮತ್ತು ಮೇಕೆಗಳ ಹಟ್ಟಿಗಳಲ್ಲಿ ಕಥೆ ಹೇಳಿದರೆ ಅವರ ಮೇಕೆಗಳಿಗೆ ವರ್ಷಾಂತದವರೆಗೆ ಯಾವ ರೋಗರುಜನಿ ಬರುವುದಿಲ್ಲ ಎಂದು ನಂಬಿಕೆ ಈ ವೃತ್ತಿ ಸಂಬಂಧಿಸಿದ್ದಂತೆ ಬುಡ್ಗ ಜಂಗಮ ಕುಲಸ್ತನು ಈ ರೀತಿ ಹೇಳುತ್ತಾನೆ. "ಒಬ್ಬ ಬುಡ್ಗ ಜಂಗಮ ಸ್ತ್ರೀಯಾದವ ಪುರುಷನ ಸಂಬಂಧವಾಗಿ ಅವರಿಗೆ ಮಕ್ಕಳು ಹುಟ್ಟುತ್ತಾರೆ. ಆಗ ತನ್ನನು ನಂಬಿ ಬಂದ ಆಸ್ತ್ರೀಗೆ ಸ್ವಲ್ಪ ಮೇಕೆ ತಾಡನ್ನು ಕಟ್ಟಿ ಹೊರಗೆ ಕಳುಸುತ್ತಾನೆ. ಆಗ ಆ ವಂಶದಿಂದ ಮಕ್ಕಳು ಯಾದವರ ಗೋತ್ರಗಳನ್ನು ಹೇಳುತ್ತಾ ಅವರನ್ನು ಆಶ್ರಯಿಸುತ್ತಾರೆ ಎಂದು ತಿಳಿಸುವನು.

ಆದರೆ ಪರಿಶೋಧನೆ ಮಾಡಿದ ಸಂಶೋಧಕರು ಐಯಲ ರಾಜು ನಾರಾಯಣ ಮಹಾತ್ಮಡು ಹಂಸ ಇವರು ಮಂದಚ್ಚಿರಲ್ಲಿ ವಿವರಣೆ ಕೊಡುತ್ತಾನೆ. ಇದು ಈ ವೇಷವನ್ನು ತೊರುಪಾರಿ, ವಿಭೂತಿ ಸಿರಿವಾಟಿ ಬೆಡಗಿನವರು ಈ ವೇಷವನ್ನು ಹಾಕುತ್ತಾರೆ. ಇವರು ಅರ್ಧಗಂಜ (ಗೋದಡ) ಯಾದವ ದೇವತೆಗಳ ತೊಗಲು ಗೊಂಬೆಗಳು ಇಪ್ಪತ್ತು, ಮೂವತ್ತು ಇರುತ್ತವೆ. ಈ ಗೊಂಬೆಗಳನ್ನು, ಮಲ್ಲನ್ನ, ಬೀರನ್ನ, ಅಚ್ಚೆಯ್ಯ, ಗಂಗಮ್ಮ, ಮೊದಲಾದ ಗೊಂಬೆಗಳಿರುತ್ತವೆ. ಇವರು ಯಾದವ ಸಂಬಂಧಿಸಿದ ಕಥೆಗಳನ್ನು ಹೇಳುತ್ತಾರೆ. ಅವರ ಹಟ್ಟಿಗಳಲ್ಲಿ ಕಥೆಗಳನ್ನು ಹೇಳಿ ಬೆಳಿಗ್ಗೆ ಅವರ ಮನೆಮನೆಗೆ ಹೋಗಿ ಮನೆಗಳಲ್ಲಿ ದವಸಧಾನ್ಯ ತೆಗೆದುಕೊಂಡು ಬರುತ್ತಾರೆ.

೧. ಯರ್ರನೂಕರಾಜ ಕಥೆ ೨. ಯಲ್ಲಮ ಕಥೆ ೩. ಐಷಂರಾಜ ೪. ವರರಾಜ ಕಥೆ ೫. ಕರೆಯಪ್ಪನರಾಜಕಥೆ ೬. ಕಾಟಿಮರಾಮರಾಜ ಕಥೆ ೭. ಕೊಮಾರನ ಕಥೆ ೮. ಗಂಗೂ ರಾಜನ ಕಥೆ ೯. ಗಿರಿಜಾಪತಿ ಕಥೆ ೧೦. ದೋನುಕೊಂಡ ಗಂಗರ ಕಥೆ ೧೧. ನಲ್ಲ ಮುಕ್ಕುರಾಜು ಕಥೆ ೧೨. ನಲ್ಲ ಮೇದರಾಜು ೧೩. ಪಲ್ಲಿಕೊಂಡ ರಾಮ ಕಥೆ ೧೪. ಊರಮ್ಮ ಕಥೆ ೧೫. ಪೆದ್ದಮ್ಮ ಕಥೆ ೧೬. ಪದ್ದಿರಾಬು ಕಥೆ ೧೭. ಪೂತುರಾಜ ಕಥೆ ೧೮. ಬೀರಪ್ಪ ಕಥೆ ೧೯. ಬೊಲ್ಲಪುಕಥೆ ೨೧. ಮಂಥಲಾಕಥೆ ೨೨. ಮಾತಾಕಥೆ ೨೩. ಸಿರಿ ಲೊಂಡ ರಾಜು ಕಥೆ.

**ಗೊರಮಯ್ಯ ಪಂತು :** ಸುಲಮ್ಮ ಕಟ್ಟದಲ್ಲಿ ಹಾಕುವ ವೇಷ ಗೊರಮಯ್ಯ ವೇಷ ಕರಿ ಬಿಲಿ ಕೂದಲಿನ ಚರ್ಮವನ್ನು ಟೋಪಿಯನ್ನಾಗಿಮಾಡಿ ತಲೆಗೆ ಹಾಕಿ ಕವಡಿ ಸರಮಾಲೆಯನ್ನು ಹಾಕಿ ಒಂದು ಕೈಯಲ್ಲಿ ಕೊಳಲು ಇನ್ನೊಂದು ಕೈಯಲ್ಲಿ ಡಮರುಗ ಹಿಡಿದು ಇವರು ಕುರುಬ ಸಮುದಾಯಕ್ಕೆ ಗುರುಗಳಾಗಿ ಮನೆ ಮುಂದೆ ನಿಂತು ಭಿಕ್ಷೆ ಬೇಡುತ್ತಾರೆ. ನಾಗಭೂತಾಳಿ, ದೇವ ಭೂತಾಳಿ, ಉಗ್ರಭೂತಾಳಿ, ನರಕ ಭೂತಾಳಿ, ಮತ್ತು ದೂನಾರತೀಗ್ಯಾ ಬಳ್ಳಿ ಬ್ರಹ್ಮಂಡಾ ಬೇರು ಇಂತಹ ಗಿಡಮೂಲಿಕೆಗಳಿಂದ ಔಷಧಗಳನ್ನು ತಯಾರಿಸಿ ಸಣ್ಣಪುಟ್ಟ ವೈದ್ಯಕೀಯವನ್ನು ಮಾಡುತ್ತಾರೆ. ಮತ್ತು ಈ ವೃತ್ತಿ ಕರ್ನಾಟಕದ ನಗಿರಿಗೇರಿ ಗ್ರಾಮ, ಕೋಲಾರ ಜಿಲ್ಲೆ ಮತ್ತು ಆಂಧ್ರ ಪ್ರದೇಶ ರಂಗರೆಡ್ಡಿ ನೆಲಗೊಂಡ, ವರಂಗಲು, ಜಿಲ್ಲೆಗಳಲ್ಲಿ ಬುಡ್ಗಜಂಗಮರು

ಕಂಡುಬರುತ್ತದೆ. ಕಂಡಮಂಚಿ ಚಂದ್ರಯ್ಯ ಇವರು ಪೂಜ ಗೊಲ್ಲ ಸಂತತಿಯವರು ಎಂದು ಹೇಳುತ್ತಾ ಮತ್ತು ಆ ವೇಷದ ಬಗ್ಗೆ ನಂಬಿಕೆಯನ್ನು ಹುಟ್ಟಿಸುತ್ತಾ ಭಿಕ್ಷೆಯನ್ನು ಬೇಡುತ್ತಾರೆ.

**ಹರಿ ಕಥೆಗಳು :** ಇದನ್ನು ಯಡವಲಿ ಮೋತಿ ಪೇಲೂರಿ ಮೊದಲಾದ ಬೆಡುಗಿನವರು ಹರಿಕಥೆಗಳನ್ನು ಹೇಳುವುದು ಇವರ ಪೂರ್ವಜರ ವೃತ್ತಿ ಹಾರ್ಮೋನಿಯಂ ತಬಲ, ವೈಲಿನ್ ಮೊದಲಾದ ವಾದ್ಯಗಳನ್ನು ಹಿಡಿದು ಚಾರಿತ್ರಿಕ, ಪೌರಾಣಿಕ, ಮತ್ತು ಸಾಮಾಜಿಕ ಮತ್ತು ರಾಗರೂಪದಲ್ಲಿ ಹೇಳುತ್ತಾರೆ. ಕಡಪ ಮತ್ತು ಮೇಹಭೂಬನಗರ, ನರಸಗಾಯಪಲ್ಲಿ ಆಂಧ್ರಪ್ರದೇಶದ ಕೆಲವು ಬುಡ್ಗಜಂಗಮರು ಶ್ರೀರಾಮನವಮಿ ಶಿವರಾತ್ರಿದಿನಗಳಲ್ಲಿ ಇವರ ಹರಿಕಥೆ ಬಹಳ ಪ್ರಸಿದ್ಧ. ಇವರ ಹರಿಕಥೆಗಳು ದೂರದರ್ಶನ, ರೇಡಿಯೋಗಳಲ್ಲಿ ಪ್ರಸಾರವಾಗಿ ಬಂದಿವೆ.

**ರೊಂಜು ಜುಂಗಾಲು :** ಶ್ರೀಕಾಕುಲಂ ವಿಜಯ ನಗರ ಜಿಲ್ಲೆಯಲ್ಲಿ ಬುಡ್ಗಜಂಗಮರು ಜಾತ್ರೆ ಮತ್ತು ದೇವಾಲಯಗಳಲ್ಲಿ ರೊಂಜು ಎಂಬ ವಾದ್ಯವನ್ನು ಬಾರಿಸುವುದರಿಂದ ಇವರಿಗೆ ರೊಂಜು ಜಂಗಾಲು ಎಂದು ಹೆಸರುಬಂತು. ಇಲ್ಲಿ ವಿಭೂತಿ ಮಲ್ಲಯ್ಯ ಇವರನ್ನು ಆಂಧ್ರಪ್ರದೇಶದ ಸರಕಾರ ಗೌರವಸನ್ಮಾನ ನೀಡಿದೆ. ಇವರ ಹೆಸರುಗಳಲ್ಲಿ ದೇವರ ಮಾನ್ಯ ಭೂಮಿಗಳನ್ನು ಸಹಾ ಬೇಡಿರುತ್ತಾರೆ. ಈ ವಾದ್ಯವನ್ನು ಬೇರೆ ಸಮುದಾಯದವರಾದ, ರುದ್ರಾಂಗದವರು ಕುಂಬಾರರು, ವೃತ್ತಿ ಸಹ ಆಗಿರುತ್ತದೆ. ಎಂದು ಡಾ. ಎನ್. ಯಾದಗಿರಿಶರ್ಮ ಅವರು ತಿಳಿಸಿದ್ದಾರೆ.

**ಕೊಜ್ಜವಾಲ್ಕಂ :** ಹೊಟ್ಟೆಪಾಡಿಗಾಗಿ ಹೈದರಬಾದು ಬೊಂಬಾಯಿ ಸುರಲ್ ಮೈಸೂರು, ಬೆಂಗಳೂರು ಮೊದಲಾದ ಮಹಾನಗರದಲ್ಲಿ ನಿಜವಾದ ಕೋಜಗಳಿಗೆ ಮೀರಿಸುವಂತೆ ಇವರ ಇವರ ವೇಷ, ಭಾಷೆ ಅನುಕರಣೆ ಮಾಡುತ್ತಾರೆ.

**ಹಗಲು ವೇಷ :**ಪೂರ್ವಕಾಲದಲ್ಲಿ ಹಗಲು ಅವರನ್ನು ಗುರುತುಹಿಡಿದಂತೆ ವಿವಿಧ ವೇಷ ಹಾಕಿಕೊಂಡು ಹಗಲಲ್ಲೇ ಪ್ರಜೆಗಳ ಮಧ್ಯೆ ಸಂಚರಿಸುತ್ತಾ, ಅವರ ಮನೋಭಾವಗಳನ್ನು ತಿಳಿದುಕೊಳ್ಳುತ್ತಿದ್ದರು. ರಾಜರು ಸಹ ಸ್ವಯಂ ಪ್ರತ್ಯೇಕ ವೇಷಧರಿಸಿ ಪ್ರಜೆಗಳ ಮನೋಭಾವವನ್ನು ತಿಳಿಯುತಿದ್ದರು. ಹೀಗೆ ಪ್ರಾರಂಭವಾದ ಹಗಲು ವೇಷ ಕಲೆ ಆರಂಭದಿಂದ ಪ್ರಧಾನ ವೃತ್ತಿಯಾಗಿ ಬದಲಾಗಿದೆ.

ಬರುಬರುತ್ತಾ ಹಗಲು ವೇಷದವರು ಒಂದು ಕಲಾಪ್ರಕ್ರಿಯೆಯಾಗಿ ಪರಿಪೂರ್ಣತೆಯನ್ನು ಹೊಂದಿದೆ. ಮನೆಮನೆಗೆ ಹೋಗಿ ಪ್ರದರ್ಶಿಸುವುದುಂಟು. ಹಗಲು ವೇಷ ಅಥವಾ ಬಹುರೂಪಿ ಗಳನ್ನು ಪಲ್ಲವಂಚಲ ವೆಂಕಟರಾಮಯ್ಯ ಎನ್ನುವ ಬ್ರಾಹ್ಮಣ ಮೈಸೂರು ಪ್ರಾಂತದಿಂದ ಆಂಧ್ರಪ್ರದೇಶಕ್ಕೆ ಹೋಗಿ ಕೃಷ್ಣಾಜಿಲ್ಲೆಯ ಗಡಿಪಾಡು (ಅನುಪಂತುಪರಂ) ಅಗ್ರಹಾರದಲ್ಲಿ ಹಗಲು ವೇಷ ಕಲಿಸಿದ್ದಾನೆಂದು ಮತ್ತು ಈ ವೇಷಗಳನ್ನು ವೃತ್ತಿಯಾಗಿ ೬೪ ವೇಷಗಳನ್ನು ಮಾಡಿದ್ದಾರೆಂದು ಎಂದು (ಆಂಧಪ್ರದೇಶದ ತೆಲುಗು ನಾಟಕ ವಿರಾನಿ ಪುಟ-೧೬೪, ೧೬೫, ೧೬೩).

ಈ ವೇಷಗಳನ್ನು ಬುಡ್ಗ ಜಂಗಮ್ ಸಮುದಾಯ ಅವರಲ್ಲಿ ಕಲೆತು ಅದೇ ವೃತ್ತಿಯಾಗಿ ಪ್ರಾರಂಭಿಸಿದ್ದಾರೆಂದು ತಿಳಿದು ಬಂದಿದೆ. ಈ ಹಗಲು ವೇಷಗಳನ್ನು ಗೊಲ್ಲ ಭಾಗವತರು ಮತ್ತು ವಿಶ್ವ ಬ್ರಾಹ್ಮಣರು, ಬಹುರೂಪ ವೇಷಗಳನ್ನು ಹಾಕುತ್ತಾರೆ ಎಂದು ಕ್ಷೇತ್ರ ಕಾರ್ಯದಲ್ಲಿ ತಿಳಿದುಬರುತ್ತದೆ.

ಪೂರ್ವಕಾಲದಲ್ಲಿ ಕಲಾಚಿಪುಡಿ ಬಾಗವತರು ೬೪ ವೇಷಗಳನ್ನು ಪ್ರದರ್ಶಿಸುತ್ತಿದ್ದರೆಂದು ಇದನ್ನು ವಿದ್ವಾನ್ ಚಿಂತಲ ಪಾಠಿಲಕ್ಷ್ಮೀ ನರಸಿಂಹ ಶಾಸ್ತ್ರಿ ಅವರು ತಿಳಿಸಿದ್ದಾರೆ. (ತೆಲುಗುನಾಟಕ ವಿಕಾಸಂ ೧೯೪೪ಲರಲ್ಲಿ ಡಾ. ಸಿ.ಪಿ.ಎಸ್.ಆರ್. ಅಪ್ಪಾರಾವು ಮತ್ತು ಚರಿತಾಲು ಪಾಠಿ ನರಸಿಂಹ ಶಾಸ್ತ್ರಿ ಕೂಚಿಪುಡಿ ಭಾಗವತಗಳು ಪುಟ ೭).

೧. ಭೈರಾಗಿ ವೇಷ ೨. ಬುಡಬುಕ್ಕಲ ೩. ಪಠಾನು ೪. ಪಕೀರು ೫. ಸೋಮಯಾಜಲ ೬. ಅರ್ಧನಾರಿಶ್ವರ ೭. ಬ್ರಾಹ್ಮಣ ೮. ಕೊಮಟಿ ಪಂಥುಲು ೯. ಸಲಾನಿ ೧೦. ಶಕ್ತಿ ೧೩. ದೇವರ ಪೇಟಿ ೧೪. ಯರುಕಲನಾನೆ ೧೫. ಮಾರಾಠಾದಂಡು ೧೫. ಬೊಗಪ್ಪಸಾನೆ ೧೬. ದೊಂಬರ ಕೊಯ ೧೭. ಗಯಾಳಿ ಪೆಳ್ಳಾಂ ೧೮. ದಾದಿನಂಮ್ಮ ೧೯. ಮುಸಲಿ ಮೋಗುಡು ೨೦. ರಾಶಿ ಕಾವಡಿ ೨೧. ಪಿಟ್ಟಲ ದೊರ ೨೨. ವಾನಲಮ್ಮ ೨೩. ಅತ್ತ ಕೊಡಳು ೨೪. ಬ್ರಾಹ್ಮಗಾರಿ ತತ್ವಾಲು ೨೫. ಬಟ್ರಾಜು ೨೬. ಲಿಂಗ ಬಲಿಜ ೨೭. ಬೊಡಿಗಾಡು ೨೮. ಸಿಂಗಿಸಿಂಗಾಡು ೨೯. ದಾಪ್ಮಿರ ಪಂಥು, ಇತ್ಯಾದಿ.

**ವೇಷಗಾರರು :**ವೇಷಗಾರರು ಮಾಡುವ ವೇಷಗಳು ಬ್ರಾಹ್ಮಣರು ೬೪ ವೇಷ ಮಾಡಿದ್ದಾರೆ ಅವುಗಳನ್ನು ಕಲೆತು ೩೨ ವೇಷಗಳನ್ನು ಮಾಡಿದ್ದಾರೆ.

೧. ಬಾಲ ಭೈರಾಗಿ ೨. ಬ್ರಾಹ್ಮಣ ೩. ಸುಕ್ಕಾಚಾರಿ ೪. ಸಿದ್ದಿ ವೇಷ ೫. ಕೋಮಟಿ ಶೆಟ್ಟಿ ವೇಷ ೬. ಜಂಗಮಯ್ಯ ೭. ರಾಧ ರುಕ್ಮಿಣಿ ೮. ಮೋಹಿನಿ ಬಾಸ್ಮಾಸುರ ೯. ಬೀಮಾಂಜಿನೇಯ ಯುದ್ಧ ೧೦. ವಡ್ಡರ ವೇಷ ೧೧. ಲಂಬಾಡಿ ವೇಷ ೧೨. ಸಿಂಗಿಸಿಂಗಡು ೧೩. ಬುಡಬುಕ್ಕಲ ವೇಷ ೧೪. ಚೆಂಚು ವೇಷ ೧೫. ರಾಮ ಲಕ್ಷ್ಮಣ ೧೬. ಗಾರಡಿ ೧೭. ಕಾಶಿಕಾವಳಿ ೧೮. ಅತ್ತೆ ಸೊಸೆ ೧೯. ಅರ್ಧನಾರೀಶ್ವರ ೨೦. ಪಕಿರು ವೇಷ ೨೧. ಅರಬ್ಬಿ ಪಟ್ಟಲ ದೋರ ೨೨. ಪೊಟೇಷಂ ೨೩. ಕೊಂಡಮಾಮ, ಕರು ಕುರುಮಾಮ ೨೪. ಬಾಲಸಂತು, ೨೫. ಕಾಡುಸಿದ್ಧ ೨೬. ಮುರಂಡಿಪಂತು ೨೭. ಗೊರಮಯಪಂತು ೨೮. ದಾರಿಗಪಂತು ೨೯. ಅಲಿಗಪಂತು ೩೦. ಶವಟಿಪಂತು ೩೧. ಬೈರಾಗಿಪಂತು.

ಇವರು ಎಲ್ಲಾ ವೇಷವನ್ನು ಪ್ರತಿದಿನವು ಪ್ರದರ್ಶಿಸಿ ಕೊನೆದಿನ ಪೋಟಿವೇಷ ಇದು ಬಾಯಿಯಲ್ಲಿ ಶೂಲವನ್ನು ತಿವಿದುಕೊಂಡು ಕೈಗಳಿಗೆ ಹಗ್ಗವನ್ನು ಕಟ್ಟಿ ಆ ಹಗ್ಗವನ್ನು ೨ ಅಥವಾ ೩ ಹಗ್ಗಗಳನ್ನು ಹಿಡಿದು ತಾಳ ತಪ್ಪಡಿಗಳಿಂದ ಪದರ್ಶಿಸುವ ಕಲೆ ಮತ್ತು ಈ ೩೨ ವೇಷಗಳ ನಂತರ ಪ್ರತಿ ಮನೆಗೆ ಹೋಗಿ ದಾನ್ಯ, ಧನ, ಮೇಕೆ, ಮೊದಲಾದ ಬಹುಮಾನಗಳನ್ನು ಪಡೆಯುವುದುಂಟು.

ರಾಜಮಂಡ್ರಿಯಲ್ಲಿ ಇರುವ ವಿಭೂತಿ ವೆಂಕಟಲಿಂಗಂ ಮತ್ತು ವಿಭೂತಿ ಭವಾನಿಲಿಂಗಂ

ಯಕ್ಷಗಾನ ಬೃಂದಂ ಎಂದು ನಾಟಕದಲ್ಲಿ ಇವರು ಅರ್ಧನಾರಿಶ್ವರಂ ಮತ್ತು ಶಿವಲೀಲೆ, ಗಂಗಾವತರಂ, ಗಾಜಾಸುರ ವೃತ್ತಾಂತಂ ದಕ್ಷಯಗ್ನಂ ಲಿಂಗೋತ್ಪತಿ, ಮರ್ಕಾಂಡೇಯ ಸೋತ್ರಂ, ಮಹಿಷಾಸುರ ಮರ್ದಿನಂ ಇವೆಲ್ಲ ವೇಷಗಳನ್ನು ಇವರು ಈ ವೇದಿಕೆ ಮೇಲೆ ತಿವೆಂಡ್ರಂ ಬೊಂಬಾಯಿ, ಕರ್ನಾಟಕದ ಹೊಸಪೇಟೆ, ಹಂಪಿ, ಹೈದರಾಬಾದಿನ ರವಿಂದ್ರ ಭಾರತಿ ಮಂದಿರದಲ್ಲಿಯೂ ಪ್ರದರ್ಶಿಸಿದ್ದಾರೆ. ಇವರಿಗೆ ಮಂತ್ರಿ ಮಹಾನಿಯರಿಂದ ಸನ್ಮಾನಿಸಲಾಗಿದೆ.

ಮೇಳ

ಬುಡ್ಗ ಜಂಗಮರಲ್ಲಿ ಮೇಳಕ್ಕೆ ಬಹಳ ಪ್ರಾಮುಖ್ಯತೆ ಇದೆ. ಬುರ್ರಕಥೆ, ನಾಟಕ, ಕೇಳಿಕೆ ಮುಂತಾದವುಗಳಲ್ಲಿ ಬರುವ ಗಂಡಸರು ಹಾಡುವ ಪದ ಮತ್ತು ರಂಗಗೀತೆಗಳಿಗೆ ತಂದಾನಾ ಮತ್ತು ಶಂಕರಾ ಶಿವ ರಾಮಲಿಂಗ ಮೋಯಿ ತಂದಾನ ಎಂದು ಮೇಳ ಪದವು ಗಂಡಸರು ಹಾಡುವ ಹಾಡಿಗೆ ಮೆರಗು ನೀಡುವುದಲ್ಲದೆ ಕಥೆ ಅಥವಾ ನಾಟಕ ವೀಕ್ಷಿಸಲು ಬಹಳ ಇಂಪಾಗಿರುತ್ತದೆ. ಮೇಳದ ಜೊತೆಗೆ ಗಗ್ಗಿರಿ ಗುಮ್ಮಟೆರೆಯು ಪಕ್ಕವಾದ್ಯಗಳಾಗಿರುತ್ತವೆ. ಮೇಳದಲ್ಲಿ ಸಾಮಾನ್ಯವಾಗಿ ಹೆಂಗಸರು ಗಂಡಸರು ಇರುತ್ತಾರೆ.

**ಬುರ್ರಕಥಾ ಮೇಳ :** ಶಾರದ ಕಥೆಗಳು ವೀರಶೈವ ಧರ್ಮವು ಅವಸಾನದ ಸ್ಥಿತಿಗೆ ಬಂದಾಗ ೬ನೇ ಶತಮಾನದ ಉತ್ತರಾರ್ಧದಲ್ಲಿ ಜಂಗಮ್ ಕಥೆಗಳು ಎಂದು ಪ್ರಸಿದ್ಧಿಗೆ ಬಂದವು. ಈ ಜಂಗಮ್ ಕಥೆಗಳಲ್ಲಿ ಶಾರದ ಕಥೆ ಒಂದು ಭಾಗ, ಆಂಧ್ರ ರಾಜ್ಯದಲ್ಲಿ ಶಾರದಾ ಎಂದರೆ ತಂಬುರಿಗೆ ಗೌರವಕೊಡುವ ವಸ್ತು. ಈ ಜಂಗಮ್ ಕಥೆಗಳಲ್ಲಿ ವೀರಶೈವ ಕಥೆಗಳೇ ಪ್ರಧಾನವಾಗಿತ್ತು. ಇವರನ್ನು ವೀರ ಭಾಗವತಲು ಎಂದು ಕರೆಯುವುದುಂಟು ಆ ಕಥೆಗಳ ಆಕರ್ಷಣೆ ಕಮ್ಮಿಯಾದಾಗ ವೇಷ ಭೂಷಣಗಳ ಮೂಲಕ ಇದೇ ಕಥೆಗಳ ಮೂಲಕ ಆಡಲು ಪ್ರಯತ್ನಿಸಿದರು. ಉದಾಹರಣೆಗೆ ಈ ಬುಡ್ಗ ಜಂಗಮ್‌ರು ಹೇಳುವ ಕಥೆಗಳು ೮೮.

೧. ಅಪರೂಪ ರಾಜರ ಕಥೆ ೨. ಅಮರ ಮೋಘ ಮಹಾರಾಜ ಕಥೆ ೩. ಅಲ್ಲಿ ರಾಣಿ ಕಥೆ ೪. ಆಡಬಿಡ್ಡ ಶಂಕರಮ್ಮ ಕಥೆ ೫. ಆರುಟ್ಲ ರಾಮ ಚಂದ್ರ ಕಥೆ ೬. ಆರು ಮಾರಾಟೀಲು ಕಥೆ ೭. ಈಡಿಗೋಳ ಸತ್ಯಮ್ಮ ಕಥೆ ೮. ಯರಕುಲ ಮಾಚಾಳ ಕಥೆ ೯. ಯಲ್ಲಮ್ಮ ಕಥಾ ೧೦. ಏಕ ಚಕ್ರವರ್ತಿ ಕಥಾ ೧೧. ಕನಕ ಧಾರ ಕಥಾ ೧೨. ಕಮಲ ಸಂಗಯ್ಯ ಕಥಾ ೧೩. ಕಮ್ಮವಾರಿ ಪಡಿತಿ ಕಥಾ ೧೪. ಕಲಿಯುಗ ಪನ್ನಕಥಾ ೧೫. ಕಾಂತಾಮಲೆ ಕಥಾ ೧೬. ಕಾಂಭೋಜ ರಾಜ ಕಥಾ ೧೭. ಕಾಶಿ ಮಹಾರಾಜ ಕಥಾ ೧೮. ಕಾಮಂಮ್ಮ ಕಥಾ ೧೯. ಕುಂಬಂ ಚನ್ನರೆಡ್ಡಿ ಕಥಾ ೨೦. ಕುಮಾರರಾಮ ಕಥಾ ೨೧. ಕುಸು ಕೋಮಲ ಕಥಾ ೨೨. ೨೩. ಗಾರ್ಲಮುನಿ ಕೋಟ ಕಥಾ ೨೪. ಗೊಲಸು ಮಹಾರಾಜ ಕಥಾ ೨೫. ಜಗೊಂಡ್ಲ ಅಂಚ್ಯೆಯವ ಕಥಾ ೨೬. ಚಿನ್ನಮ್ಮನ ಕಥಾ ೨೭. ಜರಾಸಂದುರು ಕಥಾ ೨೮. ತಲವಂಚನಿ ವೀರುಡು ಕಥಾ ೨೯. ತಾಂಬೇಲು ಪುತ್ರುಡು ಕಥಾ ೩೦. ದೇಸಿಂಗ್ ಮಹಾರಾಜ ಕಥಾ ೩೧. ನರಕಾಸುರ ವದಾ ಕಥಾ ೩೨. ನಲ್ಲಚಕ್ರವರ್ತಿ ಕಥಾ ೩೩. ನಲ್ಲತಂಗ ಮಹಾರಾಜ ಕಥಾ ೩೪. ನವಬೋಜ ರಾಜ ಕಥಾ

೩೫. ನಾಗಿ ರೆಡ್ಡಿ ಕಥಾ ೩೬. ನೀಲಸೇನ, ನೀಲರೂಪ ಕಥಾ ೩೭. ಪಂಚಪಾಂಡವುಲ ಕಥಾ ೩೮. ಪೂರ್ವ ಚಕ್ರವರ್ತಿ ಕಥಾ ೩೯. ಬಂಗಾರು ತಿಮ್ಮ ರಾಜ ಕಥಾ ೪೦. ಬಲುಗೂರಿ ಕೊಂಡಯ್ಯ ಕಥಾ ೪೧. ಬಾಲನಾಗಮ್ಮ ಕಥಾ ೪೨. ಬೀರಪ್ಪ ಕಥಾ ೪೩. ಬುಡ್ಡ ವೆಂಗಳರೆಡ್ಡಿ ಕಥಾ ೪೪. ಬೊಬ್ಬಿಲಿ ಯುದ್ದಂ ಕಥಾ ೪೫. ಬೊಬ್ರು ವಾಹನ ಕಥಾ ೪೬. ಮಾಂದಾತ ಕಥಾ ೪೭. ಮುಂಗ ಮೋಹನ ಮಹಾರಾಜ ಕಥಾ ೪೮. ಮುದ್ದು ರಾಮನ ಕಥಾ ೪೯. ಮೈನಾವತಿ ಕಥೆ ೫೦. ರತ್ನಸೇನಾ ಮಹಾರಾಜ ಕಥಾ ೫೧. ರಾಜಾ ರಾಂಪುಲಕ ಕಥಾ ೫೨. ರಾಮುಲಮ್ಮ (ಲಂಭಾಡಿ) ಕಥಾ ೫೩. ರಾಣಿಗುಂಟ ರಾಮರೆಡ್ಡಿ ಕಥಾ ೫೪. ಲಕ್ಷಕೋಟಿ ವೀರುಲು ಕಥಾ ೫೫. ಲಕ್ಷ್ಮಮ್ಮ ಕಥಾ ೫೬. ಒಕ್ಕನೂರಿ ವೆಂಕಟರೆಡ್ಡಿ ಕಥಾ ೫೭. ವೀರ ಬಲಿವಂತ ಕಥಾ ೫೮. ವೇಣೋನಾಗಮ್ಮ ಕಥಾ ೫೯. ಶಂಕು ಮಹಾರಾಮನ ಕಥಾ ೬೦. ಶಿವಕುಮಾರುಣಿ ಕಥಾ ೬೧. ಶೀಲಮೂರಿ ಚೆನ್ನಮ್ಮ ಕಥಾ ೬೨. ಸದಾ ಶಿವರೆಡ್ಡಿ ಕಥಾ ೬೩. ಸನ್ಯಾಸಮ್ಮ ಕಥಾ ೬೪. ಸರ್ವಾಯಿ ಮಹಾರಾಯುಡು ಕಥಾ ೬೫. ಸಾರಂಗ ದರ ಕಥಾ ೬೬. ಸಿರತೊಂಡ ಮಹಾರಾಜನ ಕಥಾ ೬೭. ಸುಗುಣಾವರ್ತಿ ಕಥಾ ೬೮. ಸುಬ್ಬಾರೆಡ್ಡಿ ಕಥಾ ೬೯. ಸುರಸಿಂದು ಕಥಾ ೭೦. ಸೂರ್ಯಚಂದ್ರರಾಜ ಕಥಾ ೭೧. ಹರಿಚಂದ್ರ ಕಥಾ ೭೨. ಆರುಕುರು ಬಂಟರ ಕಥಾ ೭೩. ಕಲಿ ಚೆಳ್ಳ ನರಸಿಂಹರೆಡ್ಡಿ ಕಥಾ ೭೪. ಚಿನ್ನಪ ರೆಡ್ಡಿ ಕಥಾ ೭೫. ಪಿನಾಯಿ ಪಾಪಿ ರೆಡ್ಡಿ ಕಥಾ ೭೬. ಬಟ್ಟೆ ವಿಕ್ರಮಾಕರ ಕಥೆ ೭೭. ಸವಾರಮ್ಮ ಕಥೆ ೭೮. ನಂದರಿ ಯಂಕನ್ನ ಕಥಾ ೭೯. ಸರೋಜಮ್ಮ ಕಥಾ ೮೦. ಮೋದಯಿ ರುಕ್ಮಂದರ ಕಥಾ ೮೧. ಇಡಿಗ ದೇವಮ್ಮ ಕಥಾ ೮೨. ಡ್ರೈವರಿಗಾರಿ ಕಥಾ ೮೩. ದೈವಾದೀನಂ ಕಥಾ ೮೪. ಲಕ್ಷ್ಮಣ ರಾಯರ ಕಥಾ ೮೫. ಅಪನಪಲ್ಲಿ ರೈಲು ಬಿದ್ದ ಕಥೆ ೮೬. ತೆಲುಗು ಸತ್ಯಂಮ್ಮ ಕಥೆ ೮೭. ಚಂದ್ರಕಾಂತ ಕಥೆ ೮೮. ೮೯. ಕೃಷ್ಣಗೊಲ್ಲ ಕಥೆ ೯೦. ಸತ್ಯ ಹರಿಶ್ಚಂದ್ರನ ಕಥೆ ೯೧. ಶಾಗಮಲ್ಲಯ್ಯನ ಕಥೆ ೯೨. ಪಂದಿರಾನ ಕಥೆ ೯೩. ಗದ್ವಾಲ ಸೋಂಬೂಪ ಮಹಾರಾಜನ ಕಥೆ ೯೪. ಸರದಾರ ಪಾಪರಾಯುಡು ಕಥೆ ೯೫. ಗಾಂಧಾರಿ ಕಥೆ ೯೬. ತಿಮ್ಮರಾಜನ ಕಥೆ ೯೭. ನಳಮಹಾರಾಜನ ಕಥೆ .

ಈ ಕಥೆಗಳನ್ನು ಪುರುಷರು ಮತ್ತು ಸ್ತ್ರೀಯರು ಸೇರಿ ಹಾಗೂ ಪ್ರತ್ಯೇಕವಾಗಿ ಮೇಳಗಳನ್ನು ರಚಿಸಿಕೊಂಡು ಕಲೆಯನ್ನು ಪ್ರದರ್ಶಿಸುತ್ತಾರೆ. ಕೈಯಲ್ಲಿ ತಾಂಬೂರಿ, ಚಿಟಗೆ, ಹಿಡಿದು ಕಾಲಲ್ಲಿ ಗೆಜ್ಜೆ ಕಟ್ಟಿಕೊಂಡು ತಂಬೂರಿ ನುಡಿಸುತ್ತಾ ಹಾಡುತ್ತಾ ಕಥೆ ಹೇಳಿದರೆ ಹಿಮ್ಮೇಳ ಗುಮ್ಮಟ ಗಗ್ಗರಿ ತಾಳ ಹಿಡಿದು ತಂದಾನ ಗುಟ್ಟುತ್ತಿರುತ್ತಾರೆ.

ಬೀದಿ ಬಾಗೋತರು : ಮೇಲಿನ ಎಲ್ಲ ಕಥೆಗಳನ್ನು ನಾಟಕದ, ರೂಪಕ ಸ್ವರೂಪ ನೀಡಿ ಬೀದಿ ಭಾಗವತ ವೇಷಗಳನ್ನು ಹಾಕಿ ಬೀದಿಗಳಲ್ಲಿ ಪರದೆ ಹಾಕಿ ಬುರ್ರಕತೆಗಳನ್ನು ಕಥಾರೂಪಕವಾಗಿ ವಿವರಿಸಿ ಕಲೆಯನ್ನು ಪ್ರದರ್ಶಿಸುತ್ತಾರೆ. ಬುಡ್ಗಜಂಗಮರ ಎಲ್ಲಕಲಾ ಪ್ರಕಾರಕ್ಕಿಂತಲೂ ವಿಶಿಷ್ಟವಾದ ಈ ಪ್ರಕಾರ ಇಂದಿಗೂ ಉಳಿದುಕೊಂಡು ಬಂದಿದೆ.

ಡಿಮ್ಮಿಮೇಳ : ಡೆಕ್ಕಿ ಪದಾಲು (ದಮಾಡಿ ಹಾಡುಗಳು) ಈ ದಮಡಿ ಹಾಡುಗಳನ್ನು ಬಹುತೇಕ ಈ ಸಮುದಾಯದ ಹೆಣ್ಣು ಮಕ್ಕಳು ಹಾಡುತ್ತಾರೆ. ಇಬ್ಬರಿಗಿಂತ ಹೆಚ್ಚಿಗೆ

ಹೆಣ್ಣುಮಕ್ಕಳು ಬೆಳಗಿನ ಜಾವ ಎದ್ದೊಡನೆ ಜೊತೆಯಾಗಿ ಸೇರಿ ಕೈಯಲ್ಲಿ ಬಗಲಲ್ಲಿ ತೆರಳಿ ಶಿವಶರಣ-ಶರಣೀಯರ ತತ್ವ ಪದ ಸರ್ವಜ್ಞನ ಪದ, ದಾಸರ ಪದಗಳನ್ನು ಹಾಡುತ್ತ ಕೊನೆಯಲ್ಲಿ ಬಾ ಅಮ್ಮ ಬಾ ತಾಯಿ, ನನ್ನ ಹಡದವ್ವ ನಿನಗೆ ಐದುಮಂದಿ ಗಂಡುಮಕ್ಕಳು ಐದು ಮಂದಿ ಹೆಣ್ಣುಮಕ್ಕಳಾಗಲಿ, ಮಕ್ಕಳಾ ಮದುವೆ ಆಗಲಿತಾಯಿ, ಹೆಮರಡ್ಡಿ ಮಲ್ಲಮ್ಮ, ಅಕ್ಕಮಹಾದೇವಿ ಪಾರ್ವತಿ ಇದ್ದಂಗ ಇದ್ದಿ ತಾಯಿ ಧರ್ಮದೇವತೆ ತಾಯಿ ಎಂದು ತಮ್ಮ ಕಲೆಯನ್ನು ಪ್ರದರ್ಶಿಸುವರು.

**ಕುರುಕುರು ಮಾಮ ಶಾಸ್ತ್ರದ ವೇಷ :** ಈ ವೇಷವನ್ನು ಧರಿಸಲು ಮುಳ್ಳಂದಿಯ ಮುಳ್ಳಗಿಡುಗದ ಇಲ್ಲವೆ, ಕೋಳಿಯಪುಕ್ಕ ಹಾಗೂ ಔಷಧಿ ಸಸ್ಯಗಳ ಗಿಡಮೂಲಿಕೆ ಮತ್ತು ಶಾಸ್ತ್ರದ ಪುಸ್ತಕ ಇವುಗಳಲ್ಲದೆ ಹಸ್ತ ಮುದ್ರಿಕೆಗಳನ್ನು ಅಭ್ಯಾಸ ಮಾಡಿ ಮನೆಯಿಂದ ತೆರಳುತ್ತಾರೆ. ಊರು ಸಮೀಪಿಸುತ್ತಿದ್ದಂತೆಯೇ ಒಂದು ತೋಟದಲ್ಲಿ ಗುಡಿ, ಚಾವಡಿಯಲ್ಲಿ ವೇಷಧರಿಸಿಕೊಂಡು ಹಣೆಗೆ ನಾಮ ಕೊರಳಲ್ಲಿ ತಾಯತ, ಕೈಯಲ್ಲಿ ಕಾಲಿಗೆ ಕಡಗ ಧರಿಸಿರುತ್ತಾರೆ. ವೇಷಕ್ಕೆ ತಕ್ಕ ಹಾಗೆ ಬಿಟ್ಟಿರುವಗಡ್ಡ ಮೀಸೆಯನ್ನು ಚೆನ್ನಾಗಿ ಹುರಿಮಾಡಿಕೊಂಡು ದಿಕ್ಕಿಗೊಬ್ಬೊಬ್ಬರು ಹೊರಡುತ್ತಾರೆ. ಹೊರಡುವ ಮುನ್ನ ಸಂಜೆ ಎಲ್ಲರೂ ಎಲ್ಲಿ ಸೇರಬೇಕೆಂದು ಮೊದಲೇ ನಿರ್ಧರಿಸಿರುತ್ತಾರೆ. ಹೀಗೆ ಹೊರಟವರು ಜನ ಗುಂಪಾಗಿರುವ ಕಥೆ ಮರದ ನೆರಳನಲ್ಲೋ, ದೇವಸ್ಥಾನದ ಪಕ್ಕದಲ್ಲೋ ಕುಳಿತು ಶ್ರೀರಾಮ ನಾಮ ಸ್ಮರಣೆಯಿಂದ ಕಾಯಕ ಶುರುಮಾಡುತ್ತಾರೆ.

ಇವರು ಶಾಸ್ತ್ರವನ್ನು ಕಟ್ಟುನಿಟ್ಟಾಗಿ ನಿಗದಿತ ವೇಳೆಯಲ್ಲಿ ಮಾತ್ರ ಹೇಳುತ್ತಾರೆ. ಸಾಮಾನ್ಯವಾಗಿ ಹೆಸರು ಬಂದ ಮೇಲೆ ಧೂತಲಕ್ಷಣ ಹೇಳುವುದು ಮತ್ತು ಹಸ್ತರೇಖೆ ನೋಡಿ ಹಾಗೂ ಚಿಂತಾಮಣಿಕಟ್ಟಿನ ಆಧಾರದ ಮೇಲೆ ಭವಿಷ್ಯ ಹೇಳುವ ಕ್ರಮವನ್ನೂ ಅನುಸರಿಸಲಾಗುತ್ತದೆ. ಅದರಲ್ಲೂ ಮೊದಲನೆಯದು ಹೆಸರುಬಲದ ಮೇಲೆ ಧೂತಲಕ್ಷಮ ಹೇಳುವುದನ್ನು ಬೆಳಿಗ್ಗೆ ೯ ಗಂಟೆಯವರೆಗೆ ಮಾತ್ರ ಮಾಡುತ್ತಾರೆ. ಜನವೇಶ, ರಾಗಿವೇಶ, ಸರಿವೇಶ, ಚಂದ್ರಕಾಂತಿ, ಸೂರ್ಯಕಾಂತಿ, ಮರುಳಮಾತಂಗಿ ಗಿಡ ಮೊದಲಾದ ಗಿಡಮೂಲಿಕೆಗಳಿಂದ ಮಾಡಿದ ಲೇಹ್ಯವನ್ನು ಕಣ್ಣಿನ ರೆಪ್ಪೆಗಳಿಗೆ ಹಂಚಿಕೊಂಡು ಶಾಸ್ತ್ರಹೇಳುವುದು ರೂಢಿಯಲ್ಲಿದೆ, ಈ ಲೇಹ್ಯ ತಮಗೆ ಅತೀಂದ್ರಿಯ ಶಕ್ತಿಯಾದಗಿಸುವ ಮೂಲಕ ವ್ಯಕ್ತಿಯ ಭವಿಷ್ಯ ಹೇಳಲು ಸಹಕಾರಿಯಾಗುತ್ತದೆ ಮತ್ತು ಈ ಶಕ್ತಿ ಒಂದೆರಡು ಗಂಟೆಗಳ ಕಾಲ ಮಾತ್ರ ಇರುತ್ತದೆಂದು ನಂಬುತ್ತಾರೆ. ಇನ್ನು ಹಸ್ತ ರೇಖೆ ನೋಡುವ ಮೂಲಕ ಮತ್ತು ಚಿಂತಾಮಣಿ ಕಟ್ಟಿನ ಆಧಾರದ ಮೂಲಕ ಭವಿಷ್ಯ ಹೇಳುವ ಕಾಯಕವನ್ನು ಸಾಮಾನ್ಯವಾಗಿ ಬೆಳಿಗ್ಗೆ ೮ ಗಂಟೆಯಿಂದ ಸಾಯಂಕಾಲ ೬ ಗಂಟೆಯವರೆಗೆ ನಿರ್ವಹಿಸಲಾಗುತ್ತದೆ.

ಸುಮಾರು ೬-೮ ಅಂಗುಲ ಉದ್ದದ ಮತ್ತು ಎರಡೂವರೆ ಅಂಗುಲ ಅಗಲದ ಒಟ್ಟು ೨೫ ರಿಂದ ೬೦ ತಾಳೆ ಗರಿಗಳಿರುವ ಕಟ್ಟನ್ನು ಚಿಂತಾಮಣಿ ಕಟ್ಟು ಎನ್ನುತ್ತಾರೆ. ಈ ಗರಿಗಳನ್ನು ಎರಡು ಬದಿಯಲ್ಲಿ ರಕ್ಷಿಸುವ ತೆಳುವಾದ ಹಲಗೆಯ ಪಟ್ಟಿಗಳಿರುತ್ತವೆ, ಈ ಪಟ್ಟಿ ಮತ್ತು




೧೪೨ ಬುಡ್ಗ ಜಂಗಮ

ಗರಿಗಳಿಗೆ ಉದ್ದಕ್ಕಿರುವ ಕಡೆಯ ಒಂದು ಬದಿಯಲ್ಲಿ ಎರಡು ತೂತುಗಳನ್ನು ಮಾಡಿ ದಾರಸೇರಿಸಿ ಅವು ಕದಲದಂತೆ ಆದರೆ ಸಡಿಲವಾಗಿ ತೆರೆಯುವಂತೆ ಹೊಂದಿಸಿರುತ್ತಾರೆ. ಈ ಗರಿಗಳ ಎರಡೂ ಮುಖಗಳಲ್ಲಿ ತೆಲುಗನ್ನು ಹೋಲುವ ಲಿಪಿಯಲ್ಲಿ ಬರಹವನ್ನೂ ರಾಮಾಯಣ ಮಹಾಭಾರತದ ಪಾತ್ರಗಳನ್ನು ನೆನಪಿಗೆ ತರುವ ಚಿತ್ರಗಳನ್ನು ಚೂಪದ ಕಬ್ಬಿಣದ ಕಂಠ (ದಬ್ಬಳದಂತಹ ಸಾಧನ) ದಿಂದ ಕೊರೆದಿರುತ್ತಾರೆ. ಭವಿಷ್ಯ ಕೇಳುವ ಕುತೂಹಲದಿಂದ ಬಂದ ವ್ಯಕ್ತಿಗೆ ನಿಗದಿತ ಕಾಣಿಕೆಯನ್ನು ಏಕನಾದದ ಬುರುಡೆಯಲ್ಲಿ ಹಾಕುವಂತೆ ಸೂಚಿಸುತ್ತಾರೆ. ಯಾವ ಕುರುಮಾಮರು ಕಾಣಿಕೆಯನ್ನು ಕೈಯಲ್ಲಿ ಮುಟ್ಟಿ ಪಡೆಯುವುದಿಲ್ಲ. ನಂತರ ಎರಡೂ ಕಣ್ಣುಗಳನ್ನು ಮುಚ್ಚಿಕೊಂಡು ಏನನ್ನೋ ಧ್ಯಾನಿಸುವವರಂತೆ ಏಕನಾದದ ತಂತಿಯನ್ನು ಮೀಟುತ್ತಾ ಶ್ರೀರಾಮನಾಮದಿಂದ ಹಾಡಲಾರಂಭಿಸುತ್ತಾರೆ, ವ್ಯಕ್ತಿಯ ಬಲಗೈ ಹಿಡಿದುಕೊಂಡು ಹಸ್ತರೇಖೆ ನೋಡಿ ಚಿಟಿಕೆ ಬಾರಿಸುತ್ತಾ ಏಕನಾದ ಮೀಟುವಾಗ ಹೊಮ್ಮುವ, ಟುಂಯ್ ಟುಂಯ್ ನಾದ ಮಾಧುರ್ಯಕ್ಕೆ ತಕ್ಕಂತೆ ಲಯಬದ್ಧವಾಗಿ ಮಾತಾಡುತ್ತಾನೆ. ಕುರುಮಾಮನ ಈ ಮನಸ್ಸಿನ ಪ್ರಾಸ, ಚತುರತೆ, ವೇಗ, ವ್ಯಕ್ತಿಯನ್ನು ಮೋಡಿಗೊಳಿಸುತ್ತವೆ. ವ್ಯಕ್ತಿ ತನ್ಮಯನಾಗಿ ಕೇಳುತ್ತಾ ಕುರುಮಾಮನ ಪ್ರಶ್ನೆಗಳಿಗೆ ಉತ್ತರಿಸುತ್ತಾ ಹೋಗುತ್ತಾನೆ. ವಿಶೇಷವೆಂದರೆ ಕುರುಮಾಮ ತಮ್ಮ ಬಳಿ ಭವಿಷ್ಯ ಕೇಳಲು ಬಂದ ವ್ಯಕ್ತಿಯಿಂದ ತಿಳಿದುಕೊಂಡ ಮಾಹಿತಿಗಳಿಂದಲೇ ಮನುಷ್ಯನ ಬದುಕಿನಲ್ಲಿ ತೀರಾ ಸಹಜವಾಗಿ ಸಂಭವಿಸುವ ಘಟನೆಗಳನ್ನೇ ಆಕರ್ಷಕವಾಗಿ ಹೇಳುತ್ತಾ ಹೋಗುವುದರಿಂದ ಕುರುಮಾಮನ ಮಾತುಗಳೂ ತನ್ನ ಬದುಕಿನಲ್ಲಿ ನಡೆದಿರುವ ಘಟನೆಗಳೂ ಹೆಚ್ಚು ಕಡಿಮೆ ಹೋಲುವಂತಿರುವುದರಿಂದ ವ್ಯಕ್ತಿಗೆ ಕುರುಮಾಮನಲ್ಲಿ ನಂಬಿಕೆ ಉಂಟಾಗುತ್ತದೆ. ಅದೇ ಗುಂಗಿನಲ್ಲಿ ಅದಕ್ಕೆ ಪರಿಹಾರಗಳನ್ನು ಕೇಳಿ ತಿಳಿದುಕೊಳ್ಳುವ ವ್ಯಕ್ತಿ ಕುರುಮಾಮನನ್ನು ಕಣ್ಣಲ್ಲೇ ವಂದಿಸುತ್ತಾನೆ. ಕುರುಮಾಮನ ಚಿಟಿಕೆ ಶಬ್ದ ಮತ್ತು ಏಕನಾದದ ಜೊತೆಗೆ ಲಯಬದ್ಧವಾಗಿ ಹೊರಡುವ ಮಾತುಗಳ ಮಾದರಿಯೆಂದು ಹೀಗೆ.

ರಾಮನಂದುಡಾ ರಾಮನಂದುಡಾ ಮಾಸ್ವಾನನ್ನ ಗುರುನಾದನ್ನ
ಕೊಂಡದೇವುಡಾ ಜಗನ್ನಾಥುಡು ಎಗಡುಂಡಾವು
ಮಂಜುನಾಥುಡು ಎಗಡುಂಡಾವು
ಶ್ರೀ ಶೈಲುಡಾ ಎಗಡುಂಡಾವು ರಾಮನಂದುಡ ಎಗಡುಂಡಾವು
ಹೆಸರು ಯಾವುದು? ಮಾಮ ನಿಂದು
ಹುಟ್ಟಿದ ಯೋಗ ರೈಟು ಉಂಟು
ಬೆಳೆದ ಯೋಗ ರೈಟು ಉಂಟು
ಅದರುಷ್ಟೆಂಬುದು ಆರು ಉಂಟು
ಗುಣಾ ಎಂಬುದು ನಾಲ್ಕುಂಟು
ನಸೀಪು ಎಂಬುದು ಒಂಭತ್ತೈತೆ
ಚಂದ್ರನ ಬೆಳಕು ಸೂರ್ಯನ ರವಸು

ಗಂಡುವಾರದ ಯೋಗದಲ್ಲಿ ನೀ ಹುಟ್ಟಿದ್ದೀರಿ
ಅನ್ನರೇಕದಲಿ ತೊಂದರೆ ಇಲ್ಲ
ಪುತ್ರರೇಕದಲಿ ತೊಂದರೆ ಇಲ್ಲ
ಬಲುಭಾಗದ ಮರ್ಮಸ್ಥಾನದಲಿ ಮಚ್ಚೆಯ ಉಂಟು
ಆಯುಷ್ಯ ಐತೆ ಎಂಬತ್ತೆರಡು ವರ್ಷ ಪಯಾಣ ಉಂಟು
ನೀ ಹುಟ್ಟಿದ ಹದಿನಾಲ್ಕು ವರ್ಷ ಪ್ರಯೋಜನವಿಲ್ಲ
ಕೃಷ್ಣನಾಗಿ ತಿರುಗಿದ್ದೀಯಾ
ಮಾಮನಾಗಿ ಮೆರೆದಿದ್ದೀಯಾ
ಮೆರೆದರು ಅಣ್ಣ ನಿನ್ನ ರಾಶಿ
ಮೊನ್ನೆ ಹೋದ ಅಮವಾಸ್ಯೆಗಣ್ಣ
ನಿನ್ನ ಕಷ್ಟ ಬಿಡುಗಡೆಯಾಯಿತು
ಮುಂದು ಭವಿಷ್ಯ ಭರಾಬ್ಬರಿ ಉಂಟು
ಮಿಸ್ಟೇಕಿಲ್ಲ ಕೇಳಲು ಬೇಡ ಕುರ್‌ರ್‌ರ್...... ಮಾಮ.....

ಕುರುಮಾಮ ಕಲಾ ಪ್ರದರ್ಶನಕ್ಕೆಂದು ಮನೆಮನೆಗೆ ಬಂದು ಭಿಕ್ಷೆ ಬೇಡುವ ಸಂದರ್ಭದಲ್ಲಿ ಹಾಡುವ ಪದ ಸಾಮಾನ್ಯವಾಗಿ ಶ್ರೀರಾಮನಾಮಸ್ಮರಣೆಯಿಂದ ಶುರುವಾಗುತ್ತದೆ.

ಶ್ರೀರಾಮಕೊಂಡನ್ನ ಮಸ್ತಾನನ್ನ
ದೇಶವೋಂದನ್ನು ಬೇಡಿಕೊಂಡನ್ನ
ಪಡಗಲುನಾಥ ಭಿಕ್ಷೆಯ ಮಡಗು
ಮಡಗಲು ಸೀತ ಭಿಕ್ಷೆಯ ಮಡುಗು
ಶ್ರೀ ರಾಮಕೊಂಡನ್ನ ರಾಮಕೊಂಡನ್ನ
ವಡಗಲುನಾಥ ಏಮುಚಪ್ಪೆನ್ನ...... ಹೀಗೆ ಮುಂದುವರಿಯುತ್ತದೆ.

ಕುರುಮಾಮರು ಹಿಡಿದಿರು ಚಿಂತಾಮಣಿ ಕಟ್ಟಿನ
ತಾಳೆಗರಿಗಳಲ್ಲಿನ ತೆಲುಗು ಲಿಪಿಯ ಬರಹದ ಒಂದು ಮಾದರಿ
ಧನಬಲಮು ಧಾನ್ಯ ಬಲಮು ಕನ್ಯಾಕರ್ಕಾಟಿಕಮು
ಸೂರ್ಯನಕ್ಷತ್ರಂ ರವಿ ಫಾಲ್ಗುಣಂ
ಹುಟ್ಟಿದ ಗಳಿಗೆ ಮಂಚಿದಿ ಪೆಯಿಂದಿ ಗಳಿಗೆ ಮಂಚಿದಿ
ಪುಟ್ಟಿಂದಿ ಪೆದ್ದಗುಂಪು, ಪೆರಿಗುಂದಿ ಪೆದ್ದಗುಂಪು.....

ಸಾಮಾನ್ಯವಾಗಿ ಮೊದಲು ತಾಳೆಗರಿಗಳ ಕಟ್ಟನ್ನು ಕೈಯಲ್ಲಿ ಹಿಡಿದುಕೊಂಡು ದಬ್ಬಣದಂತಹ ಕಬ್ಬಿಣದ ಕಡ್ಡಿಯನ್ನೂ ವ್ಯಕ್ತಿಯ ಕೈಗೆ ಕೊಟ್ಟು ಗರಿಗಳ ಮಧ್ಯೆ ಹಾಕಲು ಹೇಳುತ್ತಾರೆ. ವ್ಯಕ್ತಿಗೆ ತನ್ನ ಇಷ್ಟದೈವವನ್ನು ನೆನೆಯುವಂತೆ ಹೇಳಿದ ನಂತರ ಆತ ಹಾಕಿದ ಕಡ್ಡಿಯಾವ ಬರಹ ಚಿತ್ರವಿರುವ ಗರಿಯನ್ನು ತೋರುತ್ತದೆಯೋ ಅದರ ಬರಹ ಚಿತ್ರಹ ಆಧಾರದ ಮೇಲೆ

ವ್ಯಕ್ತಿಯ ಲಾಭ ನಷ್ಟ, ಮನೆ ಕೆಲಸಗಳು, ಪ್ರಯಾಣ ಮೊದಲಾದ ವಿಷಯಗಳನ್ನು ಕುರಿತು ಕುರುಮಾಮರು ವಿವರವಾಗಿ ಹೇಳುತ್ತಾರೆ. ಇದೇ ರೀತಿಯಲ್ಲಿ ೪-೫ ಸಲ ಮತ್ತೆ ಮತ್ತೆ ಮಾಡಿನೋಡಿ ಹೇಳುತ್ತಾರೆ. ರಾಮಲಕ್ಷ್ಮಣ, ಸೀತೆಯ ಚಿತ್ರಗಳು ಬಂದರೆ ಶುಭವೆಂದು, ವ್ಯಕ್ತಿಯ ಯೋಜನೆ ಆಲೋಚನೆ, ಲೆಕ್ಕಾಚಾರದಲ್ಲಿ ಗೆಲುವು ಸಿಗುತ್ತದೆಂದು, ಅದೃಷ್ಟ ಚೆನ್ನಾಗಿರುವುದೆಂದು ಭಾವಿಸಿ ಹೇಳುತ್ತಾರೆ. ಅಲ್ಲದೆ ಈ ಗರಿಗಳಲ್ಲಿ ಚಿತ್ರಿಸಿರುವ ಸೀತಾಕಲ್ಯಾಣ ಸತ್ಯನಾರಾಯಣ ವ್ರತ, ರಾಮಪಟ್ಟಾಭೀಷೇಕ, ಲಕ್ಷ್ಮೀ ವೆಂಕಟೇಶ್ವರ, ಅಯೋಧ್ಯಾ ನಗರ ಪ್ರವೇಶ, ಮೊದಲಾದ ಚಿತ್ರಗಳೂ ಶುಭಸೂಚಕಗಳಾಗಿವೆ. ಆದರೆ ಆಂಜನೇಯನ ಚಿತ್ರ ಬಂದರೆ ಮೇಲಿನವೆಲ್ಲಕ್ಕಿಂತ ಒಳ್ಳೆಯದೆಂದೂ ವ್ಯಕ್ತಿ ತ್ಯಾಗ ಸ್ವರೂಪಿ ಎಂದೂ, ವಿಶೇಷವಾಗಿ ಹೇಳುತ್ತಾರೆ. ಈ ಚಿತ್ರಗಳನ್ನು ಕುರುಮಾಮರೇ ತಾಳೆಗರಿ ಹಸಿ ಇರುವಾಗಲೇ ಕೊರೆದಿರುತ್ತಾರೆ. ಬಹುಪಾಲು ಎಲ್ಲಾ ಕುರುಮಾಮರು ಬಳಸುವ ತಾಳೆ ಗರಿಗಳು, ಅಲ್ಲಿನ ಚಿತ್ರಬರಹಗಳು ಒಂದೇ ಮಾದರಿಯವಾಗಿದ್ದು, ತೆಲುಗನ್ನು ಬರೆಯಲು ಓದಲು ಬಲ್ಲಂತಹವರಿಂದಲೂ ಕೆಲವೊಮ್ಮೆ ಬರೆಯಿಸುತ್ತಾರೆ. ಈ ಕಟ್ಟಿನ ಆಧಾರದ ಮೇಲೆ ಶಾಸ್ತ್ರ ಹೇಳುವ ಕುರುಮಾಮ ತೆಲುಗನ್ನು ಓದಬಲ್ಲಷ್ಟು ವಿದ್ಯಾವಂತನಾಗಿದ್ದರೆ ಅದನ್ನು ಕನ್ನಡಕ್ಕೆ ಅನುವಾದಿಸಿ ಹೇಳುತ್ತಾನೆ. ಅವಿದ್ಯಾವಂತನಾದರೆ ಚಿತ್ರವನ್ನು ನೋಡಿ ಅದರ ಒಳಾರ್ಥವನ್ನು ಗ್ರಹಿಸಿ ತನ್ನ ವೃತ್ತಿಯ ಅನುಭವ ಸಂಪತ್ತಿನಿಂದಲೇ ಅನೇಕ ವಿವರಗಳನ್ನು ಕೊಡುತ್ತಾನೆ. ಇದೆಲ್ಲವನ್ನು ಮೀರಿಯೂ ಕೆಲವೊಮ್ಮೆ ಸಮಾಧಾನವಾಗದಿದ್ದರೆ ಈ ಶಾಸ್ತ್ರ ಹೇಳುವ ಕೆಲಸಕ್ಕೆ ಕವಡೆಗಳನ್ನು ಬಳಸಲಾಗುತ್ತದೆ. ಸಾಮಾನ್ಯವಾಗಿ ಎಲ್ಲಾ ಕುರುಮಾಮ ಒಂಬತ್ತು ಕವಡೆಗಳನ್ನು ಹೊಂದಿರುತ್ತಾರೆ. ಅವುಗಳನ್ನು ವ್ಯಕ್ತಿಯ ಕೈಗೆ ಕೊಟ್ಟು ಹಾಕಲು ಹೇಳುತ್ತಾರೆ. ಅವು ನೆಲದಲ್ಲಿ ಮೇಲ್ಮುಖವಾಗಿ ಬೀಳುವ ರೀತಿಯನ್ನು ಗಮನಿಸಿ ಬೆಸ ಎಷ್ಟು ಸರಿ ಎಷ್ಟು ಎಂದು ಲೆಕ್ಕಚಾರಹಾಕಿಕೊಳ್ಳುತ್ತಾರೆ. ಹೀಗೆ ವ್ಯಕ್ತಿಯ ಕೈಯಿಂದ ಮೂರು ಸಲ ಕವಡೆಗಳನ್ನು ಹಾಕಿಸಿ ಒಟ್ಟು ಸರಿ ಬೆಸಗಳನ್ನು ಕೂಡ ಕಳೆದು ಏನೋ ಲೆಕ್ಕಹಾಕುತ್ತಾರೆ. ಯಾವ ಕುರುಮಾಮನು ಇದು ಹೇಗೆ ಲೆಕ್ಕಹಾಕಿ ಶಾಸ್ತ್ರ ಹೇಳುತ್ತೇವೆಂಬ ವಿವರದ ಗುಟ್ಟುಗಳನ್ನು ಬಿಟ್ಟುಕೊಡುವುದಿಲ್ಲ. ಅದಕ್ಕೆ ತಮ್ಮ ಶ್ರೀಶೈಲ ಮಲ್ಲಿಕಾರ್ಜುನನ ಆಣೆಯಿದೆ ಎಂದೂ ಹೇಳಿದರೆ ತಾವು ಏಳಿಗೆಯಾಗುವುದಿಲ್ಲವೆಂದೂ ಹೇಳುತ್ತಾರೆ.

ಕುರುಮಾಮರು ಕೇವಲ ಭವಿಷ್ಯಕಾರರು ಮಾತ್ರವಲ್ಲ, ವೈದ್ಯರೂ ಆಗಿರುವುದುಂಟು. ಇವರಲ್ಲಿ ಸದಾ ಒಂದು ನಾಲ್ಕು ಮೂಲೆಯ ಕಾವಿಭಟ್ಟೆಯ ಚೀಲವಿರುತ್ತದೆ. ಇದನ್ನು 'ಸಂಚಿ' ಎಂದು ಕರೆಯಲಾಗುತ್ತದೆ. ಭವಿಷ್ಯವಾಚನಕ್ಕೆ ಸಹಾಯಕವಾಗುವ ಯಕ್ಷಿಭಜನ್ ಎಂಬ ಸಚಿತ್ರ ಪುಸ್ತಕ, ಕವಡೆ, ಚಿಂತಾಮಣಿ, ಅರಪೆಟ್ಟಿಗೆ, ಬಳೆ, ನವಿಲುಗರಿ, ಕರಿಬಂಟನಬಳ್ಳಿ, ತಾಯತ, ತಗಡು, ಕಬ್ಬಿಣದ ಕಂಠ ಇತ್ಯಾದಿ ಸಾಮಗ್ರಿಗಳು ಅದರಲ್ಲಿರುತ್ತವೆ. ದುಂಡಾಗಿ ಸುತ್ತಿದ ಎಕ್ಕದ ಬಿಳಿಬೇರು, ಕರಡಿಕಾಲಿನ ಪಂಜ, ಮೈವದನಿಕೆ, ತಮಸಖಿ ಗಿಡಮೂಲಕಿ ಮುಂತಾದ ಅಪರೂಪದ ಗಿಡಮೂಲಿಕೆಗಳು ಇರುತ್ತವೆ, ಮಕ್ಕಳ ಬಾಲಗ್ರಹ, ನೆಲಗ್ರಹ ಭೀತಿ, ಹಲ್ಲು ಕಡಿಯುವಿಕೆ

ಮುಂತಾದವುಗಳನ್ನೂ ಇವುಗಳ ಸಹಾಯದಿಂದ ನಿವಾರಿಸುತ್ತಾರೆ. ಗಿಡಮೂಲಿಕೆಗಳ ಜೊತೆಗೆ ಭಂಗಿ ಸೊಪ್ಪಿನ ಚಿಲುಮೆ, ಅಡಿಕೆ ಚೀಲ, ಬಾಚಣಿಗೆ ಇತ್ಯಾದಿ ವಸ್ತುಗಳು ಸಹ ಸಂಚಿಯಲ್ಲಿ ಸೇರಿಕೊಂಡಿರುತ್ತವೆ. ಗುಡ್ಡಗಾಡುವಾಸಿಗಳಾಗಿದ್ದ ಇವರ ಪೂರ್ವಜರು ಸ್ವತಃ ವೈದ್ಯರಾಗಿದ್ದುಕೊಂಡು ಪ್ರಾಣಾಂತಿಕ ಗಳಿಗೆಗಳಲ್ಲಿ ಚಿಕಿತ್ಸೆ ಮಾಡಿಕೊಳ್ಳಬೇಕಾಗುತ್ತಿದ್ದುದರಿಂದ ಈ ಜನಾಂಗದ ವೈದ್ಯ ತೀರಾ ಪ್ರಾಚೀನವಾದುದೆಂದು ತಿಳಿಯಬಹುದಾಗಿದೆ. ತೀರಾ ವಯಸ್ಸಾದ ಕೊಂಡಮಾಮ ಹೆಂಗಸರಲ್ಲಿ ಕೆಲವರು ಗರ್ಭಚಿವಿ, ಗರ್ಭ ಸುಲೆ, ಕಿವಿಸೋರುವುದು, ದೃಷ್ಟಿದೋಷ, ವಾಂತಿ, ಮುಂತಾದ ರೋಗಗಳಿಗೆ ಔಷಧಿ ಮಾಡುತ್ತಾರೆ. ಕೊಂಡಮಾಮಗಳು ಏಕನಾದದ ತಂತಿ ಮೀಟುತ್ತಾ ಮನೆಯಿಂದ ಮನೆಗೆ ಭಿಕ್ಷಾಟನೆ ಮಾಡುವಾಗ ಕಾಯಿಲೆ ಆದವರ ಗಮನ ಸೆಳೆಯುತ್ತಾರೆ.

ಹರಿಯೋ ಕಾಲ್ದಲ್ಲಿ ಒಂದು ಅಂಚಿಕಡ್ಡಿ
ಕಳೆಯೋ ಕಾಲ್ದಲ್ಲಿ ಒಂದು ಹುಲ್ಲುಕಡ್ಡಿ
ಮಾಡ್ತೀನಿ
ಮಂಡಿಬಾದಿನಿ
ಕೀಲುಬಾದಿನಿ
ಮುಂಗೈಬಾದಿನಿ
ತಲಬಾದಿನಿ
ಮೂಗಿಲಿಪಡಿಸು
ನೆಗಡಿ ಕೆಮ್ಮಲು
ಏನಾರ ಇರಲಿ
ಜೀವಸ್ಥಾನ ಜನ್ಮಸ್ಥಾನ ಹಿಡಿದು
ಕಳಿತೀನಿ
ಹೊಟ್ಟೇಲಿ ಬಾಧಿ
ಸುಸ್ತಿ ಸಂಕಟ
ತಲೀಲಿ ಮಂಕು
ತಲೀಲ ಮಂಕು
ಕಣ್ಣಲಿ ಮಂಜು
ಏನಿದ್ದರೂ ಪರಿಹಾರ ಆಗ್ತದೆ
ಹಿಂದಿದ್ದ ಬಲಹೋಯ್ತು
ಮುಂದಿದ್ದ ಸಿಂಗಾರ ಹೋಯ್ತು

ಗಿಡಮೂಲಿಕೆಯೊಡನೆ ಗಿಡಮೂಲಿಕೆಗಳನ್ನೂ ಸೇರಿಸಿ ಕುಟ್ಟಿ, ಪುಡಿಮಾಡಿ ಅದನ್ನು ಸಮಸ್ಯೆಯಿರುವವರ ಕೊರಳಿಗೋ ರಟ್ಟೆಗೋ ಕಟ್ಟುತ್ತಾರೆ. ಇದರಿಂದ ಬಾಧೆಗೊಳಗಾದ

ವ್ಯಕ್ತಿಯ ಸಮಸ್ಯೆಯ ಪರಿಹಾರವಾಗುತ್ತದೆನ್ನುವ ನಂಬಿಕೆ ಜನರಲ್ಲೂ ಇದೆ. ಅದನ್ನು ಶ್ರದ್ಧೆಯಿಂದ ಮಾಡುತ್ತಾರೆ. ಕೆಲವೊಮ್ಮೆ, ಕೊಳ್ಳೆಗಾಲ, ಕೇರಳದಷ್ಟು ದೂರ ಹೋಗಿಯೂ ತಾಯಿತ ಮೊದಲಾದ ಯಂತ್ರಗಳನ್ನೂ ಮಾಡಿಸಿಕೊಂಡು ಬರುತ್ತಾರೆ. ಇನ್ನುಳಿದಂತೆ ವಶೀಕರಣ ವಿದ್ಯೆಯನ್ನೂ ಬಲ್ಲವರಾಗಿದ್ದಾರೆ. ಈ ವಿದ್ಯೆಯನ್ನು ದುರುಪಯೋಗ ಪಡಿಸಿಕೊಳ್ಳಬಾರದೆಂಬ ತಿಳಿವಳಿಕೆಯೂ ಇವರಲ್ಲಿದೆ. ಯಾವುದಾದರೊಂದು ಶುಭ ಸಂದರ್ಭದಲ್ಲಿ ಮರುಳು ಮಾತಂಗಿ ಗಿಡ ಸೂರ್ಯಕಾಂತಿ, ಚಂದ್ರಕಾತಿ, ಮೊದಲಾದ ಗಿಡಮೂಲಿಕೆಗಳನ್ನು ಮಾಡಿ ಸಣ್ಣಸಣ್ಣ ಶೀಶೆಗಳಲ್ಲಿ ತುಂಬಿಡುತ್ತಾರೆ. ಅಣ್ಣ-ತಮ್ಮ ತಾಯಿ-ಮಕ್ಕಳು, ಅತ್ತೆ-ಸೊಸೆ, ಗಂಡ-ಹೆಂಡತಿ ಹೀಗೆ ಯಾರಲ್ಲೇ ಆಗಲಿ ಮನಸ್ತಾಪವಾಗಿದ್ದರೆ ಈ ಲೇಹ್ಯವನ್ನು ಕಣ್ಣಿನ ರೆಪ್ಪೆಗಳೊಳಗೆ ಹಚ್ಚಿಕೊಂಡರೆ ಅವರ ಈ ವಿರಸ ಮಾಯವಾಗುತ್ತದೆ. ಮತ್ತು ಅವರಲ್ಲಿ ಮೊದಲಿನ ಪ್ರೀತಿ ವಿಶ್ವಾಸ ಮೂಡಿ ಒಂದಾಗುತ್ತಾರೆಂಬ ನಂಬಿಕೆಯಿದೆ. ಈ ಕಾರ್ಯಕ್ಕೆ ಇಂತಿಷ್ಟು ಎಂದು ಕಾಣಿಕೆ ನಿಗದಿಮಾಡಿರುತ್ತಾರೆ. ಬುಡ್ಗ ಜಂಗಮರ ಅತ್ಯಂತ ಜನಪ್ರಿಯ ವಿದ್ಯೆ ಎಂದರೆ ಭವಿಷ್ಯ ಹೇಳುವುದು. ಈ ಹಿಂದಾಗಲೇ ಗಮನಿಸಿದಂತೆ ಹುಡುಗರಿಗೆ ೧೨ ವರ್ಷಗಳಾಗುತ್ತಲೇ ವೃತ್ತಿಯ ದೀಕ್ಷೆ ಕೊಡಿಸುತ್ತಾರೆ. ಈ ದೀಕ್ಷೆಯನ್ನು ಶ್ರೀ ಶೈಲದ ಗುರುಗಳಿಂದ ಕೊಡಿಸಲಾಗುತ್ತದೆ. ಶ್ರೀಶೈಲಕ್ಕೆ ಹೋಗಲು ಆಗದವರಿಗೆ ಈಗಾಗಲೇ ಹೋಗಿ ಬಂದ ಹಿರಿಯರು ದೀಕ್ಷೆ ನೀಡುತ್ತಾರೆ. ಈ ದೀಕ್ಷಾ ಸಮಯದಲ್ಲಿ ಗುರುಗಳು ಹುಡುನಿಗೆ ಕುಂಕುಮ, ಚಿಂತಾಮಣಿ ಕಟ್ಟು, ಬಿಳಿನಾಮ, ರುದ್ರಾಕ್ಷಿಸರ ಮೊದಲಾದುವನ್ನೂ ಕೊಟ್ಟು ದೀಕ್ಷೆಯನ್ನು ಬೋಧಿಸುತ್ತಾರೆ. ಅನಂತರವೇ ಈ ಹುಡುಗ ಈ ವೃತ್ತಿಗೆ ಅರ್ಹನಾಗುತ್ತಾರೆ. ಈ ಸಂಭ್ರಮದ ಸಂದರ್ಭವನ್ನು ಭರ್ಜರಿ ಊಟದೊಂದಿಗೆ ಆಚರಿಸಲಾಗುತ್ತದೆ.

ಸಿದ್ಧರ ವೇಷ : ಇದೊಂದು ಬಹಳ ವಿಶಿಷ್ಟವಾದ ಕಲಾಪ್ರದರ್ಶನದ ವೇಷ. ಮುಖದ ಕಣ್ಣುಗಳಿಗೆ ಬಿಳಿಯಬಣ್ಣ ಹಣೆಯ ಮೇಲೆ ಮತ್ತು ಕೊರಳಿಗೆ ವಿಭೂತಿ ಧರಿಸಿ, ಬಣ್ಣ ಬಣ್ಣದ ಕಪೀನು ಹಾಕಿ ಕಪೀನ ಮೇಲೆ ಗಲೀಪು ಹಾಕಿರುತ್ತಾರೆ. ಅದರ ಮೇಲೆ ರುದ್ರಾಕ್ಷಿ ಸರಗಳು ಎರಡು ಮೂರು ಹಾಕಿಕೊಂಡು ಹಸ್ತಲಾಗವ (ಕೈಚಳಕ) ಪ್ರದರ್ಶನಕ್ಕೆ ಬೇಕಾಗುವ ಸಾಮಾನುಗಳ ಸಮುದ್ರದ ಶಂಕು, ಚಿಪ್ಪು, ವಿಭೂತಿ, ರುದ್ರಾಕ್ಷಿ, ಕುಂಕುಮ, ಅಡಿಕೆ, ಗಾಜಿನ ಗುಂಡು, ದಾರ ಗಜುಗ, ಚೇಳು ನಾಟ್ಯ ಬಿಟ್ಟಬಿಕ್ಕ ಆಕಾರದ ಲಿಂಗುಗಳು ಬಸವಣ್ಣ (ನಂದಿ) ಹಾವಿನ ಪೊರೆ, ಹಾವಿನ ತಲೆ, ಬಾಣತಿ ಹಸ್ತ, ಚಿಗರೆಚರ್ಮ ನಾಸಿಡೆಬ್ಬಿ ಬಿಳಿ ಬೆಣಚಿನ ನುಣಪಾದ ಕಲ್ಲುಗಳು, ಇವೆಲ್ಲವುಗಳನ್ನು ಜೋಳಿಗೆಯಲ್ಲಿ ಹಾಕಿರುತ್ತಾರೆ. ಇದಕ್ಕೆ ಕಿಟಗಾಣಿ ಜೋಲ್ಕ (ಸಿದ್ಧರ ಜೋಳಿಗೆ) ಎನ್ನುತ್ತಾರೆ. ಆ ಜೋಳಿಗೆಯನ್ನು ಒಂದು ಬಿದುರಿನ ದಬ್ಬವನ್ನು ಹೆಗಲಿಗೇರಿಸಿ ಕೈಯಲ್ಲಿ ಶಂಕು ಘಂಟೆ ಹಿಡಿದು ಮನೆ ಮುಂದೆ ನಿಂತು ಶಿವನನ್ನು ನೆನೆಯುತ್ತ ಕೊನೆಯಲ್ಲಿ ಮಂಗನಾಟ, ಡೊಂಬರಾಟ ಸಿದ್ಧರಾಟ ಶಿವ....ಶಿವ....ಶಿವ ಆಗಾಟ ಓಗಾಟ ಒಮ್ಮೆಲಗಾಟ ಎನ್ನುತ್ತ ತನ್ನ ಕಲಾ ಚಮತ್ಕಾರ ವಿದ್ಯೆಯನ್ನು ಪ್ರದರ್ಶಿಸಿ ಜನರನ್ನು ರಂಜಿಸುತ್ತಾರೆ.

ತೊಗಲು ಗೊಂಬೆಯಾಟ : ಈ ಕಥೆ ಕೇಳಲು ಒಂದು ಗಾದೆ ಇದೆ. "ಅರವತ್ತುಗಾವು

ನಡೆದು ಹರಿಕಥೆ ಕೇಳಬೇಕೆಂತೆ ತೊಂಬತ್ತುಗಾವುನಡೆದು ತೊಗಲು ಗೊಂಬೆಯಾಟ ನೋಡಬೇಕಂತೆ'' ವೈಶಿಷ್ಟವಾಗಿರುವ ತೊಗಲು ಗೊಂಬೆಯಾಟ ಸಂಗೀತ, ಸಾಹಿತ್ಯ ನಾಟ್ಯ ಚಿತ್ರಕಲಾ ಸಮೂಹ ಸ್ವರೂಪವೇ ಜನರಂಜನೆಯಾಗಿರುತ್ತದೆ.

ಅನೇಕ ದಕ್ಷಿಣ ದೇಶದಲ್ಲಿ ''ಚಾಲ ಮಂಡಪಿಕಾ'' ಅದೇ ಹೆಸರಿನಲ್ಲಿ ಚರ್ಮ ನಾಟಕ ಪ್ರದರ್ಶಿಸುತ್ತಿದ್ದರು. ಎಂದು ಆಂಧ್ರದ ಕವಿ ನೀಲಕಂಠದ ಮಹಾಭಾರತದ ವಾಕ್ಯದಲ್ಲಿ ತಿಳಿಸುತ್ತಾರೆ.

೧೩ನೇ ಶತಮಾನದಲ್ಲಿ ಇದರ ಪ್ರಸ್ತಾವನೆಯನ್ನು ಶಾಸನದಲ್ಲಿದೆ. ''ನಾರಂಗ ಬೊಂಮಲ ನಾರಿಂಚವಾದ'' ೧೬ನೇ ಶತಮಾನದಲ್ಲಿ ಚಂದ್ರಭಾನು ಚರಿತ್ರೆಯನ್ನು ಕಾಣಬಹುದು. ಮಹಾತ್ಮಗಾಂಧಿ ತೊಗಲು ಗೊಂಬೆಯಾಟವನ್ನು ಆಂಧ್ರ ಪ್ರದೇಶದ ತೊಪ್ಪಳ ಗೋದಾವರಿ ಜಿಲ್ಲೆಯಲ್ಲಿ ಅನಪರ್ತಿ ತಿನಾರ್ತಿರಾವು, ತೋಟರಂಗರಾವು ಮತ್ತು ಹೈದರಾಬಾದಿನ ಶ್ರೀನಿವಾಸರಾವು, ಬೇಗಂ ಪೇಟೆ, ಸವತ್ ನಗರ, ದಿಲ್‌ಕುಶ್ ನಗರ, ಅಂಬರ್ ಪೇಟೆ, ಪಾತಬಸ್ತಿ, ಮೊದಲಾದ ಕಡೆ ಪ್ರದರ್ಶಿಸಿರುವುದು ಕಂಡು ಬರುತ್ತದೆ.

೧೯೭೧ ಆಗಸ್ಟ್ ಸೆಪ್ಟಂಬರ್ ತಿಂಗಳಲ್ಲಿ ಜರ್ಮನ್ ಸಾಂಸ್ಕೃತಿಕ ಉತ್ಸವದಲ್ಲಿ ಭಾರತದ ಪ್ರತಿನಿಧಿಯಾಗಿ ಆಂಧ್ರಪ್ರದೇಶದ ತೊಗಲುಗೊಂಬೆ ಕಲಾ ಪ್ರದರ್ಶನವನ್ನು ಏರ್ಪಡಿಸಿದ್ದರು. ಈ ತೊಗಲು ಗೊಂಬೆಯಾಟವನ್ನು ಕರ್ನಾಟಕದಲ್ಲಿ ಸಿಳ್ಳೆಕ್ಯಾಥಾ ಜನಾಂಗವು ಸಹ ಪ್ರದರ್ಶಿಸುತ್ತಾರೆ. ಇದರಲ್ಲಿ ಪ್ರಮುಖರು ಬಳ್ಳಾರಿ ಜಿಲ್ಲೆಯ ಬೆಳಗಲ್ಲು ವೀರಣ್ಣ. ಕ್ರಿ.ಶ. ೧೫೨೧ರ ಆಂಧ್ರ ಶಾಸನದಲ್ಲಿ ಕೋಲಾರ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಬೊಂಮಲಾಟ ಪಲ್ಲೆ (ಬೊಮ್ಮನಳ್ಳಿ) ಮತ್ತು ಬೊಮ್ಮನಾಳ ಕಟ್ಟಾ (ಬಾಲೆಕಟ್ಟಾ) ಎಂದು ಊರಿನ ಹೆಸರುಗಳಿವೆ.

ತೊಗಲುಗೊಂಬೆಯಾಟವನ್ನು ಕರ್ನಾಟಕದ ಸೀಳ್ಳೆಕ್ಯಾಥ ಸಮುದಾಯ ಮತ್ತು ತಮಿಳಿನಾಡಿನಲ್ಲಿ ತೊಲುಪಲ್ಲೆ, ಕೇರಳದಲ್ಲಿ ತೇಲುಪಾವಕುತೂರು, ಓರಿಸ್ಸಾದಲ್ಲಿ ರವನ್ ಚಾಯಿ ಉತ್ತರ ಭಾರತದ ಪ್ರಚಾರದ ಕಟ್‌ಪುಲ್ಲೇಕ್ ತೊಗಲು ಗೊಂಬೆಯಾಟಕ್ಕೆ ಚಾರಿತ್ರಿಕವಿರುತ್ತದೆ ಎಂದು ತಿಳಿದು ಬಂದಿರುತ್ತದೆ. ಬುಡ್ಗಜಂಗಮರು ಅನೇಕ ಕಲಾಪ್ರದರ್ಶನಗಳಲ್ಲಿ ಈ ತೊಗಲು ಗೊಂಬೆಯಾಟ ಒಂದು ವೃತ್ತಿ ಪ್ರಧಾನವಾಗಿದೆ.

ಈ ತೊಗಲುಗೊಂಬೆಯಾಟವು ಗೊಂಬೆಗಳನ್ನು ತಾವೇ ತಯಾರಿಸಿಕೊಳ್ಳುತ್ತಿದ್ದರು. ಪುರುಷಗೊಂಬೆಗೆ ಆಡಿನ ತೊಗಲು, ಸ್ತ್ರೀಗೊಂಬೆಗೆ ಕುರಿಯ ತೊಗಲು ಉಪಯೋಗಿಸುತ್ತಿರುವರು ಆಡಿನ ತೊಗಲಿಗಿಂತ ಕುರಿಯ ತೊಗಲು ಸ್ವಲ್ಪ ನಯವಾಗಿ ಇರುವುದರಿಂದ ಸ್ತ್ರೀ ಗೊಂಬೆಗಳು ನಯನಜೂಕ್ಕಾಗಿ ಮಾಡಲು ಯೋಗ್ಯವೆಂದು ತೊಗಲುಗೊಂಬೆಯಾಡಿಸುವ ವಿಧಾನ ಕವಿ ವೆಂಕಟೇಶಂ ಹೈದರಾಬಾದ್ ಇವರು ತಿಳಿಸುತ್ತಾರೆ.

ತೊಗಲು ಗೊಂಬೆಯಲ್ಲಿ ಒಂದು ಜೀವಬೊಂಬೆ ಎನೇದು ಏಕಾಂಡಂಗೊಂಬೆ ಮೊದಲ ಜಿವಗೊಂಬೆಗೆ ತಲೆಯನ್ನು ಬದಲಿಸಲು ಸಾಧ್ಯ ಇದು ಕಥೆಗೆ ತಕ್ಕಂತೆ ಪಾತ್ರಗಳ ತಲೆಗಳನ್ನು

ಬದಲಿಸಿ ಹಾಡಿಸಬಹುದು. ಆದರೆ ಏಕಾಂತಗೊಂಬೆ ಆ ರೀತಿ ಬದಲಿಸಲು ಸಾಧ್ಯವಿಲ್ಲ. ಉದಾ. ರಾವಣಾಸುರ, ಆಂಜನೇಯ ಬ್ರಹ್ಮ ರಾಕ್ಷಸ ಹೀಗೆ.

ಈ ತೊಗಲು ಗೊಂಬೆಯಾಟದಲ್ಲಿ ಹತ್ತು ಜನರಿದ್ದು ಇದರಲ್ಲಿ ಇಬ್ಬರು ವ್ಯಕ್ತಿಗಳು ಗೊಂಬೆಗಳನ್ನು ಆಡಿಸುತ್ತಾ ಒಬ್ಬರು ಗೊಂಬೆಗಳ ಕಥೆಗೆ ತಕ್ಕಂತೆ ಗೊಂಬೆಗಳನ್ನು ಒದಗಿಸುತಿರಬೇಕು. ಒಬ್ಬರು ಹಾರ್ಮೋನಿಯಂ, ಒಬ್ಬರು ತಬಲ ಒಬ್ಬರು ತಾಳ ಹೀಗೆ ಇಬ್ಬರೇ ಮಾತ್ರ ಸೂತ್ರದಾರಿಗಳಾಗಿರುತ್ತಾರೆ.

ಆಂಧ್ರಪ್ರದೇಶದಲ್ಲಿ ಬುಡ್ಗ ಜಂಗಮರು ಪ್ರದರ್ಶಿಸುವ ತೊಗಲುಗೊಂಬೆ ಕಥೆಗಳು.

ಉತ್ತರ ಗೋಗ್ರಹಣ, ದಕ್ಷಣಗೋಗ್ರಹಣ ಕೀಚಕ ವಧ

ದ್ರೌಪದಿ ಸ್ವಯಂವರ, ಬಕಾಸುರವಧೆ ಸುಂದರ ಕಾಂಡ

ಅರಣ್ಯ ಕಾಂಡ ಅಂಗದ ರಾಯಭಾರ, ಇಂದ್ರಜಿತು,

ಕುಂಬಕರ್ಣ, ರಾವಣ ಯುದ್ಧ, ಮಹಿರಾವಣ,

ಕುಮಾರಸ್ವಾಮಿ ಮೊದಲಾದವುಗಳನ್ನು ಆಡುತ್ತಿದ್ದರು. ಕರ್ನಾಟಕದಲ್ಲಿ ರಾಮಾಯಣ ಮಹಾಭಾರತ ಶಿವಜಲಿಂಧರ ದೇವಿ ಸ್ವಯಂವರ ಆಡುತ್ತಾರೆ.

ತೊಗಲು ಗೊಂಬೆಯಾಟಕ್ಕೆ ಪ್ರತೇಕ ಸಾಹಿತ್ಯವಿಲ್ಲ ಯಕ್ಷಗಾನದಂತೆ ತೊಗಲು ಗೊಂಬೆಯಾಟವನ್ನು ಪ್ರದರ್ಶಿಸುತ್ತಾರೆ. ತೊಗಲು ಗೊಂಬೆಯಾಟದಲ್ಲಿ ಸರಸ್ವತಿ ಪ್ರಾರ್ಥನೆ ನಂತರ ವಿಘ್ನೇಶ್ವರನ ಪ್ರಾರ್ಥನ ನಂತರ ಆದಿನದ ಆಟವನ್ನು ಆಡಿಸುವ ಆತನ ಹೆಸರು ಹಿಡಿದು ಹೊಗಳುತ್ತಾರೆ. ನಂತರ ಆದಿನ ಆಟವಾಡುವ ವಿವರ ತಿಳಿಸುತ್ತಾರೆ. ಪ್ರಾರಂಭದಲ್ಲಿ ಕಲಾಗಾಡು, ಜುಟ್ಟು ಪೋಲಿಗಾಡು, ದೋಳಿಗಾಡು ಮತ್ತು ಬಂಗಾರಕ್ಕ ಎಂಬ ಹಾಸ್ಯ ಪಾತ್ರಗಳ ತೊಗಲು ಗೊಂಬೆಗಳನ್ನು ಮತ್ತು ಪ್ರದರ್ಶನದ ಮಾಧ್ಯಮವು ಈ ಹಾಸ್ಯ ಗೊಂಬೆಗಳನ್ನು ಆಡಿಸಿ ಹಾಸ್ಯದಿಂದ ಎಲ್ಲರನ್ನು ನಗಿಸುವುದುಂಟು.

ಪೂರ್ವಕಾಲದಲ್ಲಿ ಅನೇಕ ಬಹುಮಾನಗಳನ್ನು ನೀಡಿದ್ದಾರೆಂದು ಶಾಸನಗಳಲ್ಲಿ ಇದರ ಪ್ರತೀತಿ ಇದೆ. ಕರ್ನೂಲು ಹತ್ತಿರ ಚಾಕಲಿಪಲ್ಲಿ ಗ್ರಾಮದಲ್ಲಿ ಗಗನಂ ಲಕ್ಷ್ಮಯ್ಯ ಮತ್ತು ಗಗನಂ ಸೋಮಲಿಂಗಮು ಎನ್ನುವ ಬುಡ್ಗಜಂಗಮ್ ಸಮುದಾಯದವರು ಆಡಿಸಿದ ತೊಗಲು ಗೊಂಬೆಯಾಟಕ್ಕೆ ವೆಂಕಟರಾಮರೆಡ್ಡಿ ಎನ್ನುವ ಜಮೀನಾದಾರನು. ೧೨ ಎಕರೆ ಕುಶ್ಕಿ, ೫ ಎಕರೆ ನಿರಾವರಿ ಮಾನ್ಯಂ ನೀಡಿದ್ದಾನೆಂದು ಅಲ್ಲಿ "ಬೊಪ್ಪಲೇಳ ಮಾನ್ಯಂ" ಎಂದು ಕರೆಯುವರು ಎಂದು ಮೆಹಬೂಬ್ ನಗರ ಜಿಲ್ಲಾ ಜಟ್‌ಜರ್ಲ ನಿವಾಸಿಯಾದ ಗಗನಂ ನರಸಿಂಹ ಎಂಬ ಬುಡ್ಗಜಂಗಮ್ ಇವರು ತಿಳಿಸಿದ್ದಾರೆ.

ಆಂಧ್ರಪ್ರದೇಶದ ನೆಲ್ಲೂರು ಜಿಲ್ಲೆಯ ಆತ್ಮಕೂರು ಗ್ರಾಮದಲ್ಲಿ ಕೊಮಾರಿ ರಾಜಾರಾಂ ಇವರು ಇಂದ್ರಜಿತ್‌ಯುದ್ಧ ಇನ್ನು ಕೆಲವು ನಾಟಕಗಳನ್ನು ಪ್ರದರ್ಶಿಸಿ ಸುಮಾರು ೩೦೦ ವರ್ಷಗಳ ಹಿಂದೆ ಈ ಕಲೆಯನ್ನು ಪ್ರದರ್ಶಿಸುತ್ತಿದ್ದರು ಎಂದು ತಿಳಿದು ಬಂದಿದೆ. ಈ ಕಲೆಯು ಮಹಾರಾಷ್ಟ್ರದಿಂದ ಆಗಮಿಸಿದ ಸಿಳ್ಳೆಕ್ಯಾಥಾ ಇವರ ಕಲೆಯನ್ನು ಕಲೆತು ಪ್ರದರ್ಶಿಸಿದ್ದಾರೆ.

ಗಣಾಯತ ಜಂಗಮ್ : ೧೮೭೯ರಲ್ಲಿ ಥರ್ಸ್ಟನ್ ಅವರು ಬುಡ್ಗಜಂಗಮ ಜಾತಿಯ

ಬಗ್ಗೆ ಸ್ಪಷ್ಟೀಕರಣ ನೀಡಿ ಇವರಲ್ಲಿ ಗಣಾಚಾರಿ ಎಂದು ಪಂಚಾಯತಿ ಮತ್ತು ಶುಭ ಅಶುಭ ಕಾರ್ಯಗಳನ್ನು ಮಾಡುತ್ತಾ, ಬುಡ್ಗ ಕಥೆಗಳನ್ನು ಹೇಳುತ್ತಾ ಇರುವುದಕ್ಕೆ ಗಣಾಯತ ಜಂಗಮ್ ಎನ್ನುತ್ತಾರೆ.

**ಶಿವಜಂಗಾಲು, ಶ್ರೀಜಂಗಾಲು, ಸಿರಿ ಜಂಗಾಲು :** ಬುಡ್ಗಜಂಗವ್ ಇದು ಶೈವಶಬ್ದವಾಗಿದ್ದು ಈ ಜಂಗಮ ಎಂಬ ಶಬ್ದಕ್ಕೆ ಶ್ರೀ ಮತ್ತು ಸಿರಿ ಎಂಬ ಹೆಸರಿನಿಂದ ಅವರು ಶಿವಕಥೆಗಳನ್ನು ಕಲಾಪ್ರದರ್ಶನದಲ್ಲಿ ಹೇಳುತ್ತಾ ಬಂದಾಗ ಈ ಬುಡ್ಗ ಭಾಷೆ ಬಗ್ಗೆ ಹೇಳಿಕೊಳ್ಳುವ ಒಂದು ಕೀಳರಿಮೆ ಇತ್ತು ಶ್ರೀಜಂಗಾಲು ಅಥವಾ ಶ್ರೀಜಂಗಮ ಎನ್ನುವ ಶಬ್ದದಿಂದ ಹಳ್ಳಿಗಳಲ್ಲಿ ಒಳ್ಳೆ ಗೌರವ ಸಿಗುತ್ತಿತ್ತು. ಈಗಾಗಲೇ ವೀರಶೈವ ಜಂಗಮಯ್ಯ ಇರುವುದರಿಂದ ಇವರು ಜಂಗಮ ಹೆಸರಿನಲ್ಲಿ ಪ್ರತ್ಯೇಕವಾಗಿ ಗುರುತಿಸುವಂತ್ತಿತ್ತು. ಆದ್ದರಿಂದ ಇದು ಒಂದು ಜಾತಿವಾಚಕವಲ್ಲ ಎಂದು ತಿಳಿದು ಬಂದಿರುತ್ತದೆ.

**ಈತ ಮುಕ್ಕಲ ಜಂಗಾಲು :** ಬುಡ್ಗ ಕಥೆ ಮತ್ತು ಇತರ ಕಲಾ ಪ್ರದರ್ಶನಗಳನ್ನು ಮಾಡಿ ನಂತರ ಊರು ಹೊರಗಿನ ಬಯಲು ಜಾಗದಲ್ಲಿ ಇವರ ಈಚಲು ಚಾಪೆಯ ಗುಡಾರಗಳಲ್ಲಿ ವಾಸಿಸುತ್ತಿದರು. ಆಂಧ್ರಪ್ರದೇಶದ ಸಂಶೋಧಕರು ಆದ ಮಿಕ್ಕಿಲಿ ನೇನಿ ರಾಧಕೃಷ್ಣ ಮೂರ್ತಿ ಅವರು ಈ ಕುರಿತು ಮಾಹಿತಿಯನ್ನ ದಾಖಲಿಸಿದ್ದಾರೆ.

**ಪಿರಿಕಿ ಜಂಗಾಲು :** ಅಲೆಮಾರಿ ಸಮುದಾಯದ ಇವರು ಅಡವಿಸಂಚಾರಿಗಳು ಹಾಗೂ ಗ್ರಾಮೀಣ ರೈತರ ಹೊಲಗದ್ದೆಗಳಲ್ಲಿ ತರಕಾರಿಗಳು, ಹುಣಸೇಕಾಯಿ ಪುಂಡೇಪಲ್ಲೆ ಮೊದಲಾದ ಸಣ್ಣ ಪುಟ್ಟ ಅಡಿಗೆ ಬಳಸುವ ಆಹಾರ ಪದಾರ್ಥಗಳನ್ನು ಸ್ವಲ್ಪ ತೆಗೆದುಕೊಂಡು ಹೋಗಿ ಅಡಿಗೆ ಮಾಡಿ ತಿನ್ನುವುದುಂಟು. ಈ ರೀತಿ ಆಹಾರ ಪದಾರ್ಥಗಳನ್ನು ತೆಗೆದುಕೊಂಡಾಗ ಊರಿನ ನಾಗರಿಕರು ಇವರನ್ನು ಬೆದರಿಸಿ ಓಡಿಸುವುದುಂಟು ಈ ರೀತಿ ಹೆದರಿಸಿದ್ದಾಗ ಬೇರೆ ಕಡೆಗೆ ಸಂಚಾರ ಮಾಡುವುದರಿಂದ ಪಿರಿಕಿ ಜಂಗಾಲು ಎಂದು ಅನೇಕ ಜನ ಕರೆಯುವುದುಂಟು.

**ಬೀದಿ ಭಾಗವತಗಳು :** ಇದನ್ನು ಯಕ್ಷಗಾನ ಎಂದು ಕರೆಯುವುದುಂಟು ಈ ಬುಡ್ಗಜಂಗಮರ ಕಥೆಗಳು ಪೌರಾಣಿಕ ರೂಪದಲ್ಲಿ ವೇಷಭೂಷಣವನ್ನು ಧರಿಸಿ ವೇದಿಕೆಯ ಮೇಲೆ ಹಾಡುವುದಕ್ಕೆ ಬೀದಿ ಭಾಗವತಗಳೆಂದು ಕರೆಯುವುದುಂಟು.

ಬೀದಿ ಭಾಗವತಗಳನ್ನು ೧೭ನೇ ಶತಮಾನದ ಚಂದ್ರಶೇಖರ ಶತಕಂ ಇದರಲ್ಲಿ ವಿವರಣೆ ನೀಡಿದ್ದಾರೆ. ಈ ಬೀದಿ ಭಾಗವತದಲ್ಲಿ ನಾಗಿ ಗಂಗಿ ಎಂಬ ಸ್ತ್ರೀಪಾತ್ರ, ಪ್ರಾರಂಭಿಸುತ್ತಾರೆ. ಈ ಬೀದಿ ಭಾಗವತಗಳನ್ನು ಪ್ರದರ್ಶಿಸುತ್ತಾರೆ. ಆದರೆ ಇದರಲ್ಲಿ ಸ್ತ್ರೀ ಪಾತ್ರಕ್ಕೆ ಪುರುಷರನ್ನು ನೇಮಿಸುತ್ತಾರೆ. ಬೀದಿ ಭಾಗವತಗಳು ಚಿನ್ನದಾಸರು, ಚೆಂಚರು, ಯಾನದರು, ಯರಗೊಲ್ಲರು, ಪ್ರದರ್ಶಿಸುತ್ತಾರೆಂದು ತಿಳಿದು ಬರುತ್ತದೆ.

ಪೂರ್ವಕಾಲದಲ್ಲಿ ಬೀದಿ ಭಾಗವತಗಳನ್ನು ಹರಿಚಂದ್ರ ಪಾರಂಪರಿಕ ಮೈರಾವಣ ಚರಿತ್ರೆ, ಶತಕಂಟಿ ರಾಮಾಯಣ ಕೋಟಾಪುರಿ ಧರ್ಮ ಚರಿತ್ರೆ ಹೇಮಲಪಲ್ಲಿ ವಿರಾರಪಲ್ಲಿ ಹೇಮದಲ್ಲಿ ಗರುಡ ಅಲ್ಲದೆ ಚಂದ್ರಹಾಸ ಪ್ರದಲ್ಮದ ಚರಿತ್ರೆ ಪ್ರಭಾವ ವಿಲಾಸ, ಸುಗ್ರೀವ ವಿಲಾಸಂ,

ಶಂಭಕಾಸುರವಧಾ, ಭಾಣಾಸುರ, ಕಾಮದಾಸು. ಇದು ಕೇವಲ ಬುಡ್ಗ ಜಂಗಮರು ತಾಂಬುರಿ ಬುಡ್ಗಿ ಹಿಡಿದು ಬುರ್ರಕಥೆ ಹೇಳುವ ಬದಲಿ ಪೌರಾಣಿಕವಾಗಿ ವೇಷಧರಿಸಿ ಅದೇ ಕಥೆಗಳನ್ನು ತೆರೆಯ ಮೇಲೆ ಪ್ರದರ್ಶಿಸುವುದು ಒಂದು ಕಲೆ.

ಮೊದಲಿಗೆ ರಾಮಕೃಷ್ಣನ ವೇಷ ಪ್ರವೇಶಮಾಡಿ ನಂತರ ಸೂತ್ರದಾರನು ಹಾಸ್ಯ ವಿನೋದವನ್ನು ನೀಡುತ್ತಾ ರಂಗದಲ್ಲಿ ಪ್ರವೇಶ ಮಾಡುತ್ತಾನೆ. ಇದರ ಹಿನ್ನೆಲೆ ಗಾಯನ ಹಾಡು ತಕ್ಕಂಗೆ ಇವರು ಯಕ್ಷಗಾನ ರೀತಿಯಲ್ಲಿ ಆಡುತ್ತಾ ಕುಣಿಯುತ್ತಾ ನಡೆಯುವರು ಇದು ಆಂಧ್ರಪ್ರದೇಶ ಮತ್ತು ದಕ್ಷಿಣ ಕರ್ನಾಟಕದ (ಬೆಂಗಳೂರು ಕೋಲಾರ ಮುಂತಾದ) ಭಾಗಗಳಲ್ಲಿ ಬೀದಿ ಭಾಗವತಗಳನ್ನು ಪ್ರದರ್ಶಿಸುತ್ತಾರೆ.

ಇವರು ಬೀದಿಭಾಗವತದಲ್ಲಿ ಪ್ರದರ್ಶಿಸುವ ಕಥೆಗಳು ಗರುಡಾ ಚಲಂ ಚೆಂಚುಲಕ್ಷ್ಮಿ ದೇವಯಾನಿ, ರುಕ್ಮಿಣಿ ಕಲ್ಯಾಣ, ಬಾಣಾಸುರ ಭಸ್ಮಾಸುರ, ಈ ಕಲೆಗಳಲ್ಲಿ ಬುಡ್ಗ ಜಂಗಮರು ಆ ಪ್ರತಿಮ ಕಲಾಪ್ರದರ್ಶನಗಳನ್ನು ಮಾಡಿದ್ದಾರೆ.

**ಕಾಟಿ ಪಾಪ (ಸುಡುಗಾಡುಸಿದ್ಧರ ವೇಷ) :** ಜಾನಪದ ಭಿಕ್ಷುಕರಲ್ಲಿ ಕಣ್ಣುಕಟ್ಟು ವಿದ್ಯೆಯನ್ನು ಹರಿತವರು ಇವರು ಇಂದ್ರಜಾಲ ವಿದ್ಯೆಯಿಂದ ಜನರನ್ನು ಆಕರ್ಷಿಸುವುದು ಈ ಸುಡುಗಾಡು ಸಿದ್ಧ ವೇಷವನ್ನು ಬುಡ್ಗ ಜಂಗಮರು ಕಿಟ್ಟುಪಂಥೆಂದು ಕರೆಯುವುದುಂಟು. ಕಿಟ್ಟು ಎಂದರೆ ಗ್ರಾಮಸ್ಥರಲ್ಲಿ ಯಾರಾದರು ಸತ್ತಾಗ ಇವರು ಸುಡುಗಾಡಿಗೆ ನಾವೇ ಸಿದ್ಧರು ಎಂದು ತಮ್ಮ ಕಾಣಿಕೆ ಕೇಳಿವುದುಂಟು.

ಬುಡ್ಗ ಜಂಗಮ್ ಭಾಷೆಯಲ್ಲಿ ಕಿಟ್ಟು (ಗೀಟ್ಟು) ಎಂದರೆ ಸತ್ತವರು ಎಂದು ಅರ್ಥ ಈ ಸಮುದಾಯವನ್ನು ಕಾಟಿಪಾಪಾಲ ಎಂದು ತೆಲುಗುನಲ್ಲಿ ಕರೆದ ಸಂಶೋಧಕರು ಡಾ. ಎನ್. ವಿಜಯಗಾರು ಜಾನಪದ ವೃತ್ತಿಗಾಯಕ ಎನ್ನುವ ಗ್ರಂಥದಲ್ಲಿ ತಿಳಿಸಿರುತ್ತಾರೆ. ಕೆಲವರು ತಲೆಯ ಮೇಲೆ ಹಿತ್ತಾಳಿಯ ಪಟ್ಟಿಗಳ ಕಿರಿಟವನ್ನು ಧರಿಸಿರುತ್ತಾರೆ.

ಪ್ರಾಚೀನ ಕಾಲದಲ್ಲಿ ವೃತ್ತಿ ಬಗ್ಗೆ ಬಸವಪುರಾಣಂ ನಾಲ್ಕು ಮೂರು ಒಂದು ಪುಟದಲ್ಲಿ ತಿಳಿಸಿದ್ದಾರೆ. ಸುಡುಗಾಡುಸಿದ್ಧರ ಬಗ್ಗೆ ಇಂಡಿಯನ್ ಆಂಟಿಕ್ವರಿ ೧೮೭೩, ೨ನೇ ಸಂಪುಟದಲ್ಲಿ ತಿಳಿಸಿದ್ದಾರೆ. ಸುಡುಗಾಡಿನಲ್ಲಿ ಶುಲ್ಕುವನ್ನು ಪಡೆದು ಜೀವನ ಮಾಡುವರೆಂದು ಮತ್ತು ಸುಡುಗಾಡಿಗೆ ಗುರುಗಳೆಂದು ತಿಳಿಸುತ್ತಾರೆ. ಇವರು ಕರ್ನಾಟಕ ಆಂಧ್ರ ಮಹಾರಾಷ್ಟ್ರ ಮುಂತಾದ ರಾಜ್ಯಗಳಲ್ಲಿ ವಾಸವಾಗಿದ್ದಾರೆ.

ಮಹಾರಾಷ್ಟ್ರದ ಕೆಲವು ಭಾಗದಲ್ಲಿ ಮಸಣ ಜೋಗಿಎಂದು ಕರೆದಿದ್ದಾರೆ. ಸುಡುಗಾಡು ಸಿದ್ಧರ ಮೂಲ ವಿಷಯವನ್ನು ಕೇಳಿಕಿದಾಗ ಇವರು ಹೇಳುವುದು ಹರಿಚಂದ್ರನ ಕಥೆ ಮತ್ತು ಎರಡನೆಯದು ಒಬ್ಬ ಅನಾಥ ಶಿಸ್ತು ಸತ್ತಾಗ ಮಸಣದಲ್ಲಿ ಸಂಸ್ಕಾರ ಮಾಡಲು ತೆಗೆದುಕೊಂಡು ಹೋದರೆ ಅಲ್ಲಿ ಶುಲ್ಕವನ್ನು ಕೊಡುಎಂದು ಕೇಳಿದರಂತೆ ಶುಲ್ಕವನ್ನು ಕೊಡದೇ ಶವಬಿಟ್ಟು ಹೋದರು. ಆಗ ಶಿವಪಾರ್ವತಿ ಪ್ರತ್ಯಕ್ಷರಾಗಿ ಆ ಶವಕ್ಕೆ ಜೀವನೀಡಿ ಈ ಮಸಣಕ್ಕೆ ಸಿದ್ದನಾಗು ಎಂದು ಹೇಳಿದ್ದಾರೆ.

ಸತ್ಯ ಹರಿಚಂದ್ರನ ಕಥೆಯಲ್ಲಿ ಹರಿಚಂದ್ರನು ಶಾಪ ವಿಮೋಚನೆಯಾಗಿ ಮತ್ತೆ ನಾನು ಎಂದಿನಂತೆ ರಾಜನಾಗಿ ರಾಜ್ಯಭಾರವನ್ನು ಮಾಡಲು ಹೋದಾಗ ಆ ಮಸಣವನ್ನು ಕಾಯಲು ವೀರಬಾಹು ಈ ಸುಡುಗಾಡು ಸಿದ್ಧರನ್ನು ಶವ ಶುಲ್ಕಕ್ಕಾಗಿ ನೇಮಿಸಿದ್ದಾನೆಂದು ವೇಷದಲ್ಲಿ ತಾಮ್ರದ ಶಾಸನದ ಪ್ರಕಾರ ಇಷ್ಟು ನೀಡಬೇಕೆಂದು ಶಾಸನ ತೋರಿಸಿ ಇಂತಿಂತ ಸಮ್ಮುದಾಯಾ ಜಾತಿಯವರು ಇಷ್ಟಿಷ್ಟು ಹಣನೀಡಬೇಕೆಂದು ಶಾಸನ ತೋರಿಸಿ ಭಿಕ್ಷೆಬೇಡುವರು. ಇದನ್ನು ಬೇರೆಯವರಿಂದ ಕಲಿತಿರಬಹುದೆಂದು ಆಂಧ್ರಪ್ರದೇಶದ ಸಂಶೋಧಕರಾದ ಪಾಟ್ಟುಟಿಕೆ ಸೋಮನಾಥಡು ತಿಳಿಸಿದ್ದಾರೆ. ಇವರು ಮಾಲ ಮಾದಿಗ ಸಮುಧಾಯಗಳಿಗೆ, ಗುರುಗಳೆಂದು ತಿಳಿಸುವರು. ಮತ್ತು ಮಾಲಸಮುದಾಯ ಭೀಕ್ಷೆ ಬೇಡಲು ಹೋಗಿದ್ದರಿಂದ ಮಾಲಜಂಗಮ್ ಎಂದು ಸಹಕರೆಯುವರು.

### ಜನಪದ ವಾದ್ಯ ವಾದನ ಪರಿಕರಗಳು

ಬುಡ್ಗ ಜಂಗಮರಲ್ಲಿ ಮುಖ್ಯವಾಗಿ ವೃತ್ತಿ ಭಿಕ್ಷೆಗಾಗಿ ಮತ್ತು ಮದುವೆ ಹಾಗೂ ಕುಲದೇವರಿಗೆ ಹರಿಕೆ ಸಲ್ಲಿಸುವ ಸಂದರ್ಭದಲ್ಲಿ ಬಳಸುವ ವಾದ್ಯಗಳು, ಅವುಗಳೆಂದರೆ ತಾಂಬೂರಿ, ಗುಮ್ಮಟಿ, ತಬಲಾ - ಡಗ್ಗಾ, (ಉಡದ ಚರ್ಮದಿಂದ ಮಾಡಿದ ಡಕ್ಕಿ) ಚಿಟ್ಟಿಕೆಗಳು ಮತ್ತು ರಣ ಹಲಗೆ ಏಕನಾದ, ಡಮರುಗಳನ್ನು ಬಳಸಿ ಕಲಾ ಪ್ರದರ್ಶನ ಮತ್ತು ಸಾಂಪ್ರದಾಯಿಕ ಕುಲಾಚರಣೆಗಳ ಸಂದರ್ಭಗಳಲ್ಲಿ ನುಡಿಸುತ್ತಾರೆ.

ವಾದ್ಯಗಳ ವಿವರ ತಾಂಬೂರಾ, ಗುಮ್ಮಟ ಚಿಟಗೆ ಏಕನಾದ, ಡಮರು, ರಣಹಲಗೆ ಡಿಮ್ಕಿ ರಾಗಮಾಲ ಪೆಟ್ಟಿಗೆ ಡೊಲಕ, ಏಕಮಳಿ, ತ್ರಿಕೋನಾಕಾರದ ಕಬ್ಬಿಣದ ವಾದ್ಯ, ತಾಳ, ಗೆಜ್ಜೆ ಬುರ್ರಕಾಯಿ ಇವುಗಳನ್ನು ಬಳಸಿ ತಮ್ಮ ಉಪಜೀವನದ ಕುಲ ಕಸುಬುಗಳಿಗೆ ಬಳಸುತ್ತಾರೆ. ಹಿರೇ ಬೇವಿನಮರದಿಂದ ವಾದನ ಪರಿಕರಗಳು, ಈಚಲು ಮರದ ಡೋಲಕ ಹಾಗೂ ತಬಲಾ ಇವುಗಳನ್ನು ತಯಾರಿಸಿಕೊಳ್ಳುತ್ತಾರೆ. ವಾದ್ಯ ಮುಚ್ಚಳಿಕೆಗಳಿಗೆ ಆಡಿನ ಚರ್ಮದಿಂದ ಮುಚ್ಚಳಿಕೆ ತಯಾರಿಸಿ ವಾದ್ಯವನ್ನು ಸಿದ್ಧಗೊಳಿಸುತ್ತಾರೆ. ಈಸಕಾಯಿ ಅಥವಾ ಕುಂಬಳಕಾಯಿ ಮತ್ತು ಬಿದುರಿನ ಕಟ್ಟಿಗೆಯನ್ನು ಉಪಯೋಗಿಸಿ ಏಕನಾದ, ಬುರ್ರಕಾಯಿ ತಯಾರಿಸಿಕೊಳ್ಳುತ್ತಾರೆ. ಮರದ ತುಂಡು ಹಾಗೂ ತಗಡಿನ ತುಂಡುಗಳನ್ನು ಬಳಸಿ ಚಿಟಿಗೆಯನ್ನು ತಯಾರಿಸಿಕೊಳ್ಳುತ್ತಾರೆ. ಬುಡ್ಗ ವಾದ್ಯಗಳಾದ ತಾಂಬೂರಿಯನ್ನು ಗುಮ್ಮಟವನ್ನು ದೇವದಾರು ಮರದಿಂದ ತಾಂಬೂರಿಯನ್ನು ಮತ್ತು ಗಮ್ಮಟಕ್ಕೆ ಗಡಿಗೆಯನ್ನು ಉಪಯೋಗಿಸಿ ಮುಚ್ಚಳಿಕೆಗೆ ಆಡಿನ ತೊಗಲಿನ ಚರ್ಮವನ್ನು ಬಳಸುತ್ತಾರೆ. ಡಮರುಗವನ್ನು ಕಟ್ಟಿಗೆಯಿಂದ ತಯಾರಿಸಿಕೊಂಡು ಆಡು ಚರ್ಮದಿಂದ ಮುಚ್ಚಿ ತಯಾರಿಸುತ್ತಾರೆ. ರಣ ಹಲಗೆಯನ್ನು ಒಂದು ಕಬ್ಬಿಣ ವರ್ತುಳ ಅಥವಾ ಕಟ್ಟಿಗೆಯ ವರ್ತುಳ ಮಾಡಿಕೊಂಡು ಎಮ್ಮೆಯ ಚರ್ಮದಿಂದ ಮುಚ್ಚಿ ರಣ ಹಲಗೆ ತಯಾರಿಸಿಕೊಳ್ಳುತ್ತಾರೆ.

ಡಮ್ಕಿ ವಾದ್ಯವನ್ನು ಕೇದಗಿ ಮರದ ತುಂಡಿನಿಂದ ಉಡದ ತೊಗಲಿನಿಂದ ಮುಚ್ಚಳಿಕೆ ಹಾಕಿ ತಯಾರಿಸುತ್ತಾರೆ. ಹಾಡುಗಾರಿಕೆಯಲ್ಲಿ ಸಾಮಾನ್ಯವಾಗಿ ವೀಣೆಯಾಕಾರದ ತಂಬೂರಿ,

ಬುಡ್ಗ, ಗಗ್ಗರ, ಹಾರ್ಮೋನಿಯಂ ಹಾಗೂ ಮುಂತಾದ ಸಂಗೀತ ಉಪಕರಣಗಳನ್ನು ಬಳಸುತ್ತಾರೆ.

ತಂಬೂರಿ, ಬುಡ್ಗ ಹಾಗೂ ಗಗ್ಗರಗಳು ಏಕನಾಥ ಇವರ ಸಂಗೀತದ ಸಾಂಪ್ರದಾಯಿಕ ಉಪಕರಣಗಳಾದರೆ ಹಾರ್ಮೋನಿಯಂ ಹಾಗೂ ತಬಲ ಆಧುನಿಕ ಉಪಕರಣಗಳು.

ಇವರ ಅತಿ ಮುಖ್ಯ ಸಂಗೀತದ ಸಾಂಪ್ರದಾಯಿಕ ವಾದ್ಯವೆಂದರೆ 'ಬುಡ್ಗ', ಚರ್ಮದಿಂದ ಮುಚ್ಚಿದ ಒಂದು ಅಗಲವಾದ ಬಾಯನ್ನು ಅದಕ್ಕೆ ವಿರುದ್ಧವಾಗಿ ತೆರೆದ ಸಣ್ಣ ಬಾಯನ್ನು ಹೊಂದಿರುವ ಹಾಗೂ ನಡುವಿನಲ್ಲಿ ಉಬ್ಬಿರುವ ಮಣ್ಣಿನ ಕೊಳವೆಗೆ 'ಬುಡ್ಗ' ಎನ್ನುತ್ತಾರೆ. ಬಲಗೈನಿಂದ ಅಗಲ ಬಾಯಿಯ ಚರ್ಮದ ಮೇಲೆ ಹೊಡೆಯುತ್ತ ಎಡಭಾಗದ ಕೊಳವೆಯ ಸಣ್ಣ ಬಾಯನ್ನು ಎಡಗೈನಿಂದ ಮುಚ್ಚಿ ತೆಗೆಯುತ್ತಿದ್ದರೆ ಒಳ್ಳೆ ಇಂಪಾದ ನಾದ ಉಂಟಾಗುತ್ತದೆ.

ಹಗಲು ವೇಷಗಾರರು ತಮ್ಮ ವೇಷಗಳಿಗೆ ಬೇಕಾಗುವ ಬಣ್ಣ, ಉಡುಪು, ಆಯುಧ ಮುಂತಾದ ಎಲ್ಲವನ್ನೂ ತಾವೇ ತಯಾರು ಮಾಡಿಕೊಳ್ಳುತ್ತಾರೆ. ಹಿಂದಿನ ಕಾಲದಲ್ಲಿ; ಅಂದರೆ ಈಗಿನಂತೆ ಬಣ್ಣಗಳು ಅಂಗಡಿಗಳಲ್ಲಿ ಸಿಗದಿದ್ದ ಕಾಲದಲ್ಲಿ ಇವರು ಪೂರ್ವಿಕರು ಕೃಷ್ಣಾ, ಗೋದಾವರಿ ಮುಂತಾದ ನದಿಗಳಲ್ಲಿ ಸಿಕ್ಕುವ ಬಣ್ಣಬಣ್ಣದ ಕಲ್ಲುಗಳನ್ನು ಆಯ್ದುಕೊಂಡು ಅವುಗಳನ್ನು ಗಂತದಲ್ಲಿ (ಕಲ್ಲಿಯಲ್ಲಿ) ತುಂಬಿ ಹಸುಗಳ ಮೇಲೆ ಹೇರಿ ತರುತ್ತಿದ್ದರು. ಯಾವ ಬಣ್ಣ ಬೇಕೋ ಆ ಬಣ್ಣದ ಕಲ್ಲನ್ನು ನೀರಿನೊಂದಿಗೆ ತೇದು ಆ ಬಣ್ಣವನ್ನು ಮುಖಕ್ಕೆ ಬಳಿದುಕೊಳ್ಳುತ್ತಿದ್ದರು ಎಂದು ತಿಳಿದು ಬಂದಿದೆ. ಕಪ್ಪು ಬಣ್ಣಕ್ಕೆ ಇದ್ದಿಲನ್ನು ಬಳಸುವುದು ರೂಢಿಯಲ್ಲಿತ್ತೆಂದು ಕುದುರೆ ಬಾಲದ ಕೂದಲಿನಿಂದ ಗಡ್ಡ, ಇವರು ಪೌರಾಣಿಕ ಪಾತ್ರಗಳಿಗೆ ಬೇಕಾಗುವ ಗಧೆಯನ್ನು ಸಾಮಾನ್ಯವಾಗಿ ಹಗುರಾದ ಆಲಿವಾಣ ಮುಂತಾದ ಮರದಿಂದ ಮಾಡಿಕೊಳ್ಳುತ್ತಾರೆ. ಈಗೀಗ ಮರದ ಗದೆಗಳಿಗೆ ಬದಲಾಗಿ ಸ್ಟೀಲಿನ ಬಟ್ಟಲುಗಳಿಂದ ತಯಾರಿಸಿ ಬಳಸುತ್ತಾರೆ; ಇವು ಹಗುರವಾಗಿರುತ್ತವೆ ಹಾಗೂ ಸಾಗಿಸಲು ಅನುಕೂಲ ವಾಗಿರುತ್ತವೆ. ಆಕರ್ಷಕವಾಗಿ ಮಾಡಿರುವ ಗದೆಯು ಮರದ ತುಂಡಿನ ಒಂದು ತುದಿಗೆ ಸುಮಾರು ಒಂದೂವರೆ ಅಡಿ ಉದ್ದದ ಸಲಾಕೆಯನ್ನು ತೆಗೆದುಕೊಂಡು ಅವುಗಳ ತಳದ ಮಧ್ಯದಲ್ಲಿ ಸಲಾಖೆ ತೂರುವಷ್ಟು ರಂಧ್ರಗಳನ್ನು ಮಾಡಿರುತ್ತಾರೆ. ಸಲಾಖೆಗೆ ಏರಿಸಿ ಅದರ ಮೇಲೆ ಅದಕ್ಕಿಂತ ದೊಡ್ಡದಾದ ಬಟ್ಟಲನ್ನು ಮೊದಲಿನಂತೆ ಏರಿಸಿ ಹೀಗೆ ಸುಮಾರು ಮೂರು ನಾಲ್ಕು ಬಟ್ಟಲುಗಳನ್ನು ಏರಿಸುತ್ತಾರೆ. ನಂತರ ದೊಡ್ಡ ಬಟ್ಟಲನ್ನು ಮೊದಲು ಬೋರಲುಹಾಕಿ ಏರಿಸಿ ಅದರ ಮೇಲೆ ಅವಕ್ಕಿಂತ ಚಿಕ್ಕವನ್ನು ಹೀಗೆ ಮೂರು ನಾಲ್ಕು ಬಟ್ಟಲುಗಳನ್ನು ಬೋರಲು ಹಾಕಿ ಏರಿಸಿ ಕಂಬಿಯ ಕೊನೆಗಿರುವ ತ್ರೆಡ್ಡಿಗೆ ನಟ್ಟನ್ನು ತಿರುವಿ ಭದ್ರಮಾಡಿದಾಗ ಒಳ್ಳೆಯ ಚಿತ್ತಾಕರ್ಷಕವಾಗಿ ಕಾಣುವ ಹಗುರಾದ ಗದೆ ಉಂಟಾಗುತ್ತದೆ. ಬೇಕೆನಿಸಿದಾಗ ಬಟ್ಟಲುಗಳನ್ನೆಲ್ಲ ಬಿಚ್ಚಿ ತೆಗೆಯಬಹುದು.

ಇವರು ವೇಷಗಳನ್ನು ಹಾಕಿದಾಗ ಧರಿಸುವ ಉಡಿಗೆ ತೊಡಿಗೆಗಳು ರಂಗುರಂಗಿನಿಂದ ಕೂಡಿರುತ್ತವೆ. ಹೆಣ್ಣು ಪಾತ್ರಗಳಿಗೆ ಬೇಕಾಗುವ ಸೀರೆಗಳು, ಪೌರಾಣಿಕ ಗಂಡು ಪಾತ್ರಗಳಿಗೆ

ಬೇಕಾಗುವ ಪಂಚೆಗಳು ಬಣ್ಣಬಣ್ಣದಿಂದ ಕೂಡಿರುತ್ತವೆ. ಇವರು ಸಾಮಾನ್ಯವಾಗಿ ದಾನವಾಗಿ ಬಂದ ಉಡುಪುಗಳನ್ನೇ ವೇಷಗಳಲ್ಲಿ ಬಳಸುತ್ತಾರೆ, ಬಣ್ಣದ ಸೀರೆಗಳನ್ನೇ ಗಂಡಸರು ವೇಷಗಳಲ್ಲಿ ಕಚ್ಚೆಹಾಕುವುದು. ಬಣ್ಣದ ಸೀರೆಗಳಿಗೆ, ಬಣ್ಣದ ಜುಬ್ಬಗಳ ಅಂಚುಗಳಿಗೆ ಕೈಕಸೂತಿ ಮಾಡಿ ಚಿತ್ತಾರಗೊಳಿಸಿರುತ್ತಾರೆ. ಗಿಲೀಟು ಮಾಡಿದ ಒಡವೆಗಳನ್ನು ಪಾತ್ರ ಹಾಕಿದಾಗ ಧರಿಸುತ್ತಾರೆ. ಕುರಿಯ ತುಪ್ಪಳ(ಕೂದಲ)ದಿಂದ ಮೀಸೆ ಮಾಡಿ ದಾರದಿಂದ ಕಟ್ಟಿಕೊಳ್ಳುತ್ತಿದ್ದರೆಂದು ಈಗಿನಂತೆ ಆಗ ರಬ್ಬರ್ ಸಲ್ಯೂಷನ್ ಅಥವಾ ಸ್ಟಿಕ್ಕರ್ ಯಾವುವೂ ಇರಲಿಲ್ಲವೆಂದು ತಿಳಿದುಬಂದಿದೆ.

ತೆಳುವಾದ ತಗಡನ್ನು ಚಿತ್ತಾಕರ್ಷಕವಾಗಿ ಕತ್ತರಿಸಿ ಅದಕ್ಕೆ ಬಂಗಾರ ವರ್ಣದ ಚಿನ್ನಾರಿ ಪುಡಿಯನ್ನು ಮಿಶ್ರಮಾಡಿದ ಸಿಲ್ವರ್ ಪೇಯಿಂಟನ್ನು ಬಳಿದು ಮೇಲ್ತುದಿಗೆ ಬಣ್ಣದಲ್ಲಿ ಅದ್ದಿ ಒಣಗಿಸಿದ ಕೋಳಿ ಪುಕ್ಕವನ್ನು ಸಿಕ್ಕಿಸಿದ ಈ ತಗಡನ್ನು ತಲೆಗೆ ಹೊಂದಿಕೊಳ್ಳುವಂತೆ ಸುತ್ತಿ ಕಟ್ಟಿರುತ್ತಾರೆ ಇದನ್ನು ಮುಕುಟ ಅಥವಾ ಕಿರೀಟ ಎಂದು ಕರೆಯುತ್ತಾರೆ.

ತೆಳುವಾದ ತಗಡನ್ನು ಆಕರ್ಷಕವಾದ ಕಮಾನುಗಳು ಇರುವಂತೆ ಕತ್ತರಿಸಿ ಅಂಚುಗಳಿಗೆ ಕೆಂಪು, ಬಿಳಿ, ನೀಲಿ ಬಣ್ಣದ ಥಳಕುಗಳನ್ನು ಹೊಲಿದು ಪ್ರತಿ ಅಂಚಿಗೂ ಸೇರಿಸಿ ಹಸಿರು, ಹಳದಿ, ಬಿಳಿ, ಬಣ್ಣದ  ಪ್ಲಾಸ್ಟಿಕ್‌ನ ಸಣ್ಣ ಮಣಿಗಳ ಸರಗಳನ್ನು ತೂಗಕಟ್ಟಿ ಮಾಡಿದ ಕುತ್ತಿಗೆಯ ಆಭರಣವನ್ನು ಮೆಡಕಂಠಿ ಅಥವಾ ನೆಕ್‌ಲೆಸ್ ಎನ್ನುತ್ತಾರೆ. ಮೆಡಕಂಠಿಯ ಹಿಂಬಾಗಕ್ಕೆ ದಪ್ಪ (Thick) ಬಟ್ಟೆ ಹೊಲಿದಿರುತ್ತಾರೆ. ಇದೇ ರೀತಿ ತೋಳಬಂದಿ, ಮಣಿಕಟ್ಟು ಹಾಗೂ ಸೊಂಟಪಟ್ಟಿಗಳನ್ನು ಮಾಡಿಕೊಂಡಿರುತ್ತಾರೆ.

**ಜನಪದ ಕ್ರೀಡೆಗಳು :** ಬುಡ್ಗಜಂಗಾಲರು ಬಿಡುವಿನ ವೇಳೆಯಲ್ಲಿ, ಹಬ್ಬಹರಿದಿನಗಳಲ್ಲಿ ಪುಲಿಗೆತ್ತಿ ಹುಣಸೆ ಬೀಜಗಳಿಂದ ಚಮಕು ಬಾರಾ ಎಂಬ ಒಳಾಂಗಣ ಕ್ರೀಡೆಗಳನ್ನು, ಕುಂಟೆಬಿಲ್ಲೆ ಮಲ್ಲಿ ವಚ್ಚಿಗಿಲ್ಲಿ ಪೋ, ಐದು ಕಲ್ಲಿನಾಟ ಅಚ್ಚಿಂ ಕಾಲು ಮುಂತಾದ ಆಟಗಳನ್ನು ಹೆಣ್ಣು ಮಕ್ಕಳ ಆಡುತ್ತಾರೆ. ಒಮ್ಮೊಮ್ಮೆ ಹೆಣ್ಣು-ಗಂಡು ಸೇರಿ ಮೇಲ್ಕಂಡ ಕ್ರೀಡೆಗಳನ್ನು ಆಡುವುದುಂಟು. ಹಾಗೆಯೇ ಹಲವು ಗಂಡಸರು ಹಬ್ಬ ಹರಿದಿನಗಳಲ್ಲಿ ಗೋಲಿ ಪಂದ್ಯಾಟಗಳನ್ನು ಸಹ ಆಡುತ್ತಾರೆ.

**ಬುಡ್ಗಜಂಗಮರ ಕ್ರೀಡೆಗಳು :** ಬುಡ್ಗಜಂಗಮರಿಗೆ ಮುಂಜಾನೆ ಎದ್ದನಂತರ ಊರು ಮತ್ತು ಅಡವಿ ಅಲೆಯುವುದೇ ಒಂದು ವೃತ್ತಿ ಆದರೆ ಮನೆಗೆ ಹಿಂದಿರುಗುವುದು ಮತ್ತು ಊಟಮಾಡುವುದು ಸಾಮಾನ್ಯವಾಗಿ ರಾತ್ರಿ ಆಗಿರುತ್ತದೆ. ಆದರೆ ಇವರಿಗೆ ಮನೋರಂಜನ ಮತ್ತು ಕ್ರೀಡೆಗಳಿಗೆ ಸಮಯ ಬಹಳ ಕಮ್ಮಿ.

ಆದರೆ ಇವರಿಗೆ ಮದುವೆ, ಮೈನೆರೆದಾಗ ಮನೆದೇವರ ಜಾತ್ರೆಗಳಲ್ಲಿ ಇವರಿಗೆ ಮನೋರಂಜನೆಗಳ ಸಮಯ ವಿರುತ್ತದೆ. ಆ ಕಾರ್ಯಕ್ರಮದಲ್ಲಿ ಇಡೀ ಸಮುದಾಯದ ಗಂಡು, ಹೆಣ್ಣು ಮಕ್ಕಳು ಭೇದವಿಲ್ಲದೇ ಅವರವರು ಗುಂಪಾಗಿ ವೃತ್ತಾಕಾರವಾಗಿ ಕುಳಿತು ಸಾಟ್ಪಾಲು, ಸಾಟಲು, ಪಂಚಾಯಿತಿಗಳು ಬೇಟೆಗಳ ಕುರಿತು ವೃತ್ತಿಗಳ ಕುರಿತು ಯಜಮಾನರು ಪುರುಷರು

ಕಾಲ ಕಳೆಯುತ್ತಾರೆ. ಹೆಂಗಸರು ಮತ್ತು ಮಕ್ಕಳು ಮೂಗು ಜಿಗುಟುವ ಆಟ, ಪಿನ್ನಿಯ ಆಟ, ಲಗೋರಿ ಆಟ, ಅಪಾಲೆ ತಿಪ್ಪಾಲೆ (ಬೊಡ್ಡಣ್ಣಮಲು) ಈ ಪಿಟ್ಟಲಾಟ, ಈ ರೀತಿಯಾಗಿ, ಕೋತಿ ಕೊಮ್ಮಲಾಟ ಕುಂಟೆಬಿಲ್ಲು ಆಟ ಮರಳಿನಲ್ಲಿ ಮನೆಮಾಡುವ ಆಟ, ಗುಂಡು ಎತ್ತುವ ಆಟ, ಸಂಗೀತದ ಕಥೆಗಳ ಸವಾಲು, ಇತ್ಯಾದಿ.

**ಕುಶಲ ಕಲೆ :** ಕಲೆ ಮತ್ತು ಸಂಸ್ಕೃತಿಯೇ ಇವರ ಜೀವಾಳವಾಗಿದ್ದಲ್ಲದೆ ಒಂದೂರಿನಿಂದ ಇನ್ನೊಂದು ಊರಿಗೆ ಅಲೆಯುವಾಗ ಇವರಿಗೆ ತರಬೇತಿ ದಾರರೆಂದರೆ ಆ ಊರಿನ ಪರಿಸರ, ನೀರು, ಬೆಟ್ಟ, ಗುಡ್ಡ, ಊರಿನ ವಿವಿಧ ಅಭಿರುಚಿಗಳುಳ್ಳ ಜನ ಅವರ ಭಾಷಾ ವೈವಿದ್ಯತೆ ಇವೆಲ್ಲವುಗಳು ಅವರಿಗೆ ಅಕ್ಷರಗಳು ಹಾಗಾಗಿ ಏನನ್ನು ಮಾಡಬೇಕೊ, ಏನನ್ನು ಪಡೆಯಬೇಕೊ ಎಂದಾಗ ಅದನ್ನು ತಮಗೆ ಸಿಗುವ ನಿಸರ್ಗದ ವಸ್ತುಗಳಿಂದ ಪಡೆದುಕೊಂಡು ನಿರ್ಮಿಸುವುದು ಒಂದು ಬಗೆಯಾದರೆ ಇನ್ನು ಕೆಲವು ಕುಶಲ ಕಲೆಗಳನ್ನು ನಿರ್ಮಿಸಲು ಊರಿನ ಜನಸಮುದಾಯದವರಿಂದ ದಾನವಾಗಿ ಪಡೆದು ಸರಳ ರೀತಿಯಲ್ಲಿ ರಚನೆಮಾಡುತ್ತಾರೆ. ಹಾಗಾಗಿ ಇವರನ್ನು ವಿಶ್ವಕರ್ಮ ಎಂದರೆ ತಪ್ಪಾಗಲಾರದು ಅಂತಹ ಬುದ್ಧಿಶಕ್ತಿ ಇವರಲ್ಲಿತ್ತು. ಕಾರಣವಿಷ್ಟೆ ಬೇಟೆಯು ಇವರ ಮುಖ್ಯ ಕಸಬು ಆಗಿದ್ದರೆ ಇದರೊಂದಿಗೆ ಕಲಾ ಪ್ರದರ್ಶನಗಳು ಅಷ್ಟೆ ಮುಖ್ಯವಾಗಿದ್ದವು. ಆದ್ದರಿಂದ ಇವರ ಕುಶಲ ಕಲೆಗಳನ್ನು ಮೂರು ವಿಧವಾಗಿ ವಿಂಗಡಿಸಬಹುದಾಗಿದೆ.

೧. ಬೇಟೆಗಾಗಿ ಉಪಯೋಗಿಸುವ ಕುಶಲ ಕಲೆ ೨. ಜೀವನಕ್ಕಾಗಿ ಉಪಯೋಗಿಸುವ ಕುಶಲ ಕಲೆ ೩. ಕಲಾ ಪ್ರದರ್ಶನಕ್ಕಾಗಿ ಉಪಯೋಗಿಸುವ ಕುಶಲಕಲೆ,

ಇಲ್ಲಿ ಗಮನಿಸಿಬೇಕಾದ ಮುಖ್ಯ ಅಂಶವೆಂದರೆ ಬುಡ್ಗಜಂಗಮರು ಯಾವುದೇ ಕಾರಣಕ್ಕೂ ಅವಶ್ಯಕತೆ ಇಲ್ಲದೆ ಈ ಕುಶಲ ಕಲೆಗಳನ್ನು ಮಾತ್ರ ರಚಿಸುವುದಿಲ್ಲ ಒಂದಿಲ್ಲ ಒಂದು ರೀತಿಯ ಕಾರಣಗಳು ಇದ್ದೆ ಇರುತ್ತವೆ. ಉದ್ದೇಶ ಕಾರಣವಿಲ್ಲದೆ ಕಲೆಗೆ ಇವರು ಹೆಚ್ಚಿನ ಮಾನ್ಯತೆ ನೀಡುವುದಿಲ್ಲ.

ಇವರು ನಿರ್ಮಿಸುವ ಕುಶಲ ಕಲೆಗಳು ಬೇಟೆಗಾಗಿ ಕೌಜಗ ಬಲೆಯ ಚಿತ್ತಾರ ಕೌಜಗ ಬುಟ್ಟಿಯ ಚಿತ್ತಾರ ಸಾಕಿದ ಕೌಜಗವನ್ನು ಪಳಗಿಸಿಲು ಸಿಳ್ಳೆ ಹಾಕಿ ಬಲೆಗೆ ಬೀಳಿಸಲು ಬೇಕಾಗುವ ಪೀಪಿ ಅಡವಿ ಪುಲ್ಲ ಕೋಡಿಯನ್ನು ಉಪಯೋಗಿಸುವ ಪೀಪಿ ಬುರ್ಲಿ ಬಲೆಯ ಚಿತ್ತಾರ, ಲ್ಯಾವಕ್ಕಿ ಬುಟ್ಟಿ ಚಿತ್ತಾರ, ಕ್ಯಾಟರ ಬಿಲ್ಲು ಬಂಡೆ ಬೇಟೆಯ ಕ್ಯಾಲ ಬಿಲ್ಲು ಉಂಡೀಲು ಹಕ್ಕಿ ಬೇಟೆಯ ಕ್ಯಾಲ.

ಬುಡ್ಗಜಂಗಮರ ಅತ್ಯಂತ ಪ್ರೀಯವಾದ ಬೇಟೆಯಂದರೆ ಕೌಜಗ ಬೇಟೆ ಹಾಗಾಗಿ ಪ್ರತಿಯೊಂದು ಬಿಡಾರದ ಪ್ರತಿಯೊಂದು ಕುಟುಂಬದಲ್ಲಿ ಇಲ್ಲವೆಂದರು ಒಂದೆರಡು ಕುಟುಂಬದಲ್ಲಿ ಕೌಜಗ ಬಲೆ ಸಾಕಿದ ಕೌಜಗ ಇದ್ದೆ ಇರುತ್ತದೆ. ಆದ್ದರಿಂದ ಇವರು ಬಲೆಯನ್ನು ಬಲು ಚಿತ್ತಾರವಾಗಿ ನಿರ್ಮಿಸುತ್ತಾರೆ. ಕಾಡಿಗೆ ಹೋಗಿ ಬಿದಿರುಗಳನ್ನು ತಂದು ಒಣಗಿಸಿ ನಂತರ ಅದು ಚಿತ್ತಾರಕ್ಕೆ ಸಿದ್ಧವಾಗಿರುವುದನ್ನು ಖಾತ್ರಿ ಮಾಡಿಕೊಂಡು ಬಲೆಯನ್ನು ನಿರ್ಮಿಸಲು

ಪ್ರಾರಂಭಿಸುತ್ತಾರೆ. ಮೊದಲು ಒಂದುವರೆ ಅಳತೆಯ ಮೇಲ್ಪಟ್ಟು ಎರಡುವರೆ ಅಳತೆಯ ಒಳಗಳತೆ ಇರುವ ಬಿದಿರಿನ ಗಣಿಕೆಗಳನ್ನು ಮಾಡಿಕೊಂಡು ಅದನ್ನು ಸೀಳಿ ಸುತ್ತಳತೆಯೊಂದು ಸೆಂ.ಮೀ. ಮಾಡಿ ಅಡ್ಡಕಂಬಗಳನ್ನು ೧೦೦ ಮೀಟರನ ವರೆಗೆ ಉದ್ದವಾಗುವಷ್ಟು ಬಲೆಗೆ ಈ ಕಂಬುಗಳನ್ನು ಸಿದ್ದಪಡಿಸುತ್ತಾರೆ. ಮತ್ತು ಆರು ಇಂಚು ಅಳತೆಯ ಗೂಟಗಳನ್ನು ನಿರ್ಮಿಸಿಕೊಂಡು ಆ ಎರಡು ವಿನ್ಯಾಸದ ಕಂಬಗಳ ಮೇಲೆ ಕಂಬದ ಎರಡು ಬದಿಗೆ ಹಾಗೂ ನಿಸರ್ಗದ ಎಲೆ ಬಳ್ಳಿ ಹಾಗೂ ಚಿತ್ತಾರದ ಗೆರೆಗಳನ್ನು ಕೊರೆದು ಸಿಂಗರಿಸುತ್ತಾರೆ. ಈ ರೀತಿಯಾಗಿ ನಿರ್ಮಿಸಿದ ಕಂಬಗಳನ್ನು ಜೋಡಿಸಿ ಬಲೆ ನಿರ್ಮಿಸಿ ಅದನ್ನು ಕಟ್ಟಿ ಮನೆಯಲ್ಲಿಟ್ಟಾಗ ವಸ್ತು ಸಂಗ್ರಹಾಲಯದ ಕುಶಲಕಲೆ ವಸ್ತುವನ್ನು ಮೀರಿಸುವಂತಿರುತ್ತದೆ. ಸಾಕಿದ ಕೌಜಗ ಬುಟ್ಟಿ ಇದನ್ನು ಕೂಡಾ ಬಿದುರುಗಳ ಕಂಬಗಳನ್ನು ಮಾಡಿ ನಾಲ್ಕು ಕಂಬಗಳನ್ನು ಮತ್ತು ಬಿದಿರಿನ ತಡಿಕೆಯನ್ನು ತಳಕ್ಕೆ ಉಪಯೋಗಿಸಿ ಕಂಬಗಳಿಗೆ ಚಿಕ್ಕ ತೂತುಗಳನ್ನು ಹಾಕಿ ಬಿದಿರಿನ ಸೀಳಿಕೆಯ ಚಿಕ್ಕ ತುಂಡುಗಳನ್ನು ಇಲ್ಲಿ ತಂತಿಯನ್ನು ಸುತ್ತಿ ಬುಟ್ಟಿಯನ್ನು ನಿರ್ಮಿಸಿ ಕೌಜಗವನ್ನು ಬಿಡಲು ಬಾಗಿಲು ನಿರ್ಮಿಸುತ್ತಾರೆ.

**ಪುಲ್ಲಕೋಡಿ ಸೀಟಿ :** ಪುಲ್ಲಕೋಡಿ ಸೀಟಿಯನ್ನು ಎರಡು ಇಂಚು ಉದ್ದ ಮತ್ತು ಅರ್ಧ ಸೆಂಟಿಮೀಟರ ಅಗಲವಿರುವ ಬಿದುರು ಇಲ್ಲವೆ ಗಲುಗಿನ ಎರು ತೆಳುವಾದ ಸೀಳಿಕೆಗಳನ್ನು ಅವುಗಳ ಮಧ್ಯೆ ಒಂದು ಚಿಕ್ಕ ಗಟ್ಟಿಮುಟ್ಟಿದ ಟಂಗುಸು ವಯರ್ ಇಲ್ಲವೆ ದಾರದಂತಿರುವ ಸೈಕಲ್ ಟೂಬಿನ ರಬ್ಬರನು ಚಿಕ್ಕ ಎಳೆಯನ್ನೂ ಹಾಕಿ ಜಗ್ಗಿ ಬಿಗಿದು ಕಟ್ಟಿ ಸೀಟಿಯಾಗಿ ಉಪಯೋಗಿಸುತ್ತಾರೆ.

**ಬಂಡ ಬೇಟೆಗಾಗಿ :** ಇದನ್ನು ತುಮ್ಮಸೆಟ್ಟು ಇಲ್ಲವೆ ಗಟ್ಟಿಮುಟ್ಟಾದ ಜಾಲಿಮರ ಎನ್ನುವ ಗಿಡದ ಕ್ಯಾಲನ್ನು ತಯಾರಿಸಿಕೊಂಡು ಅದಕ್ಕೆ ಒಂದು ಬಂಡೆಯ ಭಾರ ತಡೆಯುವ ಅಡ್ಡ ಕಟ್ಟಿಗೆಗೆ ದಾರಕಟ್ಟಿ ಬಂಡೆಯ ಮಧ್ಯಭಾಗದಲ್ಲಿ ನೀಸು (ನೀಚು) ಪುಲ್ಲ ಇಟ್ಟು ಅದಕ್ಕೆ ಕ್ಯಾಲಿಗೆ ಕಟ್ಟಿದ ದಾರದ ಕಡ್ಡಿಯಿಂದ ತಾಕಿಸಿ ಇಟ್ಟಾಗ ಬಂಡೆ ನಿಲ್ಲದೆ ಇದನ್ನು ನೋಡಿದರೆ ಒಂದು ಅತ್ಯುತ್ತಮ ಶಿಲ್ಪಕಲಾಕೃತಿಯಂತೆ ಕಾಣುತ್ತದೆ.

**ಹಕ್ಕಿ ಬೇಟೆ :** ಗಿಡದ ಮೇಲೆ ಇರುವ ಪಕ್ಷಿಗಳನ್ನು ಹೊಡೆಯಲು ಕ್ಯಾಲನ್ನು ನಿರ್ಮಿಸಿ ಅದಕ್ಕೆ ಕಲ್ಲು ಇಡಲು ದನದ ಚರ್ಮದ ತುಂಡನ್ನು ಉಪಯೋಗಿಸಿ ರಬ್ಬರಿನಿಂದ ಬಿಗಿದು ಕಟ್ಟುತ್ತಾರೆ. ನೋಡಲು ಬಲು ಅಂದವಾದ ಸಾಧನವಾಗಿರುತ್ತದೆ.

**ಕಲಾ ಪ್ರದರ್ಶನ ಸಾಮಗ್ರಿ**

ವೇಷಗಳಿಗೆ ಹನುಮಂತನ ಮುಖವಾಡ, ಚಿತ್ತಾರ, ಸೂರ್ಪನಖಿ ಮುಖವಾಡ, ಚಿತ್ತಾರ ದೇವಿನ ಮುಖವಾಡದ ಚಿತ್ತಾರ, ಕೊರಳಿನ ಸರಗಳ ವಿನ್ಯಾಸ, ಬಟ್ಟೆಗಳ (ಭೂಷಣ) ವಿನ್ಯಾಸ, ನಡಕಟ್ಟು, ಕೈಕಟ್ಟಿನ ಚಿತ್ತಾರ, ಮೀಸೆ ಗಡ್ಡ ಕೇಶವಿನ್ಯಾಸ, ಬಿಲ್ಲು ಬಾಣ ಬತ್ತಣಿಗೆಗಳ ವಿನ್ಯಾಸ, ತ್ರಿಶೂಲ ವಿನ್ಯಾಸ ಡಮರುಗ,ವಿನ್ಯಾಸ ಸರ್ಪವಿನ್ಯಾಸ, ಕಿರೀಟ

**ಮುಖವಾಡ :** ಬುಡ್ಗಜಂಗಮರು ತಮ್ಮ ವೇಷಗಳನ್ನು ಹಾಕುವಾಗ ಕೆಲವು

ಮುಖವಾಡಗಳು ಅತ್ಯವಶ್ಯಕವೆಂದಾಗ ಅವುಗಳನ್ನು ತಾವೇ ತಯಾರಿಸಿಕೊಳ್ಳುತ್ತಾರೆ. ಅವುಗಳಲ್ಲಿ ಆಂಜಿನೇಯ ವೇಷದ ಮುಖವಾಡವು ಒಂದು, ಇದನ್ನು ಬಟ್ಟೆಯಿಂದ ಅವರ ಮುಖಕ್ಕೆ ತಕ್ಕಹಾಗೆ ನಿರ್ಮಿಸಿಕೊಳ್ಳುತ್ತಾರೆ. ಅಲ್ಯೂಮಿನಿಯಂ ಇನ್ನು ಕೆಲವಾರು ಗುಂಡು ಬಟ್ಟಲನ್ನು ಉಪಯೋಗಿಸಿ ಅದನ್ನು ಚೆನ್ನಾಗಿ ಬಡಿದು ಆಕಾರ ಕೊಟ್ಟು ತಯಾರಿಸಿಕೊಳ್ಳುತ್ತಾರೆ. ಹೀಗೆ ತಯಾರಿಸಿದ ಮುಖವಾಡಕ್ಕೆ ತಾವೆ ವಾರ್ನಿಸ್ ಬಳಿದು ಅದಕ್ಕೆ ಚಂದವಾದ ಚುಕ್ಕೆಗಳನ್ನು ಮತ್ತು ಬಿಳಿ ಹಲ್ಲುಗಳನ್ನು ಬರೆದು ತಯಾರಿಸುತ್ತಾರೆ. ಹಾಗೆಯೇ ಶೂರ್ಪನಖಿ ಮತ್ತು ದೆವ್ವದ ಮುಖವಾಡವನ್ನು ಇದನ್ನು ಸೈಕಲಿನ ಮೆತ್ತನೆ ಸೀಟು, ರಬ್ಬರ್ ಚೆಂಡು ಸೂಜಿದಾರ ಉಪಯೋಗಿಸಿ ಬಟ್ಟೆಗಳಿಂದ ಮುಖವಾಡ ಹೊಲಿದು ತಯಾರಿಸುತ್ತಾರೆ. ಹಳೆಯ ಅಲ್ಯೂಮಿಯಂ ತಾಟಿನಿಂದಲೂ ಸೈಕಲು ಸೀಟನ್ನು ಕೂಡಾ ಆಕಾರ ತಕ್ಕಹಾಗೆ ಚೆನ್ನಾಗಿ ಬಡಿದು ಮುಖವಾಡ ತಯಾರಿಸುತ್ತಾರೆ. ಹೀಗೆ ತಯಾರಿಸಿದ ನಂತರ ಕೆಂಪು ಬಣ್ಣ ಬಳಿದು ಹಳದಿ ಬಿಳಿ ಚುಕ್ಕೆಗಳನ್ನು ಇಡುತ್ತಾರೆ. ಕೊರಳಿನ ಸರಗಳನ್ನು ಅಡವಿಯಲ್ಲಿ ಸಿಗುವ ವಿವಿಧ ಕಾಯಿಗಳನ್ನು ರುದ್ರಾಕ್ಷಿ ಒಂಭತ್ತು ಮುತ್ತಿನಾ ಸರಗಳನ್ನಾಗಿ ತಯಾರಿಸುತ್ತಾರೆ. ಕೈಕಟ್ಟು ಮೊದಲು ಕೈ ಅಳತೆ ನೋಡಿ ಬಟ್ಟೆಗಳನ್ನು ಜೋಡಿಸಿ ಒಂದು ಎಲೆ ಆಕಾರದಲ್ಲಿ ಕೈಕಟ್ಟನ್ನು ತಯಾರಿಸಿ ಅದರ ಮೇಲೆ ಬಣ್ಣ ಬಣ್ಣದ ಚಿಕ್ಕ ದೊಡ್ಡ ಸಾದಾಮಣಿಗಳನ್ನು ತಂದು ಸೂಜಿದಾರದಿಂದ ಪೋಣಿಸಿ ಅದರ ಮೇಲೆ ಚಿತ್ತಾರ ಬಿಡಿಸುತ್ತಾರೆ. ಬೇರೆ ಬೇರೆ ಆಕಾರದ ಕೈಕಟ್ಟು ಗಳನ್ನು ಚಿತ್ತಾರವಾಗಿ ವಿನ್ಯಾಸಗೊಳಿಸುತ್ತಾರೆ. ವಸ್ತ್ರ ವಿನ್ಯಾಸ (ಭೂಷಣ) ಆಂಜನೇಯನ ಚಡ್ಡಿಯನ್ನು ಅದಕ್ಕೆ ತಕ್ಕಹಾಗೆ ಬಟ್ಟೆಗಳನ್ನು ಜೋಡಿಸಿ ಮುಂದೆ ಉದ್ದನೆಯ ಒಂದು ಪಟ್ಟಿಯನ್ನು ಜೋತು ಬಿಟ್ಟಿರುತ್ತಾರೆ. ಮೈಮೇಲೆ ಕೂದಲಿಗಾಗಿ ಒಂದು ಪ್ಯಾಂಟ್ ಹಾಗೂ ಒಂದು ಶರ್ಟಿಗೆ ಒಂದು ಸೀರೆಯನ್ನು ಹರಿದು ಚುಂಗಗಳನ್ನು ಮಾಡಿ ಆರ ಪ್ಯಾಂಟ ಶರ್ಟಿಗೆ ಎಲ್ಲ ಕಡೆಗಳಿಗೂ ಕಸೂತಿ ಮಾಡುತ್ತಾರೆ. ಕೆಲವು ಎಳೆಗಳು ತೆಗೆದು ಹಾಕಿದಾಗ ಕೂದಲಿನಂತೆ ಕಾಣಿಸುತ್ತವೆ. ಈ ರೀತಿಯಾಗಿ ಈ ವಸ್ತ್ರವನ್ನು ವಿನ್ಯಾಸಗೊಳಿಸುತ್ತಾರೆ. ಇದೆ ರೀತಿಯಾಗಿ ಮಹಾಭಾರತ ಮತ್ತು ರಾಮಾಯಣದ ದೃಶ್ಯಗಳಿಗೆ ಬೇಕಾಗುವ ಉಡುಪುಗಳ ವಸ್ತ್ರವಿನ್ಯಾಸವನ್ನು ಕಸೂತಿ ಮಾಡಿ ತಯಾರಿಸಿಕೊಳ್ಳುತ್ತಾರೆ.

**ಮೀಸೆ ವಿನ್ಯಾಸ :** ವೇಷಕ್ಕೆ ತಕ್ಕ ಮೀಸೆಗಳನ್ನು ಕುರಿಯ ಮತ್ತು ಮೇಕೆ, ಹಾಗೂ ಕರಡಿಯ ಕೂದಲುಗಳಿಂದ ಮೀಸೆ, ಗಡ್ಡ ಹಾಗೂ ರೆಪ್ಪೆಗಳನ್ನು ತಯಾರಿಸಿಕೊಳ್ಳುತ್ತಾರೆ. ತೇಗಾ ಮರದಿಂದ ಟೊಳ್ಳುಮಾಡಿ ಡಮರುಗವನ್ನು ಅದಕ್ಕೆ ಉಡದ ಚರ್ಮದಿಂದ ಮುಚ್ಚಳಕೆ ಹಾಕಿ ದಾರದಿಂದ ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ ಬಿಗದು ಕಟ್ಟಿರುತ್ತಾರೆ.

**ಸರ್ಪವಿನ್ಯಾಸ :** ಇದಕ್ಕೆ ಮಣಿದಾಡುವ ಸ್ವಲ್ಪ ದಪ್ಪನೆಯ ತಂತಿಯನ್ನು ತೆಗೆದುಕೊಂಡು ಹತ್ತಿ ಮತ್ತು ಬಟ್ಟೆಯಿಂದ ಹಾವಿನಾಕಾರದಲ್ಲಿ ಹೆಡೆಯ ಭಾಗಕ್ಕೆ ತೆಳುವಾದ ಬಟ್ಟೆ ಹಾಗೂ ಸ್ವಲ್ಪ ಹತ್ತಿ ಹಾಕಿ ಹೊಲಿಗೆ ಹಾಕುತ್ತಾರೆ. ನಂತರದಲ್ಲಿ ಅದಕ್ಕೆ ಗುಲಗಂಜಿ ಕಾಳಿನಿಂದ ಕಣ್ಣು ಮಾಡಿ ನಾಲಿಗೆಯನ್ನು ಕೆಂಪು ದಾರದಿಂದ ಮಾಡುತ್ತಾರೆ. ಕಿರೀಟವನ್ನು ತೆಳುವಾದ ತಗಡು ಇಲ್ಲವೆ ರಟ್ಟಿನಿಂದ ಚಿತ್ತಾರಗಳನ್ನು ಮಾಡಿ ಅದಕ್ಕೆ ಮಣಿಗಳನ್ನು ಜೋಡಿಸಿ ತಯಾರಿಸುತ್ತಾರೆ.

ಶಾಸ್ತ್ರ ಮತ್ತು ಸಿದ್ಧರ ವೇಷಕ್ಕಾಗಿ : ತಾಳೆ ಗೆರೆಗಳ ಮೇಲೆ ಚಿತ್ತಾರ, ತಂಬೂರಿ ವಿನ್ಯಾಸ, ವಸ್ತ್ರ ವಿನ್ಯಾಸ, ಸರಗಳ ವಿನ್ಯಾಸ, ಬುರ್ರಕಥಾ ವಿನ್ಯಾಸಕ್ಕಾಗಿ, ಬುಡ್ಗ ವಿನ್ಯಾಸ, ತಂಬೂರ ವಿನ್ಯಾಸ ಚಿಟಿಗೆಲು ವಿನ್ಯಾಸ,

ಈ ಕುಶಲ ಕಲೆಯನ್ನು ಕೊಂಡಮಾಮಾ, ಭೈರಾಗಿ ಸನ್ಯಾಸಿ, ಸಾರಪಂತು ವೇಷಕ್ಕಾಗಿ ಶಾಸ್ತ್ರ ಹೇಳುವುದಕ್ಕಾಗಿ ಬಳಸುತ್ತಾರೆ. ಅಡವಿಯಲ್ಲಿ ತೆರಳಿ ತಾಳೆಮರದಿಂದ ತಾಳೆಗೆರೆಗಳನ್ನು ಸಂಗ್ರಹಿಸಿ ಹಸಿ ಇದ್ದಾಗಲೆ ಗಟ್ಟಿಯಾದ ಚಿಕ್ಕ ಕಡ್ಡಿಯಿಂದ ರೇಖಾ ಚಿತ್ರಗಳನ್ನು ಶಾಸ್ತ್ರೋಕ್ತವಾಗಿ ಮತ್ತು ರಾಶಿಗಳ ಪ್ರಕಾರವಾಗಿ ಬರೆದು ಒಣಗಿಸಿ ಅಚ್ಚುಕಟ್ಟಾಗಿ ಕಟ್ಟಿ ಇಟ್ಟಿರುತ್ತಾರೆ. ಇನ್ನೊಂದು ಬಗೆ ಈ ತಾಳೆಗೆರೆಗಳ ಮೇಲೆ ಭವಿಷ್ಯಕ್ಕೆ ಸಂಬಂಧ ಪಟ್ಟ ಹಾಗೆ ಅವುಗಳ ಮೇಲೆ ದೃಷ್ಟಾಂತದ ಕತೆಗಳನ್ನಾಧರಿಸಿದ ವಿವಿಧ ಚಿತ್ರಗಳನ್ನು ತಾವೆ ಬಿಡಿಸಿರುತ್ತಾರೆ.

ಏಕನಾದ, ತಂಬೂರಿ ವಿನ್ಯಾಸ : ಇದೊಂದು ಕೊಂಡಮಾಮ ಶಾಸ್ತ್ರದ ವೇಷಕ್ಕಾಗಿ ಬಳಸುವ ಏಕನಾದ ಮೀಟುವ ಸಂಗೀತ ವಾದ್ಯ ಇದನ್ನು ಈಸ್‌ಕುಂಬಳಕಾಯಿ ಇಲ್ಲ ಬೂದುಕುಂಬಳ ಕಾಯಿಯನ್ನು ತಂದು ಒಣಗಿಸಿ ಅದರ ಒಳಗಡೆ ಇರುವ ಬೀಜ ಮತ್ತು ಕಲ್ಮಶ ವಸ್ತುಗಳನ್ನು ಸ್ವಚ್ಛಮಾಡಿ ಅದರ ಮಧ್ಯಭಾಗದಲ್ಲಿ ಬಿದಿರಿನ ಕಟ್ಟಿಗೆ ಹಾಯ್ದು ಹೋಗುವಂತೆ ತೂತನ್ನು ತೆಗೆದು ಅದರೊಳಗೆ ಬಿದಿರಿನ ಕೋಲನ್ನು ಹಾಕಿ ಬಿಗಿದು ಕಟ್ಟಿ ಅದಕ್ಕೆ ಒಂದು ತಂತಿಯನ್ನು ಬಿಗಿದು ಒಳ್ಳೆಯ ನಾದ ಬರುವಂತೆ ಮಾಡಿರುವ ಒಂದು ಕಲಾತ್ಮಕ ವಸ್ತು.

ವಸ್ತ್ರ ವಿನ್ಯಾಸ : ಸಿದ್ಧರ ವೇಷಕ್ಕೆ ಹಾಕುವ ಕಫೀನು ಗಲೀಪುನ್ನು ವಿವಿಧ ಬಣ್ಣ ಬಣ್ಣದ ಬಟ್ಟೆಗಳನ್ನು ಜೋಡಿಸಿ ಭುಜದಿಂದ ಕಾಲಿನವರೆಗೆ ಬರುವಹಾಗೆ ನಿಲುವಂಗಿಯಹಾಗೆ ಕಫೀನು ಅನ್ನು ಸೂಜಿ ದಾರಗಳಿಂದ ಕಸೂತಿ ಹಾಕಿ ಸಿದ್ಧಗೊಳಿಸುತ್ತಾರೆ. ಅದರ ತೋಳ್ಯಾ ಭಾಗಕ್ಕೆ ತ್ರಿಕೋನಾಕಾರದ ಬಟ್ಟೆ ತುಂಡುಗಳನ್ನು ಜೋತು ಬಿಟ್ಟಿರುತ್ತಾರೆ. ಕೈಯಿಂದ ಚಿತ್ತಾಕರ್ಷಣೆ ಗೊಳ್ಳುವಂತ ಜೋಳಿಗೆಯನ್ನು ತಮ್ಮದೆ ಆದ ಶೈಲಿಯಲ್ಲಿ ದಾರದಿಂದ ವಿನ್ಯಾಸಗೊಳಿಸಿ ಕಾಯಿಗಳನ್ನು ಶೃಂಗಾರ ಮತ್ತು ಸಂಬಂಧಿಸಿದ ವೇಷಕ್ಕಾಗಿ ಬಳಸುತ್ತಾರೆ.

ಬುರ್ರಕಥಾ ವಿನ್ಯಾಸ : ೧. ಬುಡ್ಗ ವಿನ್ಯಾಸ ೨. ತಂಬೂರ ವಿನ್ಯಾಸ ೩. ಚಿಟಿಗೆ ವಿನ್ಯಾಸ. ೪. ಡಿಮ್ಮಿ (ಡೆಕ್ಕೆ) ವಿನ್ಯಾಸ ಬುಡ್ಗ ವಿನ್ಯಾಸ ಇದನ್ನು ಕಾಡು ಮರಗಳಾದ ತೇಗು, ಹರೇಬೇವಿನ ಮರದಿಂದ ತಯಾರಿಸುತ್ತಾರೆ. ತಂಬೂರವನ್ನು ಸಹ ತೇಗು ಹೀರೇಬೇವಿನ ಮರ ಮತ್ತು ಬೂದು ಕುಂಬಳಕಾಯಿ ಇಂದ ಕೂಡಾ ನಿರ್ಮಿಸಿ ವಿನ್ಯಾಸ ಗೊಳಿಸಿ, ಅದಕ್ಕೆ ಮೂರು ತಂತಿಗಳನ್ನು ತಳಭಾಗದಿಂದ ಮೇಲ್ಭಾಗದ ತುದಿಯವರೆಗೆ ಬಿಗಿದು ಕಟ್ಟಿರುತ್ತಾರೆ. ಮರದ ತುಂಡು ತಗಡುಗಳನ್ನು ಬಳಸಿ ಚಿಟಿಗೆಯನ್ನು ವಿನ್ಯಾಸಗೊಳಿಸುತ್ತಾರೆ. ಪೂರ್ವಕಾಲದಲ್ಲಿ ಡಿಮ್ಮಿಗೆ ಬಹಳ ಪ್ರಾಮುಖ್ಯತೆ ಇತ್ತು ಇದನ್ನು ಕೆದಿಗೆ ಮರದ ತುಂಡಿನಿಂದ ಡಿಮ್ಮಿ ಮಾಡುತ್ತಿದ್ದರು. ಕಟ್ಟಿಗೆಯಿಂದ ಒಂದು ಟೊಳ್ಳಕಾರದ ವರ್ತುಳವನ್ನು ರಚಿಸಿಕೊಂಡು ಉಡದ ಚರ್ಮದಿಂದ ಮುಚ್ಚಳ ಹಾಕಿ ಅದಕ್ಕೆ ಮೂರು-ಮೂರು ಗೆಜ್ಜೆಗಳನ್ನು ಕಟ್ಟಿ ಸಂಗ್ರಹಿಸಿ ವಿನ್ಯಾಸಗೊಳಿಸುತ್ತಾರೆ.

ಜೀವನಕ್ಕಾಗಿ ಕುಶಲ ಕಲೆ : ೧. ಹೆಣಿಕೆ ವಿನ್ಯಾಸ ೨. ಕಸೂತಿ ವಿನ್ಯಾಸ ೩. ಗುಡಾರ ವಿನ್ಯಾಸ ೪. ಕಾರಕೊಟ್ಲು ವಿನ್ಯಾಸ ೫. ಹಚ್ಚೆ ವಿನ್ಯಾಸ ೬. ದೇವತಾರಾಧನೆಯ ವಿನ್ಯಾಸ

ಮನೆಯ ಜೀವನಕ್ಕಾಗಿ ತಮಗಾಗಿ ತಮ್ಮ ವಸ್ತುಗಳನ್ನು ತಾವೆ ತಯಾರಿಸಿಕೊಳ್ಳುತ್ತಿದ್ರು. ಈಚಲು ಮರವನ್ನು ಹುಡುಕಿಕೊಂಡು ಹೋಗಿ ಚಾಪೆ ಹೆಣೆಯಲು ಅನುಕೂಲವಾಗುವ ಮತ್ತೆನೆಯ ತೆಳುವಾದ ಉದ್ದನೆಯ ಗರಿಗಳನ್ನು ಕೊಯ್ದುಕೊಂಡು ಬರುತ್ತಾರೆ. ಅವುಗಳನ್ನು ನೆರಳಿನಲ್ಲಿ ಒಣಗಿಸಿ ಒಂದೊಂದಾಗಿ ಬಿಡಿಸಿಕೊಂಡು ಚಾಪೆ ಹೆಣೆಯುಲು ಪ್ರಾರಂಭಿಸುತ್ತಾರೆ ಹಾವಿನ ಪೊರೆಯ ಕಣ್ಣೆ ಕಣ್ಣಿನಂತಿರುವ ಈ ಹೆಣಿಕೆ ಪಟ್ಟಿಯ ಸಾಪಪೊಟ್ಟ ಎಂದು ಕರೆಯುತ್ತಾರೆ. ಇಂತಹ ತುಂಬಾ ಉದ್ದನೆಯ ಪೊಟ್ಟೆಯನ್ನು ಹೆಣೆದು ಅದನ್ನು ಕಟ್ಟಿ ಮಾಡಿ ಇಚಲು ಮರದ ಎಲೆಗಳಿಂದ ಹೆಣೆದು ಜೋಡಿಸಿ ಚಾಪೆ ಹೆಣೆಯುತ್ತಾರೆ.

ಕಸೂತಿ : ಈ ಸಮುದಾಯದಲ್ಲಿ ಕಸೂತಿಗೆ ತುಂಬಾ ಸಿದ್ಧಾಹಸ್ತರು ಜೋಳಿಗೆ, ಕೌದಿ, ಗುಡಾರ, ಇವುಗಳ ಕೈ ಹೊಲಿಗೆಯನ್ನು ಬಹಳ ಸೊಗಸಾಗಿ ಹಾಕುತ್ತಾರೆ. ಕೌದಿಗಳ ಮೇಲೆ ತಾವು ನಿಕಟ ಸಂಬಂಧವಿರುವ ನಿಸರ್ಗದ ಎಲೆ, ಬಳ್ಳಿ, ಹೂ, ಮತ್ತು ಪ್ರಾಣಿ ಪಕ್ಷಿಗಳ ಹೆಜ್ಜೆಗಳನ್ನು ಕಸೂತಿ ಮಾಡುವ ಸಂದರ್ಭದಲ್ಲಿ ಹೆಣಿಕೆಯ ಚಿತ್ತಾರ ಹಾಕುತ್ತಾರೆ. ಹಾಗೆ ಹಾಕಿದ ವಿನ್ಯಾಸಗಳಿಗೆ "ಪುಲಿಕಾಳು" (ಹುಲಿಹೆಜ್ಜೆ) "ಪಿಟ್ಟಾಕಾಳು" (ಗುಬ್ಬಿಹೆಜ್ಜೆ) ಎಂದು ಹೇಳುತ್ತಾರೆ. ಮಧ್ಯದಲ್ಲಿ ಧರ್ಮರಾಜನ ಕಟ್ಟಿ ಹಾಕಿತ್ತಾರೆ.

ಹಚ್ಚೆ : ಬುಡ್ಗಜಂಗಮ್ ಸಮುದಾಯದ ಹೆಣ್ಣು ಹಾಗೂ ಗಂಡು ಮಕ್ಕಳು ಹಚ್ಚೆಹಾಕಿಸುವುದು ರೂಢಿ, ಇದರಲ್ಲಿ ಹಣೆಗೆ, ಕೆನ್ನೆಗೆ, ಗದ್ದಕ್ಕೆ ಕೈಗಳಿಗೆ ಕಾಲುಗಳಿಗೆ ಹಚ್ಚೆಹಾಕಿಸುವುದು ರೂಢಿ. ಇದರಲ್ಲಿ ಹಣೆ ಮೇಲೆ ಚುಕ್ಕಿ, ಕೈಮೇಲೆ ಸೀತಮ್ಮ ಮುಸುಗು, ರಾಮಲಕ್ಷ್ಮಿ ತೊಟ್ಟಿಲು ಮೀನಿನ ಮುಳ್ಳ, ರಥ, ಜಲ್ಲಡಿ, ಕೃಷ್ಣ, ಗೌರಿ, ಕಣ್ಣು, ಅಕ್ಕತಂಗಿಯರು, ಗೊಲ್ಲಬಾಮೆಯರು.

ಅವರಿಗೆ ಪ್ರಿಯರಾದ ಪ್ರಿಯಕರ, ಪ್ರಿಯತಮ ಹೆಸರುಗಳು, ಆತ್ಮೀಯರಹೆಸರು ಗರುಡ ಪಕ್ಷಿ, ನಾಗರಾವು, ಆಂಜನೆಯಸ್ವಾಮಿ ವೀರಭದ್ರ, ಬೇತಾಳ, ಮುಂತಾದವು ಇವುಗಳ ಕೆಲವು ಅಲಂಕಾರಿಕ, ಸವಿನೆನೆಪುಗಾಗಿ ಹಾಕಿಸಿಕೊಂಡರೆ ಕೆಲವು ಮಾಂಸ ಖಂಡಗಳ ನರಗಳ ನೋವಿಗೆ ಹಚ್ಚೆ ಹಾಕಿಸಿಕೊಳ್ಳುವರು ಕೆಲವು ಹೆಣ್ಣುಮಕ್ಕಳ ಹಣೆಗೆ ಶಾಸ್ವತ ಮುತ್ತೈದಿಯ ಸ್ಥಾನಕ್ಕೆ ಮಚ್ಚೆಹಾಕಿಸುವರು. ಪಾಶ್ಚಾತ್ಯರು ಹಚ್ಚೆಯನ್ನು ಕೈದಿಗಳಿಗೆ ಹಾಕಿ ಅವರು ತಪ್ಪಿಸಿಕೊಂಡರೆ ಗುರ್ತಿಸಲು ಬಳಸುತಿದ್ದರು ಎಂದು ಹೇಳುತ್ತಿದ್ದರು ಹಾಗೆಯೇ ಬೈಬಲನಲ್ಲಿ ಹಚ್ಚೆಹಾಕಿಸುವುದು ನಿಷಿದ್ಧ.

**ಹಚ್ಚೆ ಹಾಡು**

ಹಚ್ಚೆಹಾಕಿಸು ಬಾ ಬಾವ - ನಾಲ್ಕಾಣೆ ಉದ್ರಿ ಹೇಳುಬಾ ಬಾವ
ಗುಡ್ಡದ ಮೇಲೆ ಗುಡಿಯಂತೆ - ಗುಡಿಯಲ್ಲಿ ದೇವರಂತೆ
ಶಾಲೊರಿಯಂಕನ್ನನ - ಹಣೆಯಲ್ಲಿ ಸಾಧು ಬೊಟ್ಟಿದೆ

ನನ್ನ ಹಣೆ ಬೊಳು ಬೊಳಾಗಿದೆ - ಹಚ್ಚೆ ಹಾಕಿಸು ಬಾವ
ನಾಲ್ಕಾಣೆ ಉದ್ರಿಕೇಳು ಬಾವ - ಹಂತಿತಾಹಚ್ಚೆ ಅಲ್ಲ
ಚುಕ್ಕಿ ಚಂದ್ರನಂತಿರಬೇಕು - ಬಣ್ಣ ಬಣ್ಣದಾಗಿರಬೇಕು
ಆಕಾಶಗಂಗೆ ಇರಬೇಕು - ರಾಮನ ಪಾದದಂತೆ ಲಕ್ಷ್ಮಣನ ನೆನಪಿನಂತೆ
ಹಚ್ಚೆ ಹಾಕಿಸು ಬಾವ.

**ಗಂಡು ಮತ್ತು ಹೆಣ್ಣು ಮಕ್ಕಳಲ್ಲಿ ಹಚ್ಚೆ :** ಅಲೆಮಾರಿ ಬುಡ್ಗ ಸಮುದಾಯದಲ್ಲಿ ಗಂಡು ಮಕ್ಕಳಿಗೂ ಸಹ ಹಣೆಯ ಮೇಲೆ ಹಚ್ಚೆ ಹಾಕಿಸುತ್ತಾರೆ. ಹಾಗೂ ಅದು ಹೆಣ್ಣು ಮಕ್ಕಳು ಹಣೆಯ ಮೇಲೆ ಸಾಂಪ್ರದಾಯಿಕವಾಗಿ ಹಚ್ಚೆಹಾಕಿಸುವುದು ಒಂದು ಕಟ್ಟುಪಾಡು. ಅದು ಹೆಣ್ಣು ಮಕ್ಕಳು ಕುಂಕುಮ ಇಡುವ ಜಾಗದಲ್ಲೆ ಮತ್ತು ಗಲ್ಲದ ಮೇಲೆ ಗದ್ದದ ಮೇಲೆ ಹಾಕಿಸುವುದು ಸಾಮಾನ್ಯ. ಗಂಡು ಮತ್ತು ಹೆಣ್ಣು ಮಕ್ಕಳಿಗೆ ಕೆಲವು ನರ ಸಂಬಂಧ ಕಾಯಿಲೆಗಳು ಇದ್ದರೂ ಹಚ್ಚೆ ಹಾಕಿಸಿಕೊಳ್ಳುವರು ಕೆಲವು ಕಾಯಿಲೆಗಳು ಇದರಿಂದ ವಾಸಿಯಾಗಿದ್ದುಂಟು.

**ದೇವತಾರಧ್ಯ ವಿನ್ಯಾಸ :** ಬನ್ನಿಗಿಡ ಊರ ಹೊರಗೆ ಜಮ್ಮಿಶೆಟ್ಟು ಅಥವಾ ಯಾಪಾಕು ಬೇವಿನ ಗಿಡದ ಹತ್ತಿರ ಹೋಗಿ ಮಣ್ಣಿನಿಂದ ಒಂದು ವೃತ್ತಾಕಾರ ಮತ್ತು ಅದರ ಮೇಲೆ ಮಣ್ಣಿನಿಂದ ಮೂರ್ತಿಮಾಡಿ ಅದರ ಮೇಲೆ ಒಂದು ತಪ್ಪಲು ಹಾಕಿ. ಅದರ ಮುಂದೆ ಐದು ಕಲ್ಲುಗಳನ್ನು ಇಟ್ಟು ಅದಕ್ಕೆ ಕುಂಕುಮ ಬಂಡಾರ ಹಚ್ಚಿ ಊದು ಹಾಕಿ ಶೃಂಗರಿಸಿ ವಿನ್ಯಾಸಗೊಳಿಸುತ್ತಾರೆ ಧಾರ್ಮಿಕ ಹಿನ್ನೆಲೆಯಲ್ಲಿ ಶೃಂಗರಿಸಿದ ಈ ವಿನ್ಯಾಸ ಒಂದು ಪ್ರಸ್ತಾಪನೆಯ ಕಲೆ ಒಂದು ಎನ್ನುತ ಉದಾಹರಣೆ ಎನ್ನುಬಹುದು.

ಜಮ್ಮಲಮ್ಮ ಸುಂಕಲಮ್ಮ, ದೇಶಮೀದ ತಲ್ಲಿ ಈ ದೇವರುಗಳನ್ನು ಮಾಡುವಾಗ ಮನೆಯ ಮುಂದೆ ಚೌಕಾಕಾರದ ಒಂದು ಮಂಟಪ ಹಾಕಿ ಅದಕ್ಕೆ ಬೇವು, ಮಾವು, ಬನ್ನಿ ತಪ್ಪಲುಗಳಿಂದ ಶೃಂಗರಿಸಿ ಅದರ ಕೆಳಗೆ ಒಂದು ತಂಬಿಗೆ ಅದರಲ್ಲಿ ಎಲೆ ಬೇವಿನ ತಪ್ಪಲನ್ನು ಇಟ್ಟು ಸಗಣಿಯಿಂದ ಸಾರಿಸಿದ ಸ್ಥಳದಲ್ಲಿ ಇಡುತ್ತಾರೆ ಇದರ ಮುಂಬಾಗದಲ್ಲಿ ಆಮೆ ಮತ್ತು ಗೊಂಬೆಗಳನ್ನು ಮಾಡಿ ಅದಕ್ಕೆ ಅರಿಸಿನ ಕುಂಕುಮ ವಿನ್ಯಾಸಗೊಳಿಸಿ ದೈವ ಸ್ವರೂಪವನ್ನ ಅಲ್ಲಿ ಕಾಣುತ್ತಾರೆ.

ಪೋಷಮ್ಮ (ಪೋಲೇರಮ್ಮ) ಕೊಗಮ್ಮ ದೇವರುಗಳನ್ನು ಮಾಡುವಾಗ ಈ ನಮ್ಮ ಸಮುದಾಯದವರು ಮೈ ತುಂಬ ವಿವಿಧ ಬಣ್ಣಗಳನ್ನು ಹಚ್ಚಿಕೊಂಡು ಮುಖದ ದವಡೆಯಲ್ಲಿ ಸೂಜಿಯಿಂದ ಇರಿದುಕೊಂಡು ಸೊಂಟಕ್ಕೆ ಗೆಜ್ಜೆ ಹಾಗೂ ಬೇವಿನ ತಪ್ಪಲು ಕಟ್ಟಿಕೊಂಡು ಚಾಟಿಯಿಂದ ಮೈಗೆ ಹೊಡೆದುಕೊಳ್ಳುತ್ತಾ ಆಚರಣೆ ಮಾಡುತ್ತಾರೆ. ಇದು ನಿಜವಾಗಲು ಇತರೆ ಎಲ್ಲಾ ಸಮುದಾಯಗಳಿಗಿಂತ ಇಭಿನ್ನ ಹಾಗೂ ಕಷ್ಟಕರವಾದ ವಿನ್ಯಾಸ ಎಂದು ಹೇಳಬಹುದು.

**ಗಂಗಿ ಗೌರಿ ಗೊಂಬೆಗಳ ವಿನ್ಯಾಸ :** ಕಾಡಿನಲ್ಲಿ ಸಿಗುವ ಜಾಲಿಮರ (ತುಮ್ಮಸೆಟ್ಟು) ಬೇವಿನ ಮರದ ಕೊಂಬೆಗಳನ್ನು ತಂದು ಇವರಲ್ಲಿರುವ ಬೇಟೆಯಾಡುವ ಆಯುಧಗಳಿಂದ ಗಂಗೆ ರೂಪದಲ್ಲಿ ಒಂದು ಗೊಂಬೆಯನ್ನು ಹಾಗೂ ಗೌರಿ ರೂಪದಲ್ಲಿ ಒಂದು ಗೊಂಬೆಯನ್ನು ತಯಾರಿಸಿ ಒಂದು ಆಯತಕಾರದ ಹಲಗೆಯ ಮೇಲೆ ಬಲಗಡೆಗೆ ಗಂಗೆಯನ್ನು ಹಾಗೂ

ಎಡಗಡೆಗೆ ಗೌರಿಯನ್ನು ಮರದ ಮುಟ್ಟು (ಅಂಟು) ನಿಂದ ಅಥವಾ ದಾರದಿಂದ ಆ ಹಲಗೆಯ ಮೇಲೆ ಕೂಡಿಸುತ್ತಿದ್ದರು. ಹಾಗೂ ಕಾಡಿನಲ್ಲಿ ಸಿಗುವ ವಿವಿಧ ಬಣ್ಣಗಳ ಕಲ್ಲುಗಳನ್ನು ಪುಡಿಮಾಡಿ ಅದರಲ್ಲಿ ವಿವಿಧ ಗಿಡಮೂಲಿಕೆಗಳ ಎಲೆಗಳ ರಸವನ್ನು ಹಿಂಡಿ ಇದರಿಂದ ತಯಾರಾದ ಬಣ್ಣವನ್ನು ಹಚ್ಚಿ ವಿನ್ಯಾಸಗೊಳ್ಳಿಸುತ್ತದ್ದರು.

**ರಂಗೋಲಿ :** ಈ ಕಲೆಯು ಇವರಲ್ಲಿ ಬಹಳ ವಿರಳವಾಗಿ ಕಂಡರು ಅದು ವಿಶಿಷ್ಟವಾಗಿದೆ ಮದುವೆಯ ಸಂದರ್ಭದಲ್ಲಿ ಮದುವೆಯ ದಿನ, ತಾಳಿದಿನ ವಧುವರರು ಕುಳಿತುಕೊಳ್ಳುವ ಜಾಗದಲ್ಲಿ ಅಕ್ಕಿಯಿಂದ ಚತುರ್ಮುಖಿ ಆಕಾರದ ವಿನ್ಯಾಸಗಳನ್ನು ಹಾಕಿ ಅದರ ಮಧ್ಯದಲ್ಲಿ 'ಓಂ' ಎಂದು ಬರೆದಿರುತ್ತಾರೆ. ಅದರ ಅಕ್ಕಪಕ್ಕದಲ್ಲಿ ಸೂರ್ಯ ಚಂದ್ರನನ್ನು ಹಾಕಿರುತ್ತಾರೆ.

**ತೊಗಲು ಗೊಂಬೆಯ ಕರಕುಶಲ ಕಲೆ :** ಇದು ನಾಡಿನ ಶ್ರೇಷ್ಠ ಕುಶಲಕಲೆಗಳಲ್ಲಿ ಈ ಕಲೆಯು ಒಂದು ೧೩ನೇ ಶತಮಾನದಲ್ಲಿಯೆ ಪ್ರಚಲಿತಗೊಳಿಸಿ ಅದನ್ನು ಯಶಸ್ವಿಗೊಳಿಸಿದ್ದಾರೆ. ಈ ತೊಗಲು ಗೊಂಬೆಗಳನ್ನು ಆಡೀನ ತೊಗಲಿನಿಂದ, ಸ್ತ್ರೀ ಗೊಂಬೆಯನ್ನು ಕುರಿಯ ತೊಗಲಿನಿಂದ ಸನ್ನಿವೇಷಕ್ಕೆ ತಕ್ಕ ಗೊಂಬೆಗಳನ್ನು ತಯಾರಿಸಿ ಕೊಳ್ಳುತ್ತಾರೆ.

# ೧೦

# ಸಮಸ್ಯೆ ಸಂಘಟನೆ ಪರಿಹಾರ

ಕಾಡಾಡಿಗಳಾದ ಬುಡ್ಗಜಂಗಮರು ಶೈವ ಧರ್ಮದ ಪ್ರಚಾರಕರಾಗಿ ನಾಡಿನ ಅನೇಕ ಪ್ರದೇಶಗಳಿಗೆ ಸಂಚರಿಸಿ ಕಲಾ ಪ್ರದರ್ಶನಗಳನ್ನು ಮಾಡುವುದರಿಂದ ತುಂಬಾ ಗೌರವ ಮತ್ತು ಮಾನ್ಯತೆ ಇತ್ತು. ಮನೆಗಳ ಮುಂದೆ ದೇವರ ವೇಷಗಳು ಬಂದಾಗ ಕಾಲಿಗೆ ನೀರು ಹಾಕಿ ಪೂಜೆ ಮಾಡಿದ್ದು ಇದೆ. ದವಸ ಧಾನ್ಯ, ಬೆಳ್ಳಿ ಕಡಗ, ಬಂಗಾರದ ಉಂಗುರ ಮದುವೆ ಪಿತಾಂಬರ, ದನ, ಕುರಿ ಭೂಮಿ ನೀಡುತ್ತಿದ್ದರು. ಆದರೆ ಅವೆಲ್ಲಾ ಮುಂದಿನ ಊರುಗಳಿಗೆ ಹೋದಾಗ ಮಾರಿ ಅಂದಿನ ದಿನದ ಸೇಂದಿ, ಊಟ ಮಾಡಿ ಭೂಮಿಗಳನ್ನು ಬಿಟ್ಟು ಹೋಗಿದ್ದಾರೆ. ಈಗಲೂ ಧಾನ ಮಾಡಿದ ಭೂಮಿಗಳು ಕೆಲವರಲ್ಲಿ ವ್ಯವಸಾಯ ಮಾಡುತ್ತಿದ್ದಾರೆ. ಅವರಿಗೆ ಊರಿನಲ್ಲಿ ಸಿಗುವ ಗೌರವಕ್ಕೆ ಮಾರುಹೋಗಿ ಮಕ್ಕಳನ್ನು ಇದೇ ವೃತ್ತಿಗೆ ಇಳಿಸಿದರು, ಇದರ ಫಲವಾಗಿ ಬೀದಿಗಳಲ್ಲಿ ಭಿಕ್ಷೆ ಬೇಡುವ ಕಲಾವಿದರು ಕಾಣಬಹುದು. ಬಟ್ಟೆಗಳಿಗೆ ಏನೂ ಕೊರತೆ ಇರಲಿಲ್ಲ. ದಿಢೀರನೆ ಸಿನಿಮಾಗಳು ಪ್ರವೇಶದಿಂದ ಕಂಗಾಲಾಯಿತು ಈ ಸಮುದಾಯ ಇದಕ್ಕೆ ವ್ಯತಿರಿಕ್ತವಾಗಿ ಏನನ್ನು ಪ್ರತಿಕ್ರಿಯಸಲಿಲ್ಲ. ಕಾರಣ ಸಂಘಟನೆ, ಶಿಕ್ಷಣ, ಇಲ್ಲದಿರುವುದು ಒಂದಾದರೆ ಒಂದೆಡೆ ನೆಲೆಯಾಗಿ ಇಲ್ಲದಿರುವುದು ಇನ್ನೊಂದು ಮುಖ್ಯಕಾರಣ ಇದರಿಂದ ದಿಕ್ಕು ಕಾಣದ ಈ ಸಮುದಾಯ ಒಂದು ಕಲೆಯಿಂದ ಇನ್ನೊಂದು ಕಲೆಗೆ ಬದಲಾಯಿಸುತ್ತ ಸಾಗಿದರು. ಇದೇ ಸಂದರ್ಭದಲ್ಲಿ ಬುರ್ರಕಥೆಗಳನ್ನು ಬೀದಿ ಮನೆಯಂಗಳದಲ್ಲಿ ಮಾಡುತ್ತಿದ್ದದನ್ನು ಬಿಟ್ಟು ಬೀದಿ ಭಾಗೋತ ವೇಷಗಳನ್ನಾಕಿ ವೇದಿಕೆಗಳ ಮೇಲೆ ಕಥೆಗಳನ್ನು ಹೇಳಲು ಪ್ರಾರಂಭಿಸಿದ್ದು ಇವು ಹೀಗೆ ಪರಿವರ್ತನೆಯತ್ತ ಸಾಗಿ ಅನೇಕ ವೇಷ ಕಲಾ ಪ್ರಕಾರಗಳನ್ನು ಮತ್ತು ಶಾಸ್ತ್ರ ಕಥೆಗಳನ್ನು ಕಲಿತು ಆರಂಭಿಸಿದರು. ತನ್ನದಲ್ಲದ ಸಾಹಿತ್ಯ ಮತ್ತು ಪ್ರಚಾರವನ್ನು ಅನ್ಯರಿಗಾಗಿ ಹಾಡುತ್ತ ತನ್ನ ಮೂಲ ಮತ್ತು ತನ್ನನ್ನು ತಾನೇ ಯಾರೆಂಬುವದನ್ನು ಮರೆಮಾಚುತ್ತ ಸಮಾಜದ ಅನ್ಯಸಮುದಾಯದವರೊಂದಿಗಿನ ಒಡನಾಟಕ್ಕಾಗಿ ಎಲ್ಲಾ ಕಲೆಗಳನ್ನು ಮಾಡಿದ್ದಾನೆ. ಆದರೆ ತನಗಾಗಿ ತನ್ನ ಸಂಸ್ಕೃತಿಯ ಒಂದು ಕಥಾ ಪ್ರಸಂಗದ ಕಲೆಯನ್ನು ಪ್ರದರ್ಶಿಸಲಿಲ್ಲ.

ಆರಂಭದಲ್ಲಿ ಕಾವಡಿ ದಬ್ಬಹಿಡಿದು ಒಂದೆಡೆ ಸಾಮಾನು ಇನ್ನೊಂದೆಡ ತನ್ನ ಮಕ್ಕಳನ್ನು ಕುಳ್ಳರಿಸಿಕೊಂಡು ಮತ್ತೊಂದೂರಿಗೆ ಹೋಗಿ ಮರಗಿಡಗಳ ಕೆಳಗೆ ಇಲ್ಲವೆ ಗುಡಿಚಾವಡಿಗಳ

ಹಳೆ ಮಂಟಪಗಳ ಕೆಳಗೆ ವಾಸ ನಿಂತರಲ್ಲಿ ತ್ರಿಕೋನಾಕಾರದ ಟೆಂಟು ಹಾಗೆಯೇ, ಬಂದವು. ಮಾಧ್ಯಮಗಳು ಪ್ರವೇಶಿಸಿದಾಗ ಇವರು ಎದೆಗುಂದದೆ ಬೇರೆ ಬೇರೆ ವೃತ್ತಿಗಳಲ್ಲಿ ತೊಡಗಿರುವುದು ಚಲನಶೀಲ ವೃತ್ತಿಗೆ ಇದೊಂದು ಸಾಕ್ಷಿ. ಉದಾಹರಣೆಗೆ. ಪ್ಲಾಸ್ಟಿಕ ವ್ಯಾಪಾರ, ಬಟ್ಟೆ ವ್ಯಾಪಾರ, ಕ್ಯಾಲೆಂಡರ ಪ್ರಿಂಟಿಂಗ ಫೋಟಗಳ ವ್ಯಾಪಾರ, ಕಲೆಯನ್ನೆ ನಂಬಿದ ಕುಟುಂಬ ಎಲ್ಲ ಸದಸ್ಯರು ಇತ್ತೀಚಿನ ಮಾಧ್ಯಮದ ಪ್ರಭಾವದಂತೆ ಮುಖ್ಯವಾಹಿನಿಯಲ್ಲಿ ಮುನ್ನುಗ್ಗಲು ಪ್ರಯತ್ನಸುತ್ತಿದ್ದಾರೆ. ಬೇಟೆಯೇ ಮೂಲಾಧಾರವಾಗಿರುವ ಇವರಿಗೆ ಕಾಡು ನಾಶ ಕೂಡಾ ಬೇಟೆ ನಿಷೇಧ ಕಾಯ್ದೆ ಕೂಡಾ ಇವರ ಮೇಲೆ ಗುರುತರವಾದ ಪರಿಣಾಮ ಬೀರಿತು. ಬಹುತೇಕ ಕುಟುಂಬಗಳು ಕಾಡಿನ ಪ್ರಾಣಿಪಕ್ಷಿಗಳನ್ನು ನಂಬಿದ ಇವರು ಬೇಟೆಯಿಲ್ಲದೆ ಕಂಗಾಲಾಗಿ ನಾಡಿನತ್ತ ಆಹಾರಕ್ಕಾಗಿ ಮುಖಮಾಡಿದರು.

ಆದರೆ ನಾಡಿನಲ್ಲಿ ಕಲೆಗಳನ್ನು ಪ್ರದರ್ಶಿಸಿ ಜೀವನ ಸಾಗಿಸಬೇಕೆಂದರೆ ದೂರದರ್ಶನ ಹಾಗೂ ಮಾಧ್ಯಮಗಳ ಪ್ರಭಾವದಿಂದ ಅನ್ಯರಿಂದ ಈ ಕಲೆಗಳಿಗೆ ಮಾನ್ಯತೆ ಸಿಗದೆ ತಿರಸ್ಕಾರಿಸಲ್ಪಟ್ಟಿವು. ಇದರಿಂದ ಆರ್ಥಿಕವಾಗಿ ಕುಟುಂಬ ನಿರ್ವಹಣೆ ತುಂಬ ಕಷ್ಟಕರವಾಗಿದ್ದರಿಂದ ಬೀದಿಗಿಳಿದು ಭಿಕ್ಷಾಟನೆ ಮಾಡತೊಡಿಗಿದರು. ಭಿಕ್ಷಾಟನೆಯು ಕೂಡಾ ಕಾನೂನಿನ ಪ್ರಕಾರ ಅಪರಾಧವಾಗಿದೆ ಇದರಿಂದ ಮತ್ತಷ್ಟು ಜೀವನ ಕಷ್ಟಕರವಾಗಿದೆ. ಅತ್ತ ಆಧುನಿಕ ತಂತ್ರಗಾರಿಕೆ ಪರಿಚೆಯವಿಲ್ಲದೆ ಇತ್ತ ಕಲಾ ಭಿಕ್ಷಾಟನೆಗೆ ಮಾನ್ಯತೆ ಇಲ್ಲದೆ ಕಾಡು-ನಾಡು ಎರಡನ್ನು ಕಳೆದುಕೊಂಡ ಇವರು ವಿನಾಶದ ಅಂಚಿನಲ್ಲಿದ್ದು ಇವರ ಸ್ಥಿತಿ ಗಂಭೀರವಾಗಿದ್ದರಿಂದ ನೀರಿನಲ್ಲಿದ್ದ ಮೀನನ್ನು ದಡಕ್ಕೆ ಎಸದಂತಾಗಿದೆ. ಈಗ ಇದನ್ನರಿತ ಈ ಸಮುದಾಯ ಬದುಕಬೇಕು. ಜೀವಿಸಬೇಕು ಎಂದು ಸರ್ಕಾರದತ್ತ ಮುಖಮಾಡಿದ್ದಾರೆ. ಸರ್ಕಾರ ಯೋಜನೆಗಾಗಿ ಕೈಚಾಚಿದರೆ ಸರ್ಕಾರದ ಪ್ರಶ್ನೆಗಳಿಗೆ ಇವರ ಬಾಯಿ ಮುಖವಾಗುತ್ತದೆ. ಕಾರಣ ಜನಪದರ ಬಾಯಿಯಲ್ಲಿ ಸಿಕ್ಕು ಮೂಲಪದ ಕಳೆದುಕೊಂಡು ಹಾಕುವ ವೇಷಗಳು ಪಚಲಿತವಾಗಿದ್ದು, ಒಂದಾದರೆ ಜಾತಿ ಪತ್ರ ಹಾಗೂ ರಾವಾನಿ ಪತ್ರ ನಾಗರಿಕ ಹಕ್ಕಿನ ಪತ್ರ ಇವುಗಳಿಲ್ಲದೆ ತೊಳಲಾಡುತ್ತಿದ್ದಾರೆ.

ಏನಾದರೂ ಮಾಡಿ ಸರ್ಕಾರದಿಂದ ಜಾತಿ ಪ್ರಮಾಣ ಪತ್ರಗಳನ್ನು ಕೇಳಲು ಹೋದಾಗ ಕೇವಲ ಅಧಿಕಾರ ಕಾನೂನು ಚೌಕಟ್ಟು ಹಿಡಿದು ಮೆಲ್ನೋಟದ ಮಾಹಿತಿಯೇ ಮುಖ್ಯ ಮಾಹಿತಿ ಯೆಂದು ತಿಳಿದು ಪತ್ರಗಳನ್ನು ಕೊಡಲು ತಿರಸ್ಕರಿಸುತ್ತಿರುವುದರಿಂದ ಕಗ್ಗಂಟಾಗಿವೆ. ಇನ್ನು ಸಂಘಟಿತರಾಗಿ ಬದುಕಿನ ಹಕ್ಕಿಗಾಗಿ ಹೋರಾಟ, ಮಾಡಬೇಕೆಂದರೆ ನೂರಾರು ವರ್ಷಗಳಿಂದ ಹಲವು ವೇಷಗಳಾದ, ಹಗಲುವೇಷ ಕುರುಮಾಮ, ಬುರ್ರಕಥೆ, ಬಾಲಸಂತು, ಸುಡಾಗಾಡುಸಿದ್ಧ, ಭೈರಾಗಿ, ಎಂದು ಕರೆಯಿಸಿಕೊಂಡಿದ್ದರಿಂದ "ವೀಳು ಮನವಾಳು ಕಾದು" "ವಾಡು ಮನವಾಳು ಕಾದು" ಎಂದು ಅನಕ್ಷರತೆಯ ಅಜ್ಞಾನದ ಗೊಂದಲಗಳಿಂದ ಒಂದೇ ಹೆಸರಿನಲ್ಲಿ ಸೇರದೇ ಇರುವುದು ಸಮುದಾಯದ ಅವನತಿಗೆ ಕಾರಣವಾಗಿದೆ.

ಅನೇಕ ಸಂಘರ್ಷಗಳಿಗೆ ಸಿಕ್ಕ ಈ ಸಮುದಾಯ ತಮಗೆ ಸಿಗುವ ಜಾತಿ ಪತ್ರಗಳನ್ನು ಹೇಗೆ ಅಧಿಕಾರಿಗಳಿಗೆ ಹೇಗೆ ಬೇಕು ಹಾಗೆ ಮಾಹಿತಿ ನೀಡಿ ಜಾತಿ ಪತ್ರಪಡೆದುಕೊಂಡಿದ್ದಾರೆ.

## ಸಂಘಟನೆ ಮತ್ತು ಶಿಕ್ಷಣ

ಸಂಘಟನೆಗೆ ಉದ್ದೇಶಗಳು ಹಲವು, ಗುರಿ ಮಾತ್ರ ಒಂದು. ನೊಂದು, ಬೆಂದು, ಮಾನಸಿಕ ಹಿಂಸೆಯಿಂದ ಮುಕ್ತಿಪಡೆಯಲು ಆಶಿಸುವುದು ಮಾನವನ ಸಹಜಗುಣ, ಅದಕ್ಕಾಗಿ ಮಾಡುವ ಪ್ರಯತ್ನ ಸಂಘಟನೆ. ಭಾರತ ಸ್ವತಂತ್ರವಾಗಲು ಸಹ ಸಂಘಟನೆಗಳು ಮುಖ್ಯವಾದವು. ಪಶು, ಪ್ರಾಣಿ, ಪಕ್ಷಿಗಳಿಗೆ ಅಪಾಯ ಎದುರಾದಾಗ ಅವು ಸಹ ಒಗ್ಗಟ್ಟಾಗುವುದು ಸಹಜ, ಹೀಗಾಗಿ ವಿವಿಧ ಮೀಸಲಾತಿ ಸೌಲಭ್ಯಗಳಿಂದ ವಂಚಿತರಾಗಿದ್ದ ಇವರು ಅನ್ಯಾಯವನ್ನು ಪ್ರತಿಭಟಿಸಲು ಸಂಘವನ್ನು ಹುಟ್ಟು ಹಾಕುವುದು ಡಾ ಬಾಬಾ ಸಾಹೇಬ್ ಅಂಬೇಡ್ಕರ್‌ರವರು ಧ್ವನಿ ಇಲ್ಲದ ದಲಿತರಿಗೆ ನೀಡಿರುವ ಧ್ಯೇಯವಾಕ್ಯ ಶಿಕ್ಷಣ ಸಂಘಟನೆ ಮತ್ತು ಹೋರಾಟ ಶೇ. ೧೧ ಶಿಕ್ಷಣ ಪಡೆಯದ ಸಮುದಾಯ ಎಂದೂ ಸಂಘಟನೆಗೊಳ್ಳದಿದ್ದ ಅತ್ಯಂತ ವಿಷಾಧವಾದದ್ದು ಸ್ವಚ್ಛಂದವಾಗಿ ಬದುಕಿದ್ದ ಅಲೆಮಾರಿ ಮುಖ್ಯ ವಾಹಿನಿಯೊಡನೆ ಯಾವುದೇ ಸಂಬಂಧವಿಟ್ಟು ಕೊಳ್ಳಬೇಕಾದರೆ ಪ್ರಮುಖವಾದುದು ಶಿಕ್ಷಣ. ಹಾಗಾಗಿ ಶಿಕ್ಷಣವೇ ಪಡೆಯದ ಸಮುದಾಯ ಎಂದೂ ಸಂಘಟನೆಗೊಳ್ಳಲಿಲ್ಲ. ಕರ್ನಾಟಕದಲ್ಲಿ ಅತಂತ್ರ ಸ್ಥಿತಿಯಲ್ಲಿದ್ದ ಈ ಸಮುದಾಯಕ್ಕೆ ಹಾಗೂ ತನಗಾದ ನೋವನ್ನು ನೊಂದವರನ್ನು ಮನಗಂಡು ಕುಲಬಾಂಧವರನ್ನು ಸೇರಿಸಿ ಸಂಘಟನೆಯನ್ನು ಕಟ್ಟಿ ೧೯೮೭ರಲ್ಲಿ ಪ್ರಮುಖವಾಹಿನಿಗೆ ತರುವಲ್ಲಿ ಪ್ರಮುಖ ವ್ಯಕ್ತಿ ಎಂದರೆ ವಿ ಶ್ರೀನಿವಾಸ ರುದ್ರಾಕ್ಷಿ ಬಳ್ಳಾರಿ ಇವರ ನಿಸ್ವಾರ್ಥ ಸೇವೆ ಹೋರಾಟಕ್ಕೆ ಅನೇಕ ವಿದ್ವಾಂಸರು ಸಮಾಜದ ಮುಖಂಡರು ಕೈಜೋಡಿಸಿದರ ಫಲವಾಗಿ ಸಮುದಾಯದ ಅಭಿವೃದ್ಧಿಯ ಕಾರ್ಯಕ್ರಮಗಳ ದಶಮಾನೋತ್ಸವ ಅದ್ದೂರಿಯಿಂದ ಆಚರಿಸಿ ಅದರ ಮುಖೇನ ಅತೀಮುಖ್ಯ ಎರಡು ಪುಸ್ತಕಗಲಾದ ಬುಡ್ಗಜಂಗಮ್ ದರ್ಶಿನಿ, ಬುಡ್ಗಜಂಮರು ಎಂಬ ಪುಸ್ತಕಗಳನ್ನು ಪ್ರಕಟಿಸಿದ್ದ ಕೀರ್ತಿ ಇವರಿಗೆ ಸಲ್ಲುತ್ತಾರೆ ಅಲ್ಲದೆ ಆ ಸಮಾವೇಶದಿಂದ ಎಲ್ಲ ಅಲೆಮಾರಿಗಳಿಗೆ ವೇದಿಕೆಯಾಗಿ ಈ ಸಂಘಟನೆಗೆ ಹೊಸ ಯುವಕರನ್ನು ಸಂಘಟನೆ ಪರಿಚಯಿಸಿದ್ದರಿಂದ ಶ್ರೀ ಶೇಷಪ್ಪ ಬಿಡದಿ ಅವರು ೨೦೦೫ ರಿಂದ ಪ್ರಸ್ತುತ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಅಲ್ಲದೆ ಕನ್ನಡ ಪುಸ್ತಕ ಪ್ರಾಧಿಕಾರದಿಂದ ಅಲೆಮಾರಿ ಸಮುದಾಯಗಳ ಪುಸ್ತಕಗಳನ್ನು ಹೊರಬರಲು ಪ್ರಮುಖ ವೇದಿಕೆಯಾಯಿತು.

ಶ್ರೀಮತಿ ಬಿ ಟಿ ಲಲಿತಾ ನಾಯಕ್ ಅವರ ಗೌರವಾಧ್ಯಕ್ಷತೆಯಲ್ಲಿ ಮತ್ತು ವೈ ಕೃಷ್ಣಪ್ಪ ಅವರ ಅಧ್ಯಕ್ಷತೆಯಲ್ಲಿ ೧೯೬೩ರಲ್ಲಿ ಕರ್ನಾಟಕ ಬುಡ್ಗ ಜಂಗಮ ಜಂಗಾಲರ ಸಂಘವನ್ನು ಸ್ಥಾಪಿಸಲಾಯಿತು. ಮಾಜಿ ವಿಧಾನ ಪರಿಷತ್ ಸದಸ್ಯರಾದ ಡಾ ಎಲ್ ಹನುಮಂತಯ್ಯ ಇವರ ಗೌರವಾಧ್ಯಕ್ಷತೆಯಲ್ಲಿ ೨೦೦೪ರಲ್ಲಿ ಕರ್ನಾಟಕ ರಾಜ್ಯ ಬುಡ್ಗಜಂಗಮ್ ಕ್ಷೇಮಾಭಿವೃದ್ಧಿ ಸಂಘವನ್ನು ಸ್ಥಾಪಿಸಲಾಗಿದೆ. ಇದರ ಅಡಿಯಲ್ಲಿ ರಾಜ್ಯದ ಹಲವು ಜಿಲ್ಲೆಗಳಲ್ಲಿ ತಾಲ್ಲೂಕು ಮತ್ತು ಜಿಲ್ಲೆ ಸಂಘಟನೆಗಳನ್ನು ಆರಂಭಿಸಿ ಬುಡ್ಗಜಂಗಮರ ಹಕ್ಕಿಗಾಗಿ ಹೋರಾಟ ನಡೆದಿದೆ. ೨೦೦೭ರಲ್ಲಿ ಆಂಧ್ರ, ಕರ್ನಾಟಕ ಮತ್ತು ಮಹಾರಾಷ್ಟ್ರ ಈ ಮೂರು ರಾಜ್ಯಗಳು ಒಗ್ಗೂಡಿಸಿ All India Budga Jangam Fedaration ವನ್ನು ಸ್ಥಾಪಿಸಲಾಗಿದೆ. ಇದರ ಕೇಂದ್ರ ಕಛೇರಿ

ಹೈದರಾಬಾದಿನಲ್ಲಿದೆ. ಆದರೆ ಶಿಕ್ಷಣ ಮತ್ತು ಸಂಘಟನೆಯ ಕೊರತೆಯನ್ನು ಎದುರಿಸುವ ಸಮುದಾಯ ಉಳಿದ ಸೋದರ ದಲಿತ ಸಮುದಾಯಗಳಂತೆ ಧ್ವನಿ ಎತ್ತಲಾಗುತ್ತಿಲ್ಲ. ಇದು ಎಲ್ಲಾ ಅಲೆಮಾರಿ ಸಮುದಾಯಗಳ ಸಹಜ ನೋವೇ ಆಗಿದೆ. IAS, KAS, MCA, and MCC. Corporation Chirmans ಇವೆಲ್ಲಾ ಕನಸಿನ ಮಾತುಗಳು ಹಲವಡೆ ಮತಾಂತರಕ್ಕೆ ಪ್ರಚೋದನೆಗಳು ನಡೆದಿದ್ದು, ಬುಡ್ಗ ಜಂಗಮರ ಕಟ್ಟುನಿಟ್ಟಿನ ಕುಲಪಂಚಾಯ್ತಿ, ಕಟ್ಟೆ ಮನೆ ನ್ಯಾಯ ಶಿಥಿಲವಾಗುತ್ತಿದೆ.

ಕೋಲಾರ ತಾಲೂಕು ಬುಡ್ಗ ಜಂಗಮ್ ಕುಲಬಾಂಧವರು, ಕೋಲಾರ ಟೌನ್ ಚನ್ನಯ್ಯ ರಂಗಮಂದಿರದಲ್ಲಿ ೨೫.೯.೧೯೯೪ರಂದು ಸಮಾವೇಶ ನಡೆಸಲಾಗಿದೆ. ಬಳ್ಳಾರಿ ಜಿಲ್ಲಾ ಬುಡ್ಗಜಂಗಮ್‌ರ ಸಮಾವೇಶವನ್ನು ಪ್ರಧಾನ ಕಾರ್ಯದರ್ಶಿಗಳಾಗಿದ್ದ ವಿ ಶ್ರೀನಿವಾಸ್‌ರವರ ಸಮ್ಮುಖದಲ್ಲಿ ೨೧.೪.೧೯೯೪ರಂದು ಮಾಡಲಾಯಿತು.

ಹೀಗೆ ಅನೇಕ ಸಮಾವೇಶಗಳನ್ನು ನಡೆಸುತ್ತಾ ಬುಡ್ಗಜಂಗಮರಿಗೆ ದೊರೆಯಬೇಕಾದ ಸವಲತ್ತುಗಳ ಬಗ್ಗೆ ಹೋರಾಟ ನಡೆಸಲಾಗಿದೆ. ೨೮.೪.೧೯೯೬ರಂದು ಬುಡ್ಗ ಜಂಗಮ್ ಸಂಘ ನಾಗರೀಕ ಹಕ್ಕು ಜಾರಿ ಪೋಲಿಸ್ ವಿಭಾಗ ಇವರಿಗೆ ಜಾತಿ ಪತ್ರ ಕೊಡಲು ಇವರ ಆಚಾರ ವಿಚಾರಗಳ ವಸ್ತು ಸ್ಥಿತಿಗಳ ಬಗ್ಗೆ ಪರೀಲಿಸಲು ಕೋಲಾರ ಜಿಲ್ಲೆಯ ಚಿಕ್ಕಜಾಲ, ಸೂಲಿಬೆಲೆ, ಗುರುವನಹಳ್ಳಿ, ಮಡಿವಾಳ ಮುಂತಾದ ಕಡೆಗಳಿಗೆ ನಾಗರೀಕ ಹಕ್ಕು ಪೋಲೀಸ್ ಅಧಿಕಾರಿಗಳನ್ನು ಸಂದರ್ಶನಕ್ಕಾಗಿ ಕರೆದುಕೊಂಡು ಹೋಗಿ ನಾಗರೀಕ ಸೌಲಭ್ಯಗಳಿಂದ ವಂಚಿತರಾಗಿರುವ ವಿಷಯ ಅವರಿಗೆ ಮನದಟ್ಟು ಆಗಿ, ಇವರೇ ನಿಜವಾದ ಬುಡ್ಗಜಂಗಮರೆಂದು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುವದರಿಂದ ಸಮಾಜ ಕಲ್ಯಾಣ ಇಲಾಖೆ, ಕರ್ನಾಟಕ ಸರ್ಕಾರ ಇವರು ೩೦.೧೦.೧೯೯೬ರಂದು ಬುಡ್ಗಜಂಗರಿಗೆ ತೊಂದರೆಯಾಗದಂತೆ ಪರಿಶಿಷ್ಟ ಜಾತಿ ಪ್ರಮಾಣ ಪತ್ರ ಕೊಡಲು ಆದೇಶಿಸಿರುತ್ತಾರೆ.

೧೯೯೮ರಲ್ಲಿ ಕೋಲಾರ ಜಿಲ್ಲೆಯಲ್ಲಿ ಬುಡ್ಗಜಂಗಮ್ ಸಮಾವೇಶವನ್ನು ನಡೆಸಲಾಯಿತು. ಈ ಸಮಾವೇಶದಲ್ಲಿ ಕೋಲಾರ ಲೋಕಸಭಾ ಸದಸ್ಯರಾದ ಕೆ ಹೆಚ್ ಮುನಿಯಪ್ಪನವರು ಅಧ್ಯಕ್ಷತೆ ವಹಿಸಿದ್ದರು. ಮಹಿಳಾ ಹಾಗೂ ಮಕ್ಕಳ ಕಲ್ಯಾಣ ಮತ್ತು ಕನ್ನಡ ಸಂಸ್ಕೃತಿ ಇಲಾಖೆಯ ಸಚಿವರಾದ ಶ್ರೀಮತಿ ಬಿ ಟಿ ಲಲಿತಾನಾಯ್ಕಅವರು ಉದ್ಘಾಟನೆ ಮಾಡಿದರು.

ದಾವಣಗೇರಿಯ ನಾಗರೀಕ ಹಕ್ಕು ನಿರ್ದೇಶನಾಲಯದ ಸರ್ಕಲ್ ಇನ್‌ಪೆಕ್ಟರಾದ ಶ್ರೀ ಜಿ ವಿಶ್ವನಾಥರವರು ಮನೆಗಳಿಗೆ, ಶಾಲೆಗಳಿಗೆ ಬಂದು ಎಲ್ಲಾ ವಿಷಯಗಳನ್ನು ಆಸಕ್ತಿಯಿಂದ ಸಂಗ್ರಹಿಸಿ ಜಾತಿ ಪರಿಶೀಲನೆ ಮಾಡಿ ಎಲ್ಲಾ ತಾಲೂಕಿನ ತಹಶೀಲ್ದಾರರಿಗೆ ಬುಡ್ಗಜಂಗಮ್ ಜಾತಿ ಪತ್ರ ಮತ್ತು ಮೂಲಭೂತ ಸೌಲಭ್ಯಗಳನ್ನು ನೀಡಬೇಕೆಂದು ತಿಳಿಸಿದರು.

ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗ ಮಾಹಿತಿ ಸಂಗ್ರಹಿಸಿ ಎಲ್ಲಾ ಜನರ ಸರ್ವೇ ಮಾಡಿ ಸಂವಿಧಾನಬದ್ಧ ಮೀಸಲಾತಿಯಿಂದ ಈ ಜನರಿಗೆ ಅನ್ಯಾಯವಾಗಿದೆ ಎಂದು ಸರಕಾರಕ್ಕೆ ಪತ್ರ ಬರೆದು ಮಂತ್ರಿಗಳಿಗೂ ಮತ್ತು ಅಧಿಕಾರಿಗಳಿಗೂ ಮನವರಿಕೆ

ಮಾಡಿಕೊಟ್ಟಿದ್ದಾರೆ. ಹಿಂದುಳಿದ ಮತ್ತು ಪರಿಶಿಷ್ಟ ಜಾತಿವರ್ಗಗಳನ್ನು ಸೇರಿಸಿ "ಗುಡಾರ ಗುಡಿಸಿ ನಿವಾಸಿಗಳ ಕಲ್ಯಾಣ ಸಂಘ"ವನ್ನು ಸ್ಥಾಪಿಸಲು ಪ್ರೇರೆಪಿಸಿದ್ದಾರೆ. ಮೂಲಭೂತ ಸೌಲಭ್ಯಗಳಿಗಾಗಿ ಸರಕಾರಕ್ಕೆ ಮನವಿ ಪತ್ರವನ್ನು ಸಲ್ಲಿಸಿದ್ದಾರೆ. ಅದರ ಫಲ ಸ್ವರೂಪ ಬಳ್ಳಾರಿ ಹೊರವಲಯದಲ್ಲಿ ಗುಡಾರ ನಗರ ಜನ್ಮತಾಳಿದೆ. ಬುಡ್ಗಜಂಗಮ್, ಸಿಂಧೋಳ್ಳು, ಶಿಳ್ಳೇಕ್ಯಾತ, ಗೋಸಂಗಿ, ಕೊರಮ, ಚೆನ್ನದಾಸರ್, ಹಕ್ಕಿಪಿಕ್ಕಿ, ಗಂಟೆ ಹೇಳವ ಅಲೆಮಾರಿ ಸಮುದಾಯಗಳು ಅವರಿಂದ ಇಲ್ಲಿ ನೆಲೆಗೊಂಡಿವೆ.

### ಸಂಘದ ಹೆಗ್ಗುರುತುಗಳು

* ಕನ್ನಡ ಸಂಸ್ಕೃತಿ ಇಲಾಖೆಯಿಂದ ವಿವಿಧ ಜಿಲ್ಲೆಗಳಲ್ಲಿ ವೇಷಗಾರ, ಬುರ್ರ ಕಥೆಕಲೆಗಳನ್ನು ಪ್ರದರ್ಶಿಸಿ ಅವರಿಗೆ ಸಹಾಯಧನ ನೀಡಲು ಸಂಘದ ವತಿಯಿಂದ ಪ್ರಯತ್ನಪಟ್ಟಿದ್ದಾರೆ.
* ಸಮಾಜದಲ್ಲಿ ಎಲೆ ಮರೆಯ ಕಾಯಿಯಂತೆ ಇದ್ದ ಹಳೆ ದರೋಜಿಯ ಶ್ರೀಮತಿ ಬುರ್ರಕಥೆ ಈರಮ್ಮಳನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪರಿಚಯಿಸಲು ಸಹಕರಿಸಲಾಯಿತು.
* ಬುಡ್ಗ ಜಂಗಮ್ ಜಾತಿಯವರ ಬಗ್ಗೆ ನಡೆದ ಸಿಓಡಿ ತನಿಖೆಗೆ ಸಮರ್ಪಕ ಮಾಹಿತಿ ಒದಗಿಸಲಾಯಿತು.
* ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ಜಾತಿ ಪತ್ರಗಳು ಮತ್ತು ಮೂಲಭೂತ ಸೌಲಭ್ಯಗಳು ಒದಗಿಸಲಾಯಿತು.
* ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗವು ಕೈಗೊಂಡ ಕರ್ನಾಟಕ ಬುಡ್ಗ ಜಂಗಮರ ಸಮೀಕ್ಷೆಗೆ ಸಹಕರಿಸಲಾಯಿತು.

### ಈಡೇರಬೇಕಾದ ಉದ್ದೇಶಗಳು

೧. ಕರ್ನಾಟಕದಲ್ಲಿ ಎಲ್ಲಾಕಡೆ ವಾಸಿಸುವ, ಬುರ್ರಕಥೆ, ಬಹುರೂಪಿ, ಬಾಳಸಂಥ, ಭೈರಾಗಿ, ಹಗಲು ವೇಷ, ಬಾಲಸಂತ, ಸುಡುಗಾಡಸಿದ್ಧ, ಜಗ್ಗಾಲಿ ಬಾವಚ ಇತ್ಯಾದಿ ಹೆಸರಿನಿಂದ ಜಾತಿ ಪತ್ರಗಳನ್ನು ಪಡೆದು ಕಷ್ಟಗಳನ್ನು ಅನುಭವಿಸುತ್ತಾ ಸಂವಿಧಾನ ಬದ್ಧವಾಗಿ ನಮ್ಮ ಬುಡ್ಗಜಂಗಮ್ ಜಾತಿಯನ್ನು ಪಡೆಯದೇ ಇರುವ ಎಲ್ಲರಿಗೂ ಯಾವುದೇ ರೀತಿ ತೊಂದರೆಯಾಗದಂತೆ ಬುಡ್ಗಜಂಗಮ್ ಜಾತಿ ಪತ್ರಗಳನ್ನು ನೀಡಬೇಕಾಗಿದೆ.

೨. ನಶಿಸುತ್ತಿರುವ ಬುಡ್ಗಜಂಗಮರ ಕಲೆಗಳ ಪುನರುಜ್ಜೀವನಕ್ಕೆ ವಿಶೇಷ ಕಾರ್ಯ ಯೋಜನೆಗಳನ್ನು ರೂಪಿಸಿ ಅನುಷ್ಠಾನಗೊಳಿಸುವುದು.

೩. ವಯಸ್ಸಾದ ಕಲಾವಿದರಿಗೆ ಮಾಶಾಸನ ನೀಡುವುದು.

೪. ಕಲೆಗಳನ್ನು ಬಿಟ್ಟಿರುವ ಇವರಿಗೆ ಪ್ಲಾಸ್ಟಿಕ್ ವ್ಯಾಪಾರ, ಮತ್ತು ವ್ಯವಸಾಯ ಇತ್ಯಾದಿಗಳಿಗಾಗಿ ಸರ್ಕಾರದಿಂದ ಆರ್ಥಿಕ ಸಹಾಯ ನೀಡುವದು.

೫. ಕಲಾವಿದರಾಗಲಿ ವ್ಯಾಪಾರ ಮಾಡುವವರಾಗಲೀ ಕರ್ನಾಟಕ ಮತ್ತು ಇತರ ಕಡೆ ನಿರ್ಭೀತಿಯಿಂದ ಸಂಚರಿಸಿ ತಮ್ಮ ಜೀವನವನ್ನು ಉತ್ತಮ ರೀತಿಯಲ್ಲಿ ರೂಪಿಸಿಕೊಳ್ಳಲು ಸರ್ಕಾರದಿಂದ ಗುರುತಿನ ಪತ್ರಗಳನ್ನು ಕೊಡಿಸುವುದು.

೬. ನಮ್ಮ ಸಮುದಾಯದಲ್ಲಿ ಕನಿಷ್ಟ ಶಿಕ್ಷಣ ಪಡೆದ ಅಭ್ಯರ್ಥಿಗಳಿಗೆ ವಿಶೇಷಯೋಜನೆ ಯಡಿಯಲ್ಲಿ ಆರ್ಥಿಕ ಸೌಲಭ್ಯಗಳು ನೀಡಬೇಕು.

೭. ಅಲೆಮಾರಿ ಅಭ್ಯರ್ಥಿಗಳಿಗೆ ಪ್ರತ್ಯೇಕವಾಗಿ ಸರಕಾರ ಸೌಲಭ್ಯ ನೀಡಬೇಕು.

ಬಳ್ಳಾರಿ ಜಿಲ್ಲೆಯಲ್ಲಿ ಜಾತಿಪತ್ರಗಳು ಪಡೆದಿದ್ದ ೧೯೮೨ ರಿಂದ ೧೯೮೪ ರಲ್ಲಿ ಡಾ ಎನ್ ಆರ್ ವೆಂಕಟೇಶಂ ಹೈದ್ರಾಬಾದ್ ಇವರ ಮಾರ್ಗದರ್ಶನದಲ್ಲಿ ೧೯೮೪, ೧೯೮೫ ರಲ್ಲಿ ಕರ್ನಾಟಕ ಬುಡ್ಗ ಜಂಗಮರ ಸಂಘ ಸ್ಥಾಪನೆ ಮಾಡಿ ಡಾ ಬಿ ಎಂ ಹೊಸಮನಿ ಅವರು ಧಾರವಾಡ ವಿಶ್ವವಿದ್ಯಾಲಯದಿಂದ ಬುಡ್ಗ ಜಂಗಮರ ಬಗ್ಗೆ ಸಂಶೋಧನೆ ಮಾಡಿ ಪಿಎಚ್ ಡಿ ಪದವಿ ಪಡೆದಿರುವರು. ಹಲವಾರು ಸಲ ಸಮುದಾಯದ ಸಮಸ್ಯೆ ಮತ್ತು ಸೌಲಭ್ಯಗಳ ಮನವರಿಕೆಗಾಗಿ ಬೆಂಗಳೂರಿನ ವಿಧಾನ ಸೌಧಕ್ಕೆ ಅಲೆದಿರುವುದುಂಟು. ಇದಕ್ಕಾಗಿ ರಾಜ್ಯದ ಎಲ್ಲ ಜಿಲ್ಲೆಗಳ ಬುಡ್ಗ ಜಂಗಮರು ಸಹಕರಿಸಿರುತ್ತಾರೆ.

**ಜ್ವಲಂತ ಮತ್ತು ಸಾಮಾನ್ಯ ಸಮಸ್ಯೆಗಳು**

೧. ಇಷ್ಟು ಸುದೀರ್ಘ ವರ್ಷಗಳಲ್ಲಿ ಅಲೆಮಾರಿ ಬುಡ್ಗಜಂಗಮರು ತಮ್ಮ ಸಂವಿಧಾನಬದ್ಧ ಹಕ್ಕುಗಳ ಬಗ್ಗೆ ಎಂದೂ ಯೋಚಿಸದೆ ಇದ್ದುದು ಒಂದು ದೊಡ್ಡ ವಿಪರ್ಯಾಸ. ಅಶಿಕ್ಷಿತ, ಅಸಂಘಟಿತ ಅಲೆಮಾರಿತನರಾಗಿ ಹೋರಾಟಗಳಲ್ಲಿ ಎಂದೂ ಪಾಲ್ಗೊಳ್ಳದೆ ಕೇವಲ ತುತ್ತಿನ ಚೀಲವನ್ನು ತುಂಬಿಸಿಕೊಳ್ಳಲು ಬದುಕಿದವನು ಈ ಅಲೆಮಾರಿ ಈ ಕ್ಷಣಕ್ಕೆ ತಾವು ಯಾರು ಎಂದು ಯೋಚಿಸುತ್ತಾ ಮುಗ್ಧ ಪ್ರದಾಸದತ್ತ ಮುಖ ಮಾಡಿರುವ ಅಲೆಮಾರಿ ಬುಡ್ಗ ಜಂಗಮರ ಜ್ವಲಂತ ಮತ್ತು ಸಾಮಾನ್ಯ ಸಮಸ್ಯೆಗಳು ಅನೇಕ. ಆದರೂ ಕೆಲವು ಸಮಸ್ಯೆಗಳನ್ನು ಪರಿಹರಿಸಲೇ ಬೇಕಾಗಿದೆ.

ಎ). ಇಡೀ ರಾಜ್ಯದಲ್ಲಿ ಪ್ರದೇಶಾವಾರು ಹಂಚಿಹೋಗಿ ವಿವಿಧ ಹೆಸರುಗಳಿಂದ ಕರೆಯಿಸಿಕೊಳ್ಳುತ್ತಿರುವ ಇಡೀ ಸಮುದಾಯ ತನ್ನ ಸ್ಪಷ್ಟವಾದ ಮತ್ತು ಸಂವಿಧಾನಬದ್ಧ ವಾದ ಹೆಸರಿನಲ್ಲಿ ಸಮಾಜದೊಡನೆ ಗುರುತಿಸಿಕೊಳ್ಳಬೇಕಾಗಿದೆ.

ಬಿ). ಜನಪದರು ಕರೆದ ಸಂಬಂಧವೇ ಇಲ್ಲದ ಹೆಸರುಗಳನ್ನು ಹೇಗೆ ತಿರಸ್ಕರಿಸಬೇಕು ಈ ನಿಟ್ಟಿನಲ್ಲಿ ಸರ್ಕಾರದ ಸಂಸ್ಥೆಗಳನ್ನು ಪರಿಹಾರಕ್ಕೆ ಆಶ್ರಯಿಸುವುದು.

ಸಿ). ಅಲೆಮಾರಿ ಬುಡ್ಗಜಂಗಮರ ಸಂವಿಧಾನಬದ್ಧ ಮೀಸಲಾತಿ ದುರುಪಯೋಗವಾಗದಂತೆ ಎಲ್ಲಾ ದಲಿತ ಸಂಘಟನೆಗಳ ಪ್ರಗತಿಪರರ ಸಹಕಾರವನ್ನು ಪಡೆದು ಈ ಅಲೆಮಾರಿ ಸಮುದಾಯವನ್ನು ಅಭಿವೃದ್ಧಿ ಪಡಿಸುವುದು.

ಡಿ). ಶಾಲೆಯ ಮುಖವನ್ನು ನೋಡದ ಅಶಿಕ್ಷಿತ ಅಲೆಮಾರಿ ಸಮುದಾಯ ಕೆಲವಡೆ ತಮ್ಮ ಮಕ್ಕಳನ್ನು ಜನಪದರು ಕರೆದ ಹೆಸರುಗಳಿಂದಲೇ ದಾಖಲಿಸಲಾಗಿದೆ.
ಉದಾ. ಭಿಕ್ಷುಕ, ಬುರ್ರಕಥೆಯುವ, ವೇಷಗಾರ, ಭೈರಾಗಿ ಬಹುರೂಪಿ, ಬಾಲಸಂತು, ಬಾವಚ ಹೀಗೆ ಹಲವಡೆ ತಪ್ಪಾಗಿ ದಾಖಲಾಗಿದ್ದು ಇವೆಲ್ಲವನ್ನು ತಿರಸ್ಕರಿಸಿ ತಪ್ಪಾಗಿ ದಾಖಲಾಗಿರುವ ತಪ್ಪನ್ನು ತಿದ್ದುಪಡಿ ಮಾಡಿ ಬುಡ್ಗಜಂಗಮ್ ಎಂದು ದಾಖಲಿಸುವುದು.

ಇ). ಬೆರಳೆಣಿಕೆಯಷ್ಟಿರುವ ಈ ಸಮುದಾಯಕ್ಕೆ ಗುರುತಿಸಿ ಚೀಟಿ ನೀಡಿದ್ದಲ್ಲಿ ಯಾವುದೇ ದುರಪಯೋಗವಾಗದಂತೆ ತಡೆಯುಬಹುದು ಕೇವಲ ಅಲೆಮಾರಿ ಬುಡ್ಗಜಂಗಮರು ತಮ್ಮ ಸಂವಿಧಾನಬದ್ಧ ಮೀಸಲಾತಿಯನ್ನು ಪಡೆಯಬಹುದು.

ಎಫ್). ಕಾನೂನು ತಿಳುವಳಿಕೆ ಇಲ್ಲದೆ ಅಲೆಮಾರಿ ಬುಡ್ಗಜಂಗಮರಿಗೆ ಕಾನೂನಿನ ತಿಳುವಳಿಕೆ ನೀಡಲು ಉಚಿತ ಕಾನೂನು ನೆರವು ನೀಡುವುದು.

ಜಿ). ಈ ಸಮುದಾಯವನ್ನು ಗುರ್ತಿಸುವಲ್ಲಿ ಸರ್ಕಾರ ಈ ಸಮುದಾಯದ ವ್ಯಕ್ತಿಗಳನ್ನು ಸಂಪರ್ಕಿಸುವುದು.

ಐ). ಇತ್ತೀಚೆಗೆ ನೆಲೆಯೂರುತ್ತಿರುವ ಅಲೆಮಾರಿಗಳ ಅಲೆಮಾರಿತನವನ್ನು ಬಿಡಲು ಅಂಬೇಡ್ಕರ್, ಆಶ್ರಯ ಇಂದಿರಾ ಅವಾಸ್ ಯೋಜನೆಗಳಡಿಯಲ್ಲಿ ಜನತಾ ಮನೆ ಗಳನ್ನು ನಿರ್ಮಿಸುವುದು.

ಜೆ). ನೆಲೆ ಇಲ್ಲದ ಅಲೆಮಾರಿ ಬುಡ್ಗಜಂಗಮರಿಗೆ ಪಡಿತರ ಚೀಟಿ,ಚುನಾವಣೆ ಗುರುತಿನ ಚೀಟಿಗಳು ಬಹಳಷ್ಟು ಕಡೆ ದಕ್ಕಿಲ್ಲ. ಇದಲ್ಲದೆ ಸರ್ಕಾರದ ಸವಲತ್ತುಗಳನ್ನು ಪಡೆಯಲು ಅಲೆಮಾರಿಗಳು ವಿಫಲರಾಗಿದ್ದಾರೆ.

ಕೆ). ಮೆರಿಟ್ ಆಧಾರಿತ ಶಿಕ್ಷಣ ವ್ಯವಸ್ಥೆಯಲ್ಲಿ ಶಾಲೆಗೆ, ಅಥವಾ ಹಾಸ್ಟೆಲ್‌ಗೆ ಪ್ರವೇಶ ದೊರಕುವುದು ಬಹು ಕಷ್ಟದ ವಿಷಯದಾಗಿದೆ. ಆದ್ದರಿಂದ ಈ ಅಲೆಮಾರಿಗಳಿಗೆ ಮೆರಿಟ್ ಆಧಾರವಿಲ್ಲದೆ ಉಚಿತ ಗುಂಪುಗಳಲ್ಲಿ ಪ್ರವೇಶ ನೀಡುವುದು.

ಎಲ್). ವಿವಿದೆಡೆ ಅಲೆದಾಡುವ ಸಮುದಾಯದ ಜನರು ಒಂದೇ ಕಡೆ ನೆಲೆಸಲು ಇಷ್ಟಪಟ್ಟಲ್ಲಿ ಇಡೀ ಸಮುದಾಯಕ್ಕಾಗಿ ನವಗ್ರಾಮಗಳನ್ನು ನಿರ್ಮಿಸುವುದು.

ಎಂ). ಕಲೆ ಮೌಖಿಕ ಸಾಹಿತ್ಯ ಸಂಗೀತ ಇವುಗಳನ್ನು ಆಧಾರವಾಗಿಟ್ಟುಕೊಂಡು ಬದುಕುತ್ತಿರುವ ಸಮುದಾಯ ಇಂದಿನ ಆಧುನಿಕ ಸನ್ನಿವೇಶದಲ್ಲಿ ತನ್ನ ಅಸ್ತಿತ್ವವನ್ನೆ ಕಳೆದುಕೊಳ್ಳಲಿದೆ. ಸಿನಿಮಾ, ಟಿವಿ ಈ ಮಾಧ್ಯಮಗಳ ಪ್ರಭಾವದ ಬುರ್ರಕಥೆ ಕೇಳದಾಗಿದೆ. ವಿವಿಧ ಚಾನಲ್‌ಗಳ ಮೋಡಿಯಲ್ಲಿ ಹಗಲುವೇಷ ಕಳೆಗುಂದಿದೆ. ತಂಬೂರಿ ಏಕನಾದ ತತ್ವಪದಗಳ ದುಃಖ ಮಯವಾಗಿವೆ ಅಲೆಮಾರಿಯ ಕಾದಿ ಕಮಂಡಲ ಜಂಗಮ ವೇಷಗಳು ಅಪಹಾಸ್ಯಕ್ಕೀಡಾಗಿವೆ. ಕಲೆಯನ್ನೇ ನಂಬಿ ಬದುಕು ಸೋತುಹೋಗುತ್ತಿದೆ. ಈಗಾಗಿ ಬುಡಕಟ್ಟಿನ ಸಾಂಸ್ಕೃತಿಕ ಬದುಕನ್ನು ಸಂರಕ್ಷಿಸುವುದು ಅತ್ಯಗತ್ಯವಾಗಿದೆ. ಭಿಕ್ಷಾಟನೆ ನಿಷೇಧದಿಂದಾಗಿದ್ದೂ ಸ್ಥಳದಿಂದ ಸ್ಥಳಕ್ಕೆ ವಲಸೆ ಹೋಗುವ ಅಲೆಮಾರಿ ಬುಡ್ಗಜಂಗಮರನ್ನು ಭಿಕ್ಷುಕ ಕೇಂದ್ರಗಳಲ್ಲಿ ಇಡಲಾಗುತ್ತಿದೆ. ಇದನ್ನು ಘೋರ ಅವಮಾನವೆಂದು ಬಾವಿಸಲಾಗಿದೆ.

ಎನ್). ಭೂವಸತಿ ರಹಿತ ಬುಡ್ಗಜಂಗಮರಿಗೆ ಸರ್ಕಾರ ಭೂಮಿಯ ಹಂಚಿಕೆ ಆಗಬೇಕು ಒಂದೆಡೆ ನೆಲೆಸಿ ಮುಖ್ಯ ಪ್ರವಾಹದತ್ತ ತಂಗಬೇಕಿದೆ.

ಓ). ಬಹಳ ಸುಲಭವಾಗಿ ನಮ್ಮ ಜಾತಿ ಪತ್ರಗಳನ್ನು ನೀಡಬೇಕಾಗಿದೆ. ಇದಕ್ಕೆ ಅತ್ಯಂತ

ಸರಳವಾದ ವಿಧಾನಗಳನ್ನು ರೂಪಿಸಿ ಟೆಂಟು, ಗುಡಿಸಲುಗಳಿಂದ ಮುಕ್ತಿ ನೀಡಿ ತಲೆಗೊಂದು ಸೂರು ಕಟ್ಟಿಕೊಡಬೇಕಾಗಿದೆ.

ಪಿ). ಕಲೆಯನ್ನೆ ನಂಬಿರುವ ಸಮುದಾಯದ ಕಲಾವಿದರಿಗೆ ಮಾಶಾಸನವನ್ನು ಅತ್ಯಂತ ಸರಳವಾಗಿ ನೀಡುವಂತಾಗಬೇಕು.

ಕ್ಯೂ). ಹಲವೆಡೆ ಬೇರೆ ಸಮುದಾಯದ ಬಲಿಷ್ಟರು, ಅಲೆಮಾರಿ ಬುಡ್ಗ ಜಂಗಮರ ಹೆಸರಿನಲ್ಲಿ ಬೇಡ ಜಂಗಮ್ ಎಂದು ಜಾತಿ ಪತ್ರ ಪಡೆದು ಸರ್ಕಾರದ ವಿವಿಧ ಹುದ್ದೆಗಳಿಗೆ ಸೇರಿರುವುದು ಖಂಡನೀಯ ಮತ್ತು ನಾಚಿಕೆಗೇಡು ಇದನ್ನು ತಡೆಗಟ್ಟಬೇಕು.

ಆರ್). ಪ್ರಪಂಚ ಒಂದು ಗ್ರಾಮ ಎಂದು ಭಾರತದ ಪ್ರಜೆಗಳು ಬೇರೆ ದೇಶಗಳಲ್ಲಿ ಆಕಸ್ಮಿಕ ಘಟನೆಗಳು ನಡೆದಾಗ ಸಮರೋಪದಿಯಾಗಿ ತನು, ಮನ, ಧನದಿಂದ ಕೋಟಿಗಟ್ಟಲೆ ಪರಿಹಾರಗಳನ್ನು ನೀಡಲು ಮುಂದಾಗುತ್ತಾರೆ. ಅನೇಕ ವರ್ಷಗಳ ಕೆಳಗೆ ನಿರಾಶ್ರಿತ ಬಂಗಾಳಿಯವರಿಗೆ ಟಿಬೆಟಿಯನ್ನರಿಗೆ ಮತ್ತು ವಿದೇಶಿಯರಿಗೆ ಗ್ರಾಮಗಳು ಕಟ್ಟಿ ಭೂಮಿಗಳನ್ನು ನೀಡಿ ಅವರ ಹೆಸರಿನಲ್ಲಿ ಕರೆದಿರುವ ಉದಾರಿಗಳು ನಮ್ಮವರು ಶತಮಾನಗಳಿಂದ ಜನರಿಗಾಗಿ ಸಂಸ್ಕೃತಿಗಾಗಿ ಧರ್ಮಕ್ಕಾಗಿ ಕಾಡಿನಿಂದ ನಾಡಿಗೆ ಬಂದ ಕಲಾ ಸಮುದಾಯಕ್ಕೆ ನಮ್ಮ ಭಾರತೀಯರ ಕೊಡುಗೆ ಬೆಳಿಗ್ಗೆ ಮನೆ, ಮನೆಗೆ ಹೋಗಿ ಹಳಸಿದ ಅನ್ನ ಪಡೆದು ಕಾಸಿಗೆ ಕೈ ಚಾಚಿರುವ ವೇದನೆ ಕಾಣದಿರುವುದು ವಿಪರ್ಯಾಸ.

ಇಲ್ಲಿಯವರೆಗೂ ರಾಜ್ಯದ ಯಾವುದೇ ಭಾಗದಲ್ಲಿ ಅಲೆಮಾರಿ ಬುಡ್ಗ ಜಂಗಮ ಜಾತಿ ಪತ್ರವನ್ನು ಬುಡ್ಗ ಜಂಗಮ್ ಪರಿಶಿಷ್ಟ ಜಾತಿ ಎಂದು ಪಡೆದಿರುತ್ತಾರೆ. ಯಾವುದೇ ಭಾಗದಲ್ಲಿ ಬೇಡ ಜಂಗಮ ಎಂದು ಜಾತಿ ಪತ್ರ ಪಡೆದಿರುವುದಿಲ್ಲ. ಒಂದು ವೇಳೆ ಅಲೆಮಾರಿಗಳ ಮೀಸಲಾತಿ ಹಕ್ಕನ್ನು ಬಲಿಷ್ಟರು ಪಡೆದಿದ್ದರೇ ಅದು ಅಮಾನವೀಯ, ಶಿಕ್ಷಾರ್ಹ ಮತ್ತು ಖಂಡನೀಯ ಅಂತಹ ಭ್ರಷ್ಟರ ವಿರುದ್ಧ ಜನಪದ ಸಂಘಟನೆಗಳು ಪ್ರತಿಭಟಿಸಿ ಅಲೆಮಾರಿ ಬುಡ್ಗ ಜಂಗಮರ ಧ್ವನಿಯಾಗಬೇಕಿದೆ. ಈ ದುರುಪಯೋಗದ ಪರಿಹಾರಕ್ಕೆ ಏಕೈಕ ಮಾರ್ಗ ಎಂದರೆ ಈಗಾಗಲೆ ರಾಜ್ಯದಲ್ಲಿ ಸಮೀಕ್ಷೆ ಮಾಡಿರುವ ಅಲೆಮಾರಿ ಬುಡ್ಗ ಜಂಗಮರಿಗೆ ತಕ್ಷಣ ಸಮಾಜ ಕಲ್ಯಾಣ ಇಲಾಖೆ ಗುರುತಿನ ಚೀಟಿ ನೀಡಬೇಕು. ಹಾಗೂ ಸಮುದಾಯದ ಸಂಘಟನೆಯ ಎಲ್ಲಾ ಸಲಹೆಗಳನ್ನು ಆಲಿಸಬೇಕು. ಇಷ್ಟು ವರ್ಷಗಳ ಸುಧೀರ್ಘ ಅವಧಿಯಲ್ಲಿ ಸರ್ಕಾರದ ಯಾವುದೇ ಸ್ಥಾನಮಾನಗಳನ್ನು ಪಡೆಯದ ಬುಡ್ಗ ಜಂಗಮರಿಗೆ ಒಳಮೀಸಲಾತಿ ಮತ್ತು ವಿಶೇಷ ಪ್ಯಾಕೇಜ್ ನೆರವು ನೀಡಬೇಕಿದೆ.

**ಸಮಸ್ಯೆಯ ಸುಳಿ ಹಾಗೂ ಪರಿಹಾರೋಪಾಯ** ಬೇಡ ಜಂಗಾಲ, ಬುಡ್ಗ ಜಂಗಾಲ, ವೇಷಗಾರರು, ಬಹುರೂಪಿಗಳು, ಬುರ್ರ ಕಥನಗಾರ ಎಂಬ ಹೆಸರುಗಳಿಂದ ಗುರುತಿಸ್ಪಡುವ ಇವರು ವಾಸ್ತವದಲ್ಲಿ ಬೇಡ ಅಥವಾ ಬುಡ್ಗ ಜಂಗಮರೇ ಎಂಬ ಸರ್ಕಾರದ ಶಂಕೆಯೇ ಸಮಸ್ಯೆಯ ಸುಳಿಯಾಗಿರುವುದು. ಈ ಶಂಕೆಯ ಸಮಸ್ಯೆಯನ್ನು ಗುರ್ತಿಸುವರು. ಇದು ಕಾಡು

ಅವರಿಗೆ ಕೊಟ್ಟ ಹೆಸರಾದರೆ ನಾಡು ಅವರಿಗೆ ಹೆಸರಿಸಿದ್ದು ಜಂಗಮರೆಂದು ಕಾಡಾಡಿಗಳಾಗಿದ್ದ ಬೇಡ (ಬುಡ್ಗ) ಜಂಗಾಲರು ಹೊಟ್ಟೆಪಾಡಿಗಾಗಿ ಎಂದಿನಿಂದ ತಮ್ಮ ವಾದ್ಯದೊಂದಿಗೆ ದೈರಾಧನೆಯನ್ನು ಪಾತ್ರಗಳ ಮುಖೇನ ಆರಂಭಿಸಿ ಗ್ರಾಮ ಮತ್ತು ನಗರಗಳಲ್ಲಿ ಸಂಚರಿಸ ಲಾರಂಭಿಸಿದರೋ ಅಂದಿನಿಂದ ಅವರಿಗೆ ಜನಪದರು, ಬೇಡ (ಬುಡ್ಗ) ಜಂಗಾಲರೆಂಬುದರ ಬದಲಾಗಿ ಬೇಡ (ಬುಡ್ಗ) ಜಂಗಮರೆಂದು ಕರೆದರು ಎಂದರೆ ಅತಿಶಯೋಕ್ತಿಯಾಗದು. ಜಂಗಮ ಎಂಬ ಪದಕ್ಕೆ ಕನ್ನಡ ರತ್ನಕೋಶದಲ್ಲಿ ಚಲನೆಯುಳ್ಳದು ಮತ್ತು ವೀರಶೈವ ವಿರಕ್ತ ಎಂಬ ಅರ್ಥಗಳು ಇವೆ. ಅಲ್ಲಿ ಚಲನೆ ಅನಾದಿಕಾಲದ್ದಾದರೆ ವೀರಶೈವ ವಿರಕ್ತ ಇತ್ತೀಚಿನ ದಾಗಿರುತ್ತದೆ. ಚಲನೆ ಕಾಡಾಡಿ ಬೇಡ (ಬುಡ್ಗ)ರ ಜೀವನಾಧಾರ. ಚಲನೆರಹಿತ ಬೇಟೆಯಿಲ್ಲ. ಬೇಟೆಯಿಲ್ಲದೆ ಬದುಕಿಲ್ಲ. ಚಲನಶೀಲ ಬೇಟೆ ಆದಿಮಾನವ ಸಹಜಕ್ರಿಯೆ.

ಹನ್ನೆರಡನೆಯ ಶತಮಾನದಲ್ಲಿ ಶರಣರಿಂದ ವೀರಶೈವ ಧರ್ಮ ಸಾಮಾಜಿಕ ಸಮಾನತೆಗಾಗಿ ಹುಟ್ಟಿಕೊಂಡಿರುವುದು ಇತಿಹಾಸ ಸಾಕ್ಷಿ, ಶರಣರಿಂದ ಕಲ್ಪಿತ 'ಜಂಗಮ' ಚಲನಶೀಲ ವ್ಯಕ್ತಿ 'ಜಂಗಮಕ್ಕೆ ಕುಲವಿಲ್ಲ, ಗಂಗೆಗೆ ಹೊಲೆಯಿಲ್ಲ' ಎಂಬ ಉಕ್ತಿ ಜನಜನಿತವಾಗಿರುವುದು. ಆದರೆ ಕಾಲಾಂತರದಲ್ಲಿ ಜಂಗಮವೂ ಒಂದು ಜಾತಿಯಾಗಿ ಮಾರ್ಪಟ್ಟಿರುವುದನ್ನು ಅಲ್ಲಗಳೆ ಯುವಂತಿಲ್ಲ. ಶರಣರ ಜಾತ್ಯಾತೀತ ಸಮಾಜ ನಿರ್ಮಾಣದ ಕನಸಿನ ಸೌಧ ನನಸಾಗದೆ, ಅಸಮಾನತೆಯ ಅಂಧಕಾರದ ಸಮಾಜ ಬುಡ ಸಮೇತ ಕಿತ್ತೆಸಿಯಲಾಗದೆ ನೆಲ ಕಚ್ಚಿತು. ಸಾಮಾಜಿಕ ಸಮಾನತೆ ಕನಸಾಗಿಯೇ ಉಳಿದುಕೊಂಡಿತು.

ಸಂವಿಧಾನಬದ್ಧವಾಗಿ ಬುಡ್ಗ ಜಂಗಮರೆಂದು ಕರೆಯಲ್ಪಡುವ ಬುಡ್ಗ ಜಂಗಾಲರಲ್ಲಿ ಯಾವತ್ತು ವೀರಶೈವ ಜಂಗಮರಲ್ಲಿಯ ಪ್ರಮುಖ ವ್ಯತ್ಯಾಸಗಳನ್ನು ಅರಿಯುವುದರಿಂದಲೂ ಬುಡ್ಗ ಜಂಗಾಲರ ಸಮಸ್ಯೆಗಳಿಗೆ ಪರಿಹಾರ ಕಲ್ಪಿಸಿದಂತಾಗುವುದು. ಇವರೀರ್ವರಲ್ಲಿ ವಿವಾಹ ಸಂಬಂಧವಿಲ್ಲ. ಬೆಡಗುಗಳಲ್ಲಿ ಸಾಮ್ಯತೆಯಿಲ್ಲ. ಸಾಮಾಜಿಕ, ಆರ್ಥಿಕ, ಧಾರ್ಮಿಕ, ಸಾಂಸ್ಕೃತಿಕ ಅಂಶಗಳಲ್ಲಿ ಸಾಮ್ಯಗಳಿಲ್ಲ. ಉಟೋಪಚಾರ, ಉಡಿಗೆ, ತೊಡಿಗೆ, ಆಚಾರ-ವಿಚಾರ, ರೂಢಿ ಸಂಪ್ರದಾಯ, ಇತ್ಯಾದಿಗಳಲ್ಲಿಯೂ ಸಾಮ್ಯತೆ ಕಂಡು ಬರುವುದಿಲ್ಲ. ಬೇಡ (ಬುಡ್ಗ) ಜಂಗಾಲ (ಜಂಗಮ)ರು ಮಾಂಸಾಹಾರಿಗಳು, ಬೇಟೆಗಾರರು, ವೇಷಹಾಕಿ, ಭಿಕ್ಷೆ ಎತ್ತುವವರು, ಅಸ್ಪೃಶ್ಯರು, ಲಿಂಗಧಾರಿಗಳಲ್ಲ; ಬುರ‍್ರಕಥನಗಳಿಗಾಗಿ ಬುಡಗು, ತಂಬೂರಿ ವಾದ್ಯಗಳನ್ನು ಬಳಸುವವರು. ಅಲೆಮಾರಿಗಳು, ಗುಡಾರವಾಸಿಗಳು, ಶೋಷಿತರು, ಪಾತ್ರಕ್ಕೆ ತಕ್ಕ ವೇಷ ಹಾಕುವವರು. ಆದರೆ ವೀರಶೈವ ಜಂಗಮರು ಲಿಂಗ ದೀಕ್ಷೆ ಪಡೆದರು, ಅಸ್ಪೃಶ್ಯರಲ್ಲ, ಪ್ರತಿಷ್ಠಿತ ಸಾಮಾಜಿಕ ಸ್ಥಾನಮಾನ ಉಳ್ಳವರು. ಸಸ್ಯಹಾರಿಗಳು, ವೇಷ ಹಾಕಿ ಭಿಕ್ಷ, ಎತ್ತುವವರಲ್ಲ, ಬಹುರೂಪಿಗಳಲ್ಲ.

ಕರ್ನಾಟಕದಲ್ಲಿ ಬುಡ್ಗ ಮತ್ತು ಬೇಡ ಜಂಗಮರು ಭಿನ್ನವಾಗಿರದೆ ಒಂದೇ ಸಮುದಾಯದ ಪರ್ಯಾಯ ಪದಗಳಾಗಿರುವವೆಂದು ಸಾಧಿತವಾಗುವುದು. ಬೇಡ (ನಾಯಕ) ಎಂಬ ಸಮುದಾಯ ಕರ್ನಾಟಕದಲ್ಲಿ ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿದ್ದು ಅದು ಬೇಡ (ಬುಡ್ಗ) ಜಂಗಮರನ್ನು ಅವರ ಬೇಡಗುಗಳಾದ ಯಡವಲಿ, ಅಶ್ವಿ ಮೋತಿವಲು(ವಾನರ ಬಂಧುಗಳು), ತಾಟಿಗೊಂಡವರು

(ಕೆಂಪು ಕೋತಿ), ಮೀರ್ಯಾಲು, ಕೊಂಡಪಲ್ಲಿ ಸಿರ್ಸಾಲೋಳು, ಡಕ್ಕೋಳ್ಳು, ಇಪ್ಪೋಳು, ಮುಗ್ಗೋಳು, ಬಾದಿಗೋಳು ಇತ್ಯಾದಿಗಳಿಂದ ಕರ್ನಾಟಕ, ಆಂಧ್ರಪ್ರದೇಶ ಮತ್ತು ಮಹಾರಾಷ್ಟ್ರದಲ್ಲಿ ಕಂಡು ಹಿಡಿಯಬಹುದು. ಅಲೆಮಾರಿಗಳಾದ ಇವರು ಕರ್ನಾಟಕದ ಗುಲಬರ್ಗಾ, ರಾಯಚೂರು, ಚಿತ್ರದುರ್ಗ, ದಾವಣಗೆರೆ, ಹಾವೇರಿ, ಗದಗ, ಧಾರವಾಡ, ತುಮಕೂರು, ಬಳ್ಳಾರಿ, ಬೀದರ, ರಾಮನಗರ ಜಿಲ್ಲೆ, ಬೆಂಗಳೂರು, ಗ್ರಾಮೀಣ ಮತ್ತು ನಗರ ಬಾಗಲಕೋಟೆ, ಕೊಪ್ಪಳ, ಹಾಸನ, ಕೋಲಾರ, ಶಿವಮೊಗ್ಗ, ತುಮಕೂರು, ಬಿಜಾಪುರ ಮತ್ತು ಬೆಳಗಾವಿ ಜಿಲ್ಲೆಗಳಲ್ಲಿಯೂ ಅಲ್ಲಲ್ಲಿ ಬೇಡ (ಬುಡ್ಗ) ಜಂಗಮರು ನೆಲೆ ನಿಂತಿರುತ್ತಾರೆಂದು ಸಮೀಕ್ಷೆಯಿಂದ ತಿಳಿದು ಬಂದಿದೆ. ಬುಡಕಟ್ಟಿನ ಎಲ್ಲ ಲಕ್ಷಣಗಳನ್ನು ಹೊಂದಿರುವ ಈ ಸಮುದಾಯ ವಾಸ್ತವದಲ್ಲಿ ಪರಿಶಿಷ್ಟ ಪಂಗಡದ ಪಟ್ಟಿಗೆ ಬೇಡ (ಬುಡ್ಗ) ಜಂಗಾಲ ಎಂಬ ಹೆಸರಿನಿಂದ ಸೇರಿಸಲು ಅರ್ಹವಾಗಿತ್ತು ಆದರೆ ಬೇಡ (ಬುಡ್ಗ) ಜಂಗಮ್ ಎಂಬ ಹೆಸರಿನಿಂದ ಸಂವಿಧಾನದ ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ಸೇರಿ ತನ್ನ ಬುಡಕಟ್ಟಿನ ಸಂಪೂರ್ಣ ಲಕ್ಷಣಗಳಿಂದ ಮುಕ್ತಿ ಪಡೆಯದೇ ಮತ್ತು ನಗರ ಹಾಗೂ ಗ್ರಾಮೀಣ ಜೀವನಕ್ಕೂ ಸಂಪೂರ್ಣ ಒಗ್ಗದೆ ತ್ರಿಶಂಕು ಸ್ಥಿತಿಯಲ್ಲಿ ಇರುವದು. ತಮ್ಮ ಸಮುದಾಯದ ಮೂಲದ ಹೆಸರುಗಳಾದ ಬೇಡ (ಬುಡ್ಗ) ಜಂಗಾಲದ ಬದಲಾಗಿ ಸರ್ಕಾರದ ಯಾವುದೇ ಪಟ್ಟಿಯಲ್ಲಿ ಸೇರದ, ವೇಷಗಾರರು, ಬುರ್ರಕಥಾ ಗಾರರು, ಬಾಲಸಂತರು, ಬಹುರೂಪಿಗಳು, ಸನ್ಯಾಸಿ, ಭೈರಾಗಿ, ಬಾವಚ, ಸಿದ್ಧರು, ಕೊಂಡ ಮಾಮ, ಗೊರಮಯ್ಯ, ಜಗ್ಗಾಲಿ ಪ್ರದರ್ಶನ ಹೆಸರುಗಳಿಂದ ಜನಪದರು ಪರಿಚಯಿಸುತ್ತಿರುವುದು ತುಂಬ ಶೋಚನೀಯವೇ ಆಗಿದೆ. ಇವರುಗಳ ಆಚಾರ-ವಿಚಾರ, ಭಾಷೆ ಒಳಡಾಳಿತ, ಮತ್ತು ಕುಲ ಬೆಡುಗುಗಳು ಇವೆಲ್ಲ ಒಂದೇ ಮೂಲದವು ಎಂದು ಸಾಧಿತವಾಗುತ್ತದೆ. ಬುಡ್ಗ ಮತ್ತು ಬೇಡ ಜಂಗಮರ ಈ ಕಗ್ಗಂಟನ್ನು ಬಿಡಿಸಲು ಪರಿಶಿಷ್ಟ ಜಾತಿಯಲ್ಲಿಯ ಬೇಡ ಜಂಗಮ ಎಂಬ ಪದವನ್ನು ಕೈಬಿಡುವುದು ಸೂಕ್ತ.

## ಅಂಕಿಅಂಶಗಳು: ೧ ಕರ್ನಾಟಕ ಬುಡ್ಗ ಜಂಗಮರ ಜಿಲ್ಲಾವಾರು, ಲಿಂಗವಾರು ಜನಸಂಖ್ಯೆ (೨೦೦೭)

| ಕ್ರ.ಸಂ. | ಜಿಲ್ಲೆ | ತಾಲೂಕು | ಗ್ರಾಮೀಣ | ನಗರ | ನೆಲೆಗಳು | ಕುಟುಂಬ | ಜನಸಂಖ್ಯೆ ಗಂಡು | ಹೆಣ್ಣು | ಒಟ್ಟು |
|---|---|---|---|---|---|---|---|---|---|
| I | II | III | IV | V | VI | VII | VIII | IX | X |
| ೧ | ಬಾಗಲಕೋಟೆ | | | | | ೧೪ | ೫೨ | ೩೧ | ೯೭ |
| | | ಹುನುಗುಂದ | ಇಳಕಲ್ | | ಇಳಕಲ್ | ೧೦ | ೩೩ | ೨೩ | ೬೬ |
| | | ಮುಧೋಳ | | | ನಗರಲ್ * | ೪ | ೧೯ | ೮ | ೩೧ |
| ೨ | ಬೆಂಗಳೂರು | | | | | ೪೪೬ | ೧೪೮೭ | ೧೩೩೨ | ೩೨೬೫ |
| | | ಬೆಂಗಳೂರು ಪೂರ್ವ | | ಬಿ.ಬಿ.ಎಂ.ಪಿ | ವಿಜನಪುರ | ೫೯ | ೨೨೦ | ೧೮೫ | ೪೬೪ |
| | | | | | ರಾಮಮೂರ್ತಿನಗರ | ೧೯೯ | ೭೨೮ | ೬೪೧ | ೧೫೬೮ |
| | | | ಕೆ.ಆರ್. ಪುರಂ | ಕೆ.ಆರ್. ಪುರಂ | ಅಕ್ಷಯನಗರ | ೧೯ | ೫೪ | ೪೪ | ೧೧೭ |
| | | | | | ರಾಜೇಶ್ವರಿ ಲೇ ಔಟ್ | ೧೨ | ೩೬ | ೩೨ | ೮೦ |
| | | | | | ಭಟ್ರಹಳ್ಳಿ * | ೧೫ | ೪೨ | ೪೨ | ೯೯ |
| | | | ಕೃಷ್ಣರಾಜಪುರ | | ಟಿ.ಸಿ. ಪಾಳ್ಯ | ೮ | ೩೨ | ೨೩ | ೬೩ |
| | | | | | ಗುಂಗುರಪಾಳ್ಯ * | ೩೦ | ೮೪ | ೮೪ | ೧೯೮ |

| I | II | III | IV | V | VI | VII | VIII | IX | X |
|---|---|---|---|---|---|---|---|---|---|
| | | ಬೆಂಗಳೂರು ಉತ್ತರ | | ಕದ್ರಿನೆಹಳ್ಳಿ | ಕದ್ರಿನೆಹಳ್ಳಿ * | ೨೦ | ೫೬ | ೫೬ | ೧೩೨ |
| | | | | ಯಲಹಂಕ | ಯಲಹಂಕ * | ೪೦ | ೧೧೩ | ೧೧೨ | ೨೬೫ |
| | | ಬೆಂಗಳೂರು ನಗರ | | ಬೃಹತ್ ನಗರ | ಆನಂದಪುರ | ೧೪ | ೪೪ | ೩೮ | ೯೬ |
| | | ಬೆಂಗಳೂರು ದಕ್ಷಿಣ | | ಬೊಮ್ಮನಹಳ್ಳಿ | ಭೀರೇಶ್ವರ ನಗರ | ೩೦ | ೭೮ | ೭೫ | ೧೮೩ |
| ೩ | ಬೆಂಗಳೂರು ಗ್ರಾಮಾಂತರ | | | | | ೭೬ | ೧೭೯ | ೧೭೮ | ೪೩೩ |
| | | ಹೊಸಕೋಟೆ | | | ಅನಪಲ್ಲಿ | ೧೮ | ೪೫ | ೪೦ | ೧೦೩ |
| | | | | | ಅಪ್ಪಸಂದ್ರ | ೪ | ೧೧ | ೧೧ | ೨೬ |
| | | | | | ಚೋಕ್ಕಹಳ್ಳಿ | ೧೭ | ೪೦ | ೪೧ | ೯೮ |
| | | | | | ಚೋಕ್ಕಹಂದ್ರ | ೧೧ | ೨೫ | ೨೫ | ೬೧ |
| | | | | | ನಡಗುಂದಿ | ೬ | ೧೩ | ೧೩ | ೩೨ |
| | | | | | ಗೋವಿಂದಪುರ | ೧೦ | ೨೫ | ೨೭ | ೬೨ |
| | | | | | ಹೊಸಕೋಟೆ ಪಟ್ಟಣ | ೧೦ | ೨೦ | ೨೧ | ೫೧ |

| I | II | III | IV | V | VI | VII | VIII | IX | X |
|---|---|---|---|---|---|---|---|---|---|
| ೪ | ಬೆಳಗಾವಿ | | | | | ೨೩೪ | ೫೩೪ | ೪೭೨ | ೧೨೪೦ |
| | | ಅಥಣಿ | | | ಸಂಕೋನಟ್ಟಿ | ೨೫ | ೬೫ | ೪೮ | ೧೩೮ |
| | | ಬೈಲಹೊಂಗಲ | | ಬೈಲಹೊಂಗಲ | ಇಂಧ್ರನಗರ | ೨೭ | ೬೨ | ೫೭ | ೧೪೬ |
| | | ಬೆಳಗಾವಿ | | | ಕಣಬರ್ಗಿ | ೩೨ | ೭೬ | ೬೬ | ೧೭೪ |
| | | ಚಿಕ್ಕೋಡಿ | | | ಮಳಮಡ್ಡಿ | ೨೩ | ೫೬ | ೪೭ | ೧೨೬ |
| | | ಗೋಕಾಕ್ | | ಬೆಳಗಾವಿ | ಪಮಲದಿನ್ನಿ | ೨೩ | ೫೩ | ೪೭ | ೧೨೩ |
| | | ರಾಯಬಾಗ | | | ರಾಯಬಾಗ | ೬೩ | ೧೩೪ | ೧೨೪ | ೩೨೧ |
| | | ರಾಮದುರ್ಗ | | ಬೆಳಗಾವಿ | ಸುರೆಬಾನ | ೨೨ | ೫೦ | ೪೭ | ೧೧೯ |
| | | ಸವದತ್ತಿ | | | ಸವದತ್ತಿ | ೧೯ | ೩೮ | ೩೬ | ೯೩ |
| ೫ | ಬಳ್ಳಾರಿ | | | | | ೬೪೫ | ೧೪೭೨ | ೧೪೮೨ | ೩೫೯೯ |
| | | ಬಳ್ಳಾರಿ | ಶ್ರೀಧರಗಡ್ಡೆ | | ಗುಡಾರನಗರ | ೧೧೯ | ೨೭೯ | ೨೪೪ | ೬೪೨ |
| | | | ಬಳ್ಳಾರಿ | ಬಳ್ಳಾರಿ | ರಾಜೇಶ್ವರಿ ನಗರ | ೨೪ | ೫೦ | ೪೨ | ೧೧೬ |
| | | | | | ಕಾಕರಹೊಟಟ | ೧೭ | ೪೨ | ೩೬ | ೯೫ |

| I | II | III | IV | V | VI | VII | VIII | IX | X |
|---|---|---|---|---|---|---|---|---|---|
| | | | ಕುಡುತಿನಿ | | ರಾಘವೇಂದ್ರ ಕಾಲೋನಿ | ೨೬ | ೬೭ | ೪೭ | ೧೪೦ |
| | | | ಕುರುಗೋಡು | | ಹರಿಕೃಪ ಕಾಲೋನಿ | ೧೧ | ೨೫ | ೧೭ | ೫೩ |
| | | ಹೊಸಪೇಟೆ | ಕಂಪ್ಲಿ | ಕಂಪ್ಲಿ | ಎಂ.ಡಿ. ಕ್ಯಾಂಪ್ | ೧೧ | ೧೮ | ೧೨ | ೪೧ |
| | | ಕೂಡ್ಲಿಗಿ | ಕೂಡ್ಲಿಗಿ | ಕೂಡ್ಲಿಗಿ | ಬಾಪೂಜಿ ನಗರ | ೧೯ | ೪೭ | ೪೧ | ೧೦೭ |
| | | | | ಹೊಸಪೇಟೆ | ಬುಡ್ಗಜಂಗಮ ಕಾಲೋನಿ | ೭೭ | ೧೭೩ | ೧೫೩ | ೪೦೩ |
| | | | ದೇವಲಾಪುರ | | ಸೋಮಲಾಪುರ | ೩೦ | ೫೪ | ೫೬ | ೧೪೦ |
| | | | ಬುಕ್ಕಸಾಗರ | | ೭೬ ವೆಂಕಟಾಪುರ ಕ್ಯಾಂಪ್ | ೨೩ | ೪೭ | ೯೦ | ೧೬೦ |
| | | ಹೆಚ್.ಬಿ. ಹಳ್ಳಿ | ಹೆಚ್.ಬಿ. ಹಳ್ಳಿ | | ಭೋವಿಕಾಲೋನಿ | ೧೨೬ | ೧೨೯ | ೨೫೪ | ೫೦೯ |
| | | ಸಂಡೂರು | | ಸಂಡೂರು | ಬಸನಿಲ್ದಾಣ ಹತ್ತಿರ | ೧೧ | ೧೬೫ | ೧೫೩ | ೩೨೯ |
| | | | ಹೊಸದುರ್ಗ | | ಹಳೆದುರ್ಗ | ೨೮ | ೬೨ | ೬೭ | ೧೫೭ |
| | | ಶಿರಗುಪ್ಪ | ಬಲಕುಂದಿ | | ಬಲಕುಂದಿ | ೨೦ | ೫೦ | ೩೫ | ೧೦೫ |
| | | | ಹೆಚ್. ಹೊಸಳ್ಳಿ | | ಹೆಚ್. ಹೊಸಳ್ಳಿ | ೯ | ೨೩ | ೧೬ | ೪೮ |
| | | | ಹೊಳೆಕೋಟೆ | | ಹೊಳೆಕೋಟೆ | ೨೧ | ೪೯ | ೫೨ | ೧೨೨ |
| | | | | | ಸಿದ್ದೇಶ್ವರ ನಗರ | ೩೭ | ೧೦೦ | ೭೫ | ೨೧೨ |

| I | II | III | IV | V | VI | VII | VIII | IX | X |
|---|---|---|---|---|---|---|---|---|---|
| | | | | ಶಿರಗುಪ್ಪ | ಬುಡ್ಗ ಜಂಗಮ ಕಾಲೋನಿ | ೨೧ | ೪೯ | ೫೨ | ೧೨೨ |
| | | | | | ಶಿರಿಗೇರಾ * | ೬ | ೨೪ | ೨೧ | ೫೧ |
| | | | | | ತೆಕ್ಕಲಕೋಟೆ * | ೯ | ೧೯ | ೧೯ | ೪೭ |
| ೬ | ಬೀದರ | | | | | ೨೧೭ | ೫೬೧ | ೫೬೫ | ೧೩೪೩ |
| | | ಬೀದರ | | | ಬಾಲನಗರ | ೯೪ | ೨೮೭ | ೨೯೨ | ೬೭೩ |
| | | ಭಾಲ್ಕಿ | | ಭಾಲ್ಕಿ | ಭಾಲ್ಕಿ * | ೧೪ | ೪೪ | ೪೭ | ೧೦೫ |
| | | ಬಸವಕಲ್ಯಾಣ | | | ಕೈಕಾಡಿ ಗಲ್ಲಿ | ೧೫ | ೩೪ | ೨೮ | ೭೭ |
| | | ಹುಮನಬಾದ್ | | ಮನ್ನಾಕ್ಕಿನಾಳ | ಪುಕಟನಗರ | ೧೦ | ೨೬ | ೨೨ | ೫೮ |
| | | | ಉದಮನೆಳ್ಳಿ | | ಕಾರ್ಕನಹಳ್ಳಿ | ೨೦ | ೩೮ | ೪೬ | ೧೦೪ |
| | | | | | ಚಿಟ್ಟಗುಪ್ಪ | ೧೯ | ೩೯ | ೩೬ | ೯೪ |
| | | | | ಕೊಡಂಬಲ್ | ಕೊಡಂಬಲ್ | ೧೮ | ೩೩ | ೪೦ | ೯೧ |
| | | | | ಹುಡುಗಿ | ಜನತಾನಗರ | ೧೧ | ೨೦ | ೧೭ | ೪೮ |
| | | | | ಮುತ್ತಂಗಿ | ಮುತ್ತಂಗಿ | ೧೩ | ೩೧ | ೨೯ | ೭೩ |
| | | | | | ಮನ್ನಾ ಎಕ್ಕೆಳ್ಳಿ * | ೩ | ೯ | ೮ | ೨೦ |

| I | II | III | IV | V | VI | VII | VIII | IX | X |
|---|---|---|---|---|---|---|---|---|---|
| ೭ | ಬಿಜಾಪುರ | | | | | ೩೨ | ೧೨೪ | ೧೦೨ | ೨೫೮ |
| | | ಬಿಜಾಪುರ | | ಬಿಜಾಪುರ | ಅಂಬೇಡ್ಕರನಗರ * | ೮ | ೩೩ | ೩೦ | ೭೧ |
| | | | | | ಜಾಲಿದರ್ಗಾ * | ೪ | ೨೧ | ೨೦ | ೪೫ |
| | | | | | ಯುಗಪುರ ಕಾಲೋನಿ * | ೭ | ೨೭ | ೨೪ | ೫೮ |
| | | ಇಂಡಿ | | | ಚಡಚಣ * | ೧೧ | ೩೭ | ೨೨ | ೭೦ |
| | | ಶಿಂಧಗಿ | | | ಮೊರಟಗಿ * | ೨ | ೬ | ೬ | ೧೪ |
| ೮ | ಚಿತ್ರದುರ್ಗ | | | | | ೧೧ | ೨೮ | ೩೨ | ೭೧ |
| | | ಚಿತ್ರದುರ್ಗ | | | ಚಿತ್ರಯ್ಯನಹಟ್ಟಿ * | ೨ | ೧೦ | ೮ | ೨೦ |
| | | ಹೊಳಲ್ಕೆರೆ | | | ಅನಂತಪುರ * | ೩ | ೮ | ೬ | ೧೭ |
| | | | | | ಕೆಲಘಟ್ಟ * | ೬ | ೧೦ | ೧೮ | ೩೪ |
| ೯ | ದಾವಣಗೆರೆ | | | | | ೮೫ | ೧೮೧ | ೧೯೭ | ೪೬೩ |
| | | ದಾವಣಗೆರೆ | | | ನಿಟ್ಟುವಳ್ಳಿ | ೨೦ | ೩೮ | ೪೮ | ೧೦೬ |
| | | ಹರಪನಹಳ್ಳಿ | | | ಹರಪನಹಳ್ಳಿ | ೪ | ೫ | ೭ | ೧೬ |
| | | ಹರಿಹರ | | | ಹರಿಹರ | ೪೨ | ೮೪ | ೯೦ | ೨೧೬ |
| | | | ಹರಿಹರ | | ಗುತ್ತೂರು | ೧೯ | ೫೪ | ೫೨ | ೧೨೫ |

| I | II | III | IV | V | VI | VII | VIII | IX | X |
|---|---|---|---|---|---|---|---|---|---|
| ೧೦ | ಧಾರವಾಡ | | | | | ೭೭ | ೨೧೬ | ೨೨೧ | ೫೧೪ |
| | | ಹುಬ್ಬಳ್ಳಿ | | ನಲ್ಲಿ | ನಲ್ಲಿ * | ೫ | ೧೪ | ೧೪ | ೩೩ |
| | | | | | ಅದರಗುಂಚಿ * | ೨೨ | ೬೨ | ೬೫ | ೧೪೯ |
| | | ಕಲಘಟಗಿ | | ಜಿ. ಬಸವನಕೊಪ್ಪ | ಜಿ. ಬಸವನಕೊಪ್ಪ * | ೩೦ | ೮೪ | ೮೫ | ೧೯೯ |
| | | | | ಕಲಘಟಗಿ ಟೌನ್ | ಕಲಘಟಗಿ ಟೌನ್ * | ೨೦ | ೫೬ | ೫೭ | ೧೩೩ |
| ೧೧ | ಗದಗ | | | | | ೭೯ | ೨೩೪ | ೨೧೭ | ೫೩೦ |
| | | ಗದಗ | | | ಗದಗ | ೨೬ | ೭೭ | ೭೧ | ೧೭೪ |
| | | ಶಿರಹಟ್ಟಿ | | | ಶ್ರೀಮಾತಾಂಗದ ದೇವಿಹಾಳ | ೨೭ | ೮೦ | ೭೫ | ೧೮೨ |
| | | ಲಕ್ಷ್ಮೇಶ್ವರ | | | ಲಕ್ಷ್ಮೇಶ್ವರ | ೨೬ | ೭೭ | ೭೧ | ೧೭೪ |
| ೧೨ | ಗುಲಬರ್ಗಾ | | | | | ೪೪೫ | ೧೩೬೯ | ೧೨೬೧ | ೩೦೭೫ |
| | | ಅಫಜಲ್‌ಪುರ | | | ಅಫಜಲ್‌ಪುರ | ೧೬ | ೪೪ | ೪೦ | ೧೦೦ |
| | | ಚಿಂಚೋಳಿ | | | ಚಂದ್ರಪುರ | ೧೭ | ೫೭ | ೫೬ | ೧೩೦ |
| | | | | | ವಂಟಿಚಿಂತಾ | ೪೮ | ೧೪೮ | ೧೩೯ | ೩೩೫ |
| | | | | | ಸುತ್ತಿಪೇಟೆ | ೧೨ | ೩೧ | ೩೯ | ೮೨ |
| | | | | | ಬೆಡಗುಪಳ್ಳಿ | ೧೪ | ೪೩ | ೩೪ | ೯೧ |
| | | | | | ಕುಂಚವರ್ಮ | ೫೫ | ೧೬೧ | ೧೫೧ | ೩೬೭ |

| I | II | III | IV | V | VI | VII | VIII | IX | X |
|---|---|---|---|---|---|---|---|---|---|
| | | ಗುಲಬರ್ಗಾ | | | ಗುಲಬರ್ಗಾ ನಗರ | ೮೦ | ೨೩೬ | ೨೩೫ | ೫೫೧ |
| | | ಸೇಡಂ | | | ಸೇಡಂ | ೨೫ | ೬೪ | ೬೬ | ೧೫೫ |
| | | ಶಾಹಪುರ | | | ಶಾಹಪುರ | ೧೬ | ೪೭ | ೩೬ | ೯೯ |
| | | ಸುರುಪುರ | | | ಸುರುಪುರ | ೧೦೧ | ೩೬೭ | ೩೧೧ | ೭೭೯ |
| | | | | | ಮಳನೂರು | ೧೦ | ೧೨ | ೧೫ | ೩೭ |
| | | ಜೇವರ್ಗಿ | | | ಯಡ್ರಾಮಿ | ೨೧ | ೮೬ | ೬೫ | ೧೭೨ |
| | | ಯಾದಗಿರಿ | ಯಾದಗಿರಿ | ಯಾದಗಿರಿ | ಯಾದಗಿರಿ | ೩೦ | ೭೩ | ೭೪ | ೧೭೭ |
| ೧೩ | ಹಾಸನ | | | | | ೧೭೭ | ೪೪೫ | ೪೧೭ | ೧೦೩೯ |
| | | ಅರಕಲಗೂಡು | | ದೊಡ್ಡಮಗ್ಗೆ | ಶ್ರೀರಾಂಪುರ | ೯೭ | ೨೩೮ | ೨೨೭ | ೫೬೨ |
| | | ಚೆನ್ನರಾಯಪಟ್ಟಣ | | ಬರಗೂರು | ಶಿವರಾಂಪುರ | ೮೦ | ೨೦೭ | ೧೯೦ | ೪೭೭ |
| ೧೪ | ಹಾವೇರಿ | | | | | ೩೮ | ೯೧ | ೯೧ | ೨೨೦ |
| | | ರಾಣಿಬೆನ್ನೂರು | ತಿಮ್ಮನಹಟ್ಟಿ | ತಿಮ್ಮನಕಟ್ಟೆ | ತಿಮ್ಮನಕಟ್ಟೆ | ೨೧ | ೪೩ | ೫೦ | ೧೧೪ |
| | | ಹಾನಗಲ್ | ಹಾನಗಲ್ | ಹಾನಗಲ್ | ಹಾನಗಲ್ | ೧೭ | ೪೮ | ೪೧ | ೧೦೬ |

| I | II | III | IV | V | VI | VII | VIII | IX | X |
|---|---|---|---|---|---|---|---|---|---|
| ೧೫ | ಕೋಲಾರ | | | | | ೯೯೦ | ೨೦೭೩ | ೨೨೮೨ | ೫೩೪೫ |
| | | ಚಿಂತಾಮಣಿ | | | ಬಟ್ಲಹಳ್ಳಿ * | ೨೦ | ೫೬ | ೫೬ | ೧೩೨ |
| | | | | | ಅನೂರು | ೨೧೩ | ೫೦೦ | ೪೫೦ | ೧೧೭೩ |
| | | ಕೋಲಾರ | | | | ೧೬೧ | ೩೫೯ | ೩೩೧ | ೮೫೧ |
| | | | | | ಗಾಜಿನಹಳ್ಳಿ * | ೨೦ | ೫೬ | ೫೬ | ೧೩೨ |
| | | ಚಿಕ್ಕಬಳ್ಳಾಪುರ | | | ಜಡೆನ ಹಳ್ಳಿ * | ೧೪ | ೨೨ | ೨೨ | ೫೮ |
| | | | | | ಮಲಾಪಲ್ಲಿ * | ೧೫ | ೪೨ | ೪೨ | ೯೯ |
| | | ಗೌರಿಬಿದನೂರು | | ಕೊತ್ತೂರೂ | ಬೆಲ್ಲವರಹಳ್ಳಿ | ೭೩ | ೨೧೬ | ೨೦೦ | ೪೮೯ |
| | | ಶಿಡ್ಲಘಟ್ಟ | | | ಬೊಮ್ಮನಹಳ್ಳಿ | ೯೬ | ೨೨೭ | ೨೨೫ | ೫೪೮ |
| | | ಶ್ರೀನಿವಾಸಪುರ | | ತ್ಯಾಗೋತ | ಅರಿಕುಂಟೆ | ೨೫೮ | ೨೫೮ | ೫೬೦ | ೧೦೭೬ |
| | | | | | ಕತ್ರಿ ಗುಪ್ಪೆ * | ೧೨೦ | ೩೩೭ | ೩೪೦ | ೭೯೭ |
| ೧೬ | ಕೊಪ್ಪಳ | | | | | ೫೫೦ | ೧೧೭೧ | ೧೧೪೬ | ೨೮೬೭ |
| | | ಗಂಗಾವತಿ | | | ಸಿದ್ದಾಪುರ | ೧೪೮ | ೩೧೬ | ೩೦೮ | ೭೭೨ |
| | | | | ಸಿದ್ದಾಪುರ | ಮಲ್ಲಿಕಾರ್ಜುನ ನಗರ | ೧೮೦ | ೩೧೬ | ೩೦೮ | ೮೦೪ |
| | | | | ಗಂಗಾವತಿ | ಭಾಗ್ಯನಗರ | ೫೩ | ೧೩೧ | ೧೧೨ | ೨೯೬ |

| I | II | III | IV | V | VI | VII | VIII | IX | X |
|---|---|---|---|---|---|---|---|---|---|
| | | ಕುಷ್ಟಗಿ | | ಕುದುರೆಮೋತಿ | ಹಿರೆ ವಣಕಲಕುಂಟೆ | ೫೬ | ೧೪೪ | ೧೪೯ | ೩೪೯ |
| | | | | | ಕುಷ್ಟಗಿ ನಗರ | ೫೬ | ೧೨೫ | ೧೩೩ | ೩೧೪ |
| | | ಕೊಪ್ಪಳ | | | ಭಾಗ್ಯನಗರ | ೫೭ | ೧೩೯ | ೧೩೬ | ೩೩೨ |
| ೧೭ | ರಾಯಚೂರು | | | | | ೨೫೭ | ೬೩೮ | ೬೦೯ | ೧೫೦೪ |
| | | ರಾಯಚೂರು | | | ಉರಕುಂದ ಈರಣ್ಣ ನಗರ | ೨೪ | ೬೩ | ೬೨ | ೧೪೯ |
| | | | | ರಾಯಚೂರು | ಗಿಲೆ ಸುಗೂರು ಕ್ಯಾಂಪ್ | ೧೬ | ೩೯ | ೩೮ | ೯೩ |
| | | ಸಿಂಧನೂರು | | ಸಿಂಧನೂರು | ಎಚ್.ಎಲ್. ಕಾಲೋನಿ | ೪೨ | ೧೦೩ | ೯೭ | ೨೪೨ |
| | | ದೇವದುರ್ಗ | | ದೇವದುರ್ಗ | ದೇವದುರ್ಗ | ೭೨ | ೧೮೫ | ೧೭೩ | ೪೩೦ |
| | | ಮಾನ್ವಿ | | | ನವಲಿಕಲ್ | ೧೦೩ | ೨೪೮ | ೨೩೯ | ೫೯೦ |
| ೧೮ | ರಾಮನಗರ | | | | | ೨೩೩ | ೫೬೧ | ೫೩೭ | ೧೩೩೧ |
| | | ರಾಮನಗರ | | ಎಂ.ಎನ್. ಹಳ್ಳಿ | ಹೊಸದೊಡ್ಡಿ | ೧೬೯ | ೪೧೪ | ೩೯೪ | ೯೭೭ |
| | | | | ಬನ್ನಿಕೊಪ್ಪ | ಭೈರಾಗಿ ಕಾಲೋನಿ | ೬೪ | ೧೪೭ | ೧೪೩ | ೩೫೪ |
| | | | | | | ೨೩೩ | ೫೬೧ | ೫೩೭ | ೧೩೩೧ |

| I | II | III | IV | V | VI | VII | VIII | IX | X |
|---|---|---|---|---|---|---|---|---|---|
| ೧೯ | ಶಿವಮೊಗ್ಗ | | | | | ೨೨ | ೧೯ | ೩೨ | ೭೩ |
| | | ಭದ್ರಾವತಿ | | ಭದ್ರಾವತಿ | ಕೆ.ಆರ್. ಪುರ ಬಡಾವಣೆ | ೨ | ೪ | ೭ | ೧೩ |
| | | | | | ಭದ್ರಾವತಿ | ೨೦ | ೧೫ | ೨೫ | ೬೦ |
| ೨೦ | ತುಮಕೂರು | ಕುಣಿಗಲ | ನಿಡಸಲ್ | | ಶಿವರಾಂಪುರ | ೫೭ | ೧೬೨ | ೧೩೭ | ೨೯೯ |
| | | | | | ಒಟ್ಟಾರೆ ಜಿಲ್ಲಾವಾರು | ೪೯೩೫ | ೧೨೨೦೭ | ೧೧೯೨೫ | ೨೪೧೩೨ |

ಅಂಕಿಅಂಶಗಳು: ೨ ಕರ್ನಾಟಕ ಬೇಡ ಜಂಗಮ್, ಬುಡ್ಗ ಜಂಗಮರ ಜಿಲ್ಲಾವಾರು, ಲಿಂಗವಾರು ಜನಸಂಖ್ಯೆ (೧೯೯೧)

| ಕ್ರ.ಸಂ. | ಜಿಲ್ಲೆಗಳು | ಗ್ರಾಮೀಣ | | | ನಗರ | | | ಒಟ್ಟು | | |
|---|---|---|---|---|---|---|---|---|---|---|
| | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| I | II | III | IV | V | VI | VII | VIII | IX | X | XI |
| ೧ | ಬೆಂಗಳೂರು ಗ್ರಾಮೀಣ | ೯೪ | ೯೩ | ೧೮೭ | ೨ | ೩ | ೫ | ೯೬ | ೯೬ | ೧೯೨ |
| ೨ | ಬೆಂಗಳೂರು ನಗರ | ೨೧ | ೧೮ | ೩೯ | ೧೩೮ | ೧೩೮ | ೨೭೬ | ೧೫೯ | ೧೫೬ | ೩೧೫ |
| ೩ | ಬಳ್ಳಾರಿ | ೬೪೨೮ | ೬೧೦೮ | ೧೨೫೩೬ | ೩೧೭೪ | ೨೮೮೫ | ೬೦೫೯ | ೯೬೦೨ | ೮೯೯೩ | ೧೮೫೯೫ |
| ೪ | ಬೆಳಗಾವಿ | ೨೬೬ | ೧೯೬ | ೪೬೨ | ೩೦೧ | ೨೬೪ | ೫೬೫ | ೫೬೭ | ೪೬೦ | ೧೦೨೭ |
| ೫ | ಬೀದರ | ೬೮೯೬ | ೬೯೪೮ | ೧೩೮೪೪ | ೧೪೮೪ | ೧೩೮೧ | ೨೮೬೫ | ೮೩೮೦ | ೮೩೨೯ | ೧೬೭೦೯ |
| ೬ | ಬಿಜಾಪುರ | ೩೫೩೬ | ೩೩೫೮ | ೬೮೯೪ | ೩೧೫೧ | ೩೦೧೨ | ೬೧೬೩ | ೬೬೮೭ | ೬೩೭೦ | ೧೩೦೫೭ |
| ೭ | ಚಿಕ್ಕಮಗಳೂರು | ೨೬೭ | ೨೪೮ | ೫೧೫ | ೨೨ | ೧೫ | ೩೭ | ೨೮೯ | ೨೬೩ | ೫೫೨ |
| ೮ | ಚಿತ್ರದುರ್ಗ | ೪೯೦೨ | ೪೬೭೨ | ೯೫೭೪ | ೨೫೪೧ | ೨೨೯೯ | ೪೮೪೦ | ೭೪೪೩ | ೬೯೭೧ | ೧೪೪೧೪ |
| ೯ | ದಕ್ಷಿಣ ಕನ್ನಡ | ೧೧ | ೫ | ೧೬ | ೬ | ೫ | ೧೧ | ೧೭ | ೧೦ | ೨೭ |
| ೧೦ | ಧಾರವಾಡ | ೮೧೯೪ | ೭೫೬೯ | ೧೫೭೬೩ | ೨೬೩೭ | ೨೩೭೩ | ೫೦೧೦ | ೧೦೮೩೧ | ೯೯೪೨ | ೨೦೭೭೩ |

| I | II | III | IV | V | VI | VII | VIII | IX | X | XI |
|---|---|---|---|---|---|---|---|---|---|---|
| ೧೧ | ಗುಲಬರ್ಗಾ | ೪೦೯೭ | ೩೬೩೪ | ೭೭೩೦ | ೨೧೧೬ | ೧೭೮೨ | ೩೮೯೮ | ೬೨೧೨ | ೫೪೧೬ | ೧೧೬೨೮ |
| ೧೨ | ಹಾಸನ | ೧೦೭ | ೮೫ | ೧೯೨ | ೮ | ೯ | ೧೭ | ೧೧೫ | ೯೪ | ೨೦೯ |
| ೧೩ | ಕೊಡಗು | ೫೦ | ೫೮ | ೧೦೮ | ೪ | ೭ | ೧೧ | ೫೪ | ೬೫ | ೧೧೯ |
| ೧೪ | ಕೋಲಾರ | ೩೩೭ | ೩೦೯ | ೬೪೬ | ೫೧ | ೫೨ | ೧೦೩ | ೩೮೮ | ೩೬೧ | ೭೪೯ |
| ೧೫ | ಮಂಡ್ಯ | ೫೧ | ೪೫ | ೯೬ | ೧೫ | ೧೫ | ೩೦ | ೬೬ | ೬೦ | ೧೨೬ |
| ೧೬ | ಮೈಸೂರು | ೬ | ೩ | ೯ | ೬ | ೮ | ೧೪ | ೧೨ | ೧೧ | ೨೩ |
| ೧೭ | ರಾಯಚೂರು | ೫೯೧೪ | ೫೬೩೪ | ೧೧೫೪೮ | ೧೩೯೯ | ೧೨೨೨ | ೨೬೨೧ | ೭೩೧೩ | ೬೮೫೬ | ೧೪೧೬೯ |
| ೧೮ | ಶಿವಮೊಗ್ಗ | ೨೩೫೪ | ೨೨೩೭ | ೪೫೯೧ | ೪೪೭ | ೪೭೦ | ೯೧೭ | ೨೮೦೧ | ೨೭೦೭ | ೫೫೦೮ |
| ೧೯ | ತುಮಕೂರು | ೧೧೩೬ | ೧೧೪೦ | ೨೨೭೬ | ೧೪೨ | ೧೩೨ | ೨೭೪ | ೧೨೭೮ | ೧೨೭೨ | ೨೫೫೦ |
| ೨೦ | ಉತ್ತರ ಕನ್ನಡ | ೪೫ | ೪೧ | ೮೬ | ೧೦೬ | ೧೨೨ | ೨೨೮ | ೧೫೦ | ೧೬೩ | ೩೧೪ |
| | ಕರ್ನಾಟಕ ಒಟ್ಟು ಜನಸಂಖ್ಯೆ | ೪೪೭೧೧ | ೪೨೪೦೧ | ೮೭೧೧೨ | ೧೭೭೫೦ | ೧೬೧೯೪ | ೩೩೯೪೪ | ೬೨೪೬೧ | ೫೮೫೯೫ | ೧೨೧೦೫೬ |

## ಅಂಕಿಅಂಶಗಳು: ೩. ಕರ್ನಾಟಕ ಬೇಡ ಜಂಗಮ್, ಬುಡ್ಗ ಜಂಗಮರ ಜಿಲ್ಲಾವಾರು, ಲಿಂಗವಾರು ಜನಸಂಖ್ಯೆ (೨೦೦೧)

| ಸಂ. | ಜಿಲ್ಲೆಗಳು | ಒಟ್ಟು | ಗಂಡು | ಹೆಣ್ಣು |
|---|---|---|---|---|
| ೧ | ಬಾಗಲಕೋಟೆ * | ೩೪೪ | ೧೭೯ | ೧೬೫ |
| ೨ | ಬೆಂಗಳೂರು ಗ್ರಾಮೀಣ | ೧೩೮೪ | ೭೦೫ | ೬೭೯ |
| ೩ | ಬೆಂಗಳೂರು ನಗರ | ೧೧೪೩ | ೫೮೫ | ೫೫೮ |
| ೪ | ಬಳ್ಳಾರಿ | ೨೪೮೪ | ೧೩೧೮ | ೧೧೬೬ |
| ೫ | ಬೆಳಗಾವಿ | ೨೧೦೧ | ೧೦೫೩ | ೧೦೪೮ |
| ೬ | ಬೀದರ | ೭೬೭೭ | ೩೮೭೨ | ೩೮೦೫ |
| ೭ | ಬಿಜಾಪುರ | ೭೨೦ | ೩೮೨ | ೩೩೮ |
| ೮ | ಚಾಮರಾಜನಗರ * | ೧೦ | ೫ | ೫ |
| ೯ | ಚಿಕ್ಕಮಗಳೂರು | ೩೪೫೯ | ೧೭೬೪ | ೧೬೯೫ |
| ೧೦ | ಚಿತ್ರದುರ್ಗ | ೩೦೦೮ | ೧೫೨೯ | ೧೪೭೯ |
| ೧೧ | ದಕ್ಷಿಣ ಕನ್ನಡ | ೪೨ | ೨೦ | ೨೨ |
| ೧೨ | ದಾವಣಗೆರೆ * | ೭೩೫೨ | ೩೭೮೭ | ೩೫೬೫ |
| ೧೩ | ಧಾರವಾಡ | ೯೪೫ | ೫೦೦ | ೪೪೫ |
| ೧೪ | ಗದಗ * | ೪೫೭ | ೨೪೫ | ೨೧೨ |
| ೧೫ | ಗುಲಬರ್ಗಾ | ೧೪೮೯ | ೭೪೮ | ೭೪೧ |
| ೧೬ | ಹಾವೇರಿ * | ೨೫೬೦ | ೧೩೨೩ | ೧೨೩೭ |
| ೧೭ | ಹಾಸನ | ೪೭೮ | ೨೪೯ | ೨೨೯ |
| ೧೮ | ಕೊಡಗು | ೪ | ೩ | ೧ |
| ೧೯ | ಕೋಲಾರ | ೨೩೫೮ | ೧೧೭೯ | ೧೧೭೯ |
| ೨೦ | ಕೊಪ್ಪಳ * | ೪೧೫೯ | ೨೧೧೭ | ೨೦೪೨ |
| ೨೧ | ತುಮಕೂರು | ೨೨೩೮ | ೧೧೪೪ | ೧೦೯೪ |
| ೨೨ | ಮಂಡ್ಯ | ೭೯ | ೪೩ | ೩೬ |
| ೨೩ | ಮೈಸೂರು | ೨೮೩ | ೧೪೦ | ೧೪೩ |
| ೨೪ | ರಾಯಚೂರು | ೭೭೫೩ | ೩೮೫೮ | ೩೮೯೫ |
| ೨೫ | ಶಿವಮೊಗ್ಗ | ೨೧೪೨ | ೧೦೯೪ | ೧೦೪೮ |
| ೨೬ | ಉಡುಪಿ * | ೭ | ೪ | ೩ |
| ೨೭ | ಉತ್ತರ ಕನ್ನಡ | ೧೯೭ | ೧೧೨ | ೮೫ |
| | ಕರ್ನಾಟಕ ಒಟ್ಟು | ೫೪೮೭೩ | ೨೭೯೫೮ | ೨೬೯೧೫ |

## Annexure IV
## Beda Jangam, Budga Jangam Population Variation

### Andhra Pradesh

| Census year | Population | Variation | Percentage of Variation |
|---|---|---|---|
| 1901 | 3 | - | - |
| 1911 | N.A. | - | - |
| 1921 | 130 | - | - |
| 1931 | N.A. | - | - |
| 1941 | N.A. | - | - |
| 1951 | N.A. | - | - |
| 1961 | 1840 | - | - |
| 1971 | 1932 | +92 | +5.00 |
| 1981 | 12024 | +10092 | +522.36 |
| 1991 | 35345 | +23321 | +193.95 |
| 2001 | 73389 | 38044 | 107.64 |

### Karnataka

| Census year | Population | Variation | Percentage of Variation |
|---|---|---|---|
| 1901 | N.A. | - | - |
| 1911 | N.A. | - | - |
| 1921 | 923 | - | - |
| 1931 | N.A. | - | - |
| 1941 | N.A. | - | - |
| 1951 | N.A. | - | - |
| 1961 | 5141 | - | - |
| 1971 | 13676 | +8535 | +166.01 |
| 1981 | 3035 | -10641 | -77.80 |
| 1991 | N.A. | - | - |
| 2001 | 54873 | - | - |

## Annexure V
## Beda Jangam, Budga Jangam Population

| Cencus Year | T R U | Andhara Pradesh | | | Karnataka | | |
|---|---|---|---|---|---|---|---|
| | | P | M | F | P | M | F |
| **1961** | **T** | **1840** | **1015** | **825** | **514** | **393** | **2748** |
| | R | 1735 | 966 | 769 | 3511 | 1533 | 1978 |
| | U | 102 | 49 | 56 | 1630 | 860 | 770 |
| **1971** | **T** | **1932** | **613** | **1319** | **13676** | **6781** | **6895** |
| | R | 1820 | 528 | 1292 | 12099 | 6015 | 6084 |
| | U | 112 | 85 | 27 | 1577 | 766 | 811 |
| **1981** | **T** | **12024** | **6148** | **5876** | **3035** | **1553** | **1582** |
| | R | 8541 | 4357 | 4184 | 2386 | 1220 | 1166 |
| | U | 3483 | 1791 | 1692 | 649 | 333 | 316 |
| **1991** | **T** | **34,656** | **17,571** | **17.085** | **121,056** | **62.461** | **58,595** |
| | R | 25,932 | 13,190 | 12,742 | 87,112 | 44,711 | 42,401 |
| | U | 8,724 | 4381 | 4,343 | 33,944 | 17,750 | 16,194 |
| **2001** | **T** | **73,389** | **37,079** | **36,310** | **54,873** | **27,958** | **26,915** |
| | R | 56,981 | 28,816 | 28165 | 39682 | 20,142 | 19,540 |
| | U | 16,408 | 8263 | 8,145 | 15,191 | 7,816 | 7,375 |

## Annexure VI
## Beda Jangam, Budga Jangam Educational Status

| Educational level | Andhra Pradesh | | Karnataka | |
|---|---|---|---|---|
| | M | F | M | F |
| **1961 Cencus** | | | | |
| 1. Illiterate | 879 | 820 | 2056 | 2732 |
| 2.Literate (Withou ed) | 119 | 4 | 200 | 12 |
| 3.Metriculation and Below | 17 | 1 | 137 | 4 |
| 4. Above Matriculation | - | - | - | - |
| **1971 Census** | | | | |
| 1. Illiterate | 520 | 1252 | 5847 | 6728 |
| 2.Literate (Withou ed) | 82 | 39 | 499 | 129 |
| 3.Metriculation and Below | 11 | 28 | 435 | 38 |
| 4. Above Matriculation | - | - | - | - |
| **1981 Census** | | | | |
| 1. Illiterate | 4367 | 5428 | 975 | 1227 |
| 2.Literate (Withou ed) | 703 | 159 | 139 | 77 |
| 3.Metriculation and Below | 1038 | 289 | 410 | 177 |
| 4. Above Matriculation | 40 | - | 20 | 10 |

| | | | | |
|---|---|---|---|---|
| **1991 Census** | | | | |
| 1. Illiterate | 12795 | 15711 | 16166 | 29186 |
| 2.Literate (Withou ed) | 2219 | 615 | 7770 | 7056 |
| 3.Metriculation and Below | 2180 | 6732 | 9336 | 19657 |
| 4. Above Matriculation | 377 | 86 | 9189 | 2696 |
| **2001 Census** | | | | |
| 1. Illiterate | 21686 | 30090 | 7060 | 12139 |
| 2.Literate (Withou ed) | 776 | 448 | 360 | 240 |
| 3.Metriculation and Below | 13714 | 5552 | 15628 | 12563 |
| 4. Above Matriculation | 902 | 220 | 4910 | 1973 |

## ಮಾಹಿತಿದಾರರ ಸೂಚಿ

| ಸಂ. | ಹೆಸರು | ವಯಸ್ಸು | ವಿಳಾಸ |
|---|---|---|---|
| ೦೧. | ಆಲೇಟಿ ಲಕ್ಷ್ಮಯ | ೮೫ | ರಾಮಮೂರ್ತಿ ನಗರ<br>ಮೈತ್ರಿ ವಿಧ್ಯನಿಕೇತನ<br>ಸ್ಕೂಲು ಹತ್ತಿರ ಕಾಲೋನಿ,<br>ಮುಖ್ಯರಸ್ತೆ, ಬೃಹ್ಮತ್<br>ಬೆಂಗಳೂರು ನಗರ ಜಿಲ್ಲೆ. |
| ೦೨. | ಶೇಷಪ್ಪ ಅಂದೋಳು | ೫೨ | ಹೊಸ ದೊಡ್ಡಿ, ಬಿಡಿದಿ ಹೋಬಳಿ<br>ರಾಮನಗರ, ರಾಮನಗರ ಜಿಲ್ಲೆ |
| ೦೩. | ವಿ. ಶ್ರೀನಿವಾಸ | ೪೭ | ವೆಂಕಟಾಪುರ ೭೨<br>ವೆಂಕಟಾಪುರ ಕ್ಯಾಂಪ್<br>ಹೊಸಪೇಟೆ ತಾ. ಬಳ್ಳಾರಿ ಜಿ. |
| ೦೪. | ಗಂಗಿರೆಡ್ಡಿ | ೪೬ | ಮ.ನಂ. ೧೮, ೧೫ನೇ<br>ಅಡ್ಡರಸ್ತೆ ತಳಕೇರಿ ಮೇಲಿನ<br>ರಸ್ತೆ ಸರ್. ಎಂ.ವಿ. ನಗರ<br>೨ ನೇ ಹಂತ ರಾಮಮೂರ್ತಿ<br>ನಗರ ಬೆಂಗಳೂರು ೧೬. |
| ೦೫. | ಕೆ. ಲಕ್ಕಪ್ಪ<br>ಲೆಕ್ಕ ಪರಿಶೀಲನಾಧಿಕಾರಿಗಳು | ೪೨ | ಹೊಸದೊಡ್ಡಿ ರಾಮನಗರ<br>ತಾ-ಜಿಲ್ಲೆ. |
| ೦೬. | ವಿ.ಶರಣಪ್ಪ<br>(ಕಿರಿಯ ತರಬೇತಿ ಅಧಿಕಾರಿ) | ೩೧ | ಸೋಮಲಾಪುರ ಗ್ರಾ.<br>ದೇವಲಾಪುರ ಪೋ.<br>ಹೊಸಪೇಟೆ ತಾ. ಬಳ್ಳಾರಿ ಜಿ. |
| ೦೭. | ಸಣ್ಣ ಮಾರೆಪ್ಪ | ೪೨ | ಬುಡ್ಗ ಜಂಗಮ್ ಕಾಲೋನಿ<br>ಹೊಸಪೇಟೆ, ಬಳ್ಳಾರಿ ಜಿಲ್ಲೆ. |
| ೦೮. | ಕೊತ್ತೂರು ಜಿ. ಮಂಜುನಾಥ | ೩೦ | ಮುಳುಬಾಗಿಲು ಕೋಲಾರ ಜಿಲ್ಲೆ. |
| ೦೯. | ತಾಟಿಕೊಂಡ ನಾರಾಯಣ | | ಎಮ್ಮಿಗನೂರು<br>ಕರ್ನೂಲು, ಆಂಧ್ರ ಪ್ರದೇಶ. |

| ಸಂ. | ಹೆಸರು | ವಯಸ್ಸು | ವಿಳಾಸ |
|---|---|---|---|
| ೧೦. | ಕೊಂಡಹಳ್ಳಿ ಮುನಿಯಪ್ಪ ಕೆ.ಎಸ್. | ೫೪ | ಕೊಂಡಿಹಳ್ಳಿ, ಬಂಗಾರು ತಿರುಪತಿ, ಅಂಚೆ ಮುಳಬಾಗಿಲು ತಾಲೂಕು ಕೋಲಾರ ಜಿಲ್ಲೆ |
| ೧೧ | ಬಿ. ವೆಂಕಟರಾಮು, ಪ್ರೊ | ೪೨ | ೮೨೨ ಪಾರ್ವತ ನಿಲಯ ಆದರ್ಶ ಕಾಲೇಜು ಮುಂಭಾಗ ಪೇಟೆ ಬೀನಹಳ್ಳಿ ಕೋಲಾರ. |
| ೧೨. | ಬಂಡೆತ್ತರೆ ಮುನಿಸ್ವಾಮಿ | ೬೫ | ಆನೇ ಕ್ರಾಸ್ ಕಾರಂಜಿ ಕಟ್ಟೆ ಕೆಳಗೆ ಕೋಲಾರ ನಗರ, ಕೋಲಾರ. |
| ೧೩. | ತೇರು ಗಂಗಾರಾಮಯ್ಯ, | ೭೦ | ವೀರಾಂಜನೇಯ ನಗರ, ಶ್ರೀನಿವಾಸಪುರ ಸರ್ಕಲ್ ಕೋಲಾರ ಟೌನ್, ಕೋಲಾರ. |
| ೧೪. | ಜಿ.ನಾರಾಯಮ ಸ್ವಾಮಿ, | ೫೦ | ಮದನ ಹಳ್ಳಿ, ಕೋಲಾರ ತಾಲೂಕು ಕೋಲಾರ ಜಿಲ್ಲೆ. |
| ೧೫. | ತೇರೋಳ್ಳು ರಾಮಪ್ಪ, | ೫೪ | ಕೊರಮಂಗಲ ಎಂಬನಹಳ್ಳಿ (ಪೋಸ್ಟ್) ಮುಳಬಾಗಿಲು ತಾಲೂಕು ಕೋಲಾರ ಜಿಲ್ಲೆ |
| ೧೬. | ಬೈರಪ್ಪ ತಿರು ಬಾತಮೋಳ್ಳು | ೬೫ | ಮೇಲೇರಿ ಮುಳಬಾಗಿಲಿ ಕೋಲಾರ ಜಿಲ್ಲೆ. |
| ೧೭. | ಕರ್ನೊಳ್ಳು ವೆಂಕಟೇಶಪ್ಪ | ೫೨ | ಲಕ್ಷ್ಮೀ ಸಾಗರ ಟೇಕಲ್ ಹೋಬಳಿ ಮಾಲೂರಂ ತಾಲೂಕು ಕೋಲಾರ ಜಿಲ್ಲೆ. |
| ೧೮. | ಪಾಲಿಂಕೊಳ್ಳು ವೆಂಕಟೇಶ್ | ३५ | ಟಾಕಲ್ ಹೋಬಳಿ ಮಾಲೂರು ತಾ. ಕೋಲಾರ ಜಿಲ್ಲೆ. |
| ೧೯. | ಗಂಗಪತಿ ಶಿವಲಿಂಗ | ೫೫ | ಅರಿಕುಂಟೆ ಶ್ರೀನಿವಾಸಪುರ ತಾಲೂಕು. |
| ೨೦. | ಗಂಗಾಧಾರ ಶಿವಲಿಂಗ | ೪೫ | ಕತ್ತಿ ಗುಡ್ಡಿ ಚಿಂತಾಮಣಿ ತಾಲೂಕು. |
| ೨೧. | ಮುನಿ ನಾರಾಯಣಪ್ಪ ತಿರುಪತೋಳ್ಳು | ೭೫ | ಚಿಂತಾಮಣಿ ತಾಲೂಕು. |

| ಸಂ. | ಹೆಸರು | ವಯಸ್ಸು | ವಿಳಾಸ |
|---|---|---|---|
| ೨೨. | ಎಂ.ಸಿ. ಗಣಪತಿ | ೪೬ | ಬುಡ್ಗ ಜಂಗಮ್ ಕಾಲೋನಿ, ದೇವನಗೊಂಬಿ ಆಂಚೆ ಮೊಡಹಳ್ಳಿ, ಹೊಸ ಕೋಟೆ ಬೆಂಗಳೂರು ಗ್ರಾಮಾಂತರ ಜಿಲ್ಲೆ . |
| ೨೩. | ರಾಮಯ್ಯ ಬಂಡೆತ್ರರೋಳ್ಳು | ೪೦ | ನಂದಗುಡಿ ಕಾಲೋನಿ ಹೊಸಕೋಟೆ ತಾ. ಬೆಂಗಳೂರು ಗ್ರಾಮಾಂತರ ಜಿಲ್ಲೆ. |
| ೨೪. | ಆರ್. ಗಂಗಾಧರ | ೫೫ | ಹೊಸದೊಡ್ಡಿ ಬಿಡಿದಿ ಹೊಬಳಿ. ರಾಮನಗರ ತಾ. ಜಿ. |
| ೨೫. | ಬಿ. ನಾಗರಾಜ | ೬೦ | ಹೊಸದೊಡ್ಡಿ ಬಿಡಿದಿ ಹೊಬಳಿ. ರಾಮನಗರ ತಾ. ಜಿ. |
| ೨೬. | ಚಿನ್ನಪ್ಪ | ೮೩ | ಹೊಸದೊಡ್ಡಿ ಬಿಡಿದಿ ಹೊಬಳಿ. ರಾಮನಗರ ತಾ. ಜಿ. |
| ೨೭. | ವೆಂಕಟೇಶ | ೫೦ | ಹೊಸದೊಡ್ಡಿ ಬಿಡಿದಿ ಹೊಬಳಿ. ರಾಮನಗರ ತಾ. ಜಿ. |
| ೨೮. | ವಿ. ರಾಮುಡು ಎಲ್.ಐ.ಸಿ. ಎಜೆಂಟ್ | ೩೨ | ಹಳೇ ದರೋಜಿ ಸಂಡೂರು ತಾ.ಬಳ್ಳಾರಿ ಜಿ. |
| ೨೯. | ಅಶ್ವಿ ಜಂಭಣ್ಣ ನ್ಯಾಯಧೀಶ | ೬೦ | ಗಂಗಾವತಿ, ಕೊಪ್ಪಳ ಜಿ. |
| ೩೦. | ಶಿವರಾಜ | ೨೬ | ಮೂಳೆಗಡ್ಡೆ, ದೇವದುರ್ಗ, ರಾಯಚೊರು ಜಿಲ್ಲೆ. |
| ೩೧. | ಯಮನಪ್ಪ ಸಂಕುಲ | ೩೦ | ಯಾದಗಿರಿ, ಗುಲ್ಬರ್ಗಾ ಜಿ. |
| ೩೨. | ಭರತ ಹ. ಬಹುರೂಪಿ. | ೨೮ | ಸಂಕೊನಟ್ಟಿ ಅಥಣಿ ತಾ. ಬೆಳಗಾಂ ಜಿ. |
| ೩೩. | ಪರಶುರಾಮ ಕೊಂಡೂರು | ೨೫ | ಕಲಬುರ್ಗಿ ಬೆಳಗಾಂ ಜಿ. |
| ೩೪. | ಸಿ. ನಾಗರಾಜ | ೫೨ | ಮ.ನಂ. ೬೭ ಅಕ್ಷಯನಗರ ಅನೇ ಅಡ್ಡರಸ್ತೆ, ರಾಮಮೂರ್ತಿ ನಗರ ಬೆಂಗಳೂರು ೧೬. |

| ಸಂ. | ಹೆಸರು | ವಯಸ್ಸು | ವಿಳಾಸ |
|---|---|---|---|
| ೩೫. | ವೈ. ಆನಂದಕುಮಾರ | ೫೦ | ಮ.ನಂ. ೮೫೦ ನಂ.೯ ೧ನೇ<br>ಅಡ್ಡರಸ್ತೆ ಎನ್.ಆರ್.ಐ.<br>ಲೇಔಟ್ ರಾಮಮೂರ್ತಿ,<br>ಬೆಂಗಳೂರು ೧೬ |
| ೩೬. | ಕಡಮಂಚಿ ಜಿ. ರವಿಕುಮಾರ | ೩೦ | ೩ ನೇ ಮುಖ್ಯರಸ್ತೆ,<br>ರಾಮಮೂರ್ತಿ ನಗರ<br>ಬೆಂಗಳೂರು ೧೬. |
| ೩೭. | ಕೃಷ್ಣಪ್ಪ ಗಂಗಾರಾಮಯ್ಯ (ಎಂ.ಬಿಎಡ್) | ೨೫ | ಮೇಡಹಳ್ಳಿ, ಬುಡ್ಗ<br>ಜಂಗಮ್ ಕಾಲೋನಿ,<br>ದೇವನಗೊಂದಿ ಅಂಚೆ.<br>ಹೊಸಕೋಟೆ ತಾ.<br>ಬೆಂಗಳೂರು ಗ್ರಾ.ಜಿಲ್ಲೆ ಬೆ.೬೭ |
| ೩೮. | ಕೆ. ಸುರೇಶ್ ರುದ್ರಾಕ್ಷಿ ಷಡ್ಡಗಿಡ್ಡಯ್ಯ | ೩೦ | ರಾಜೇಶ್ವರಿ ನಗರ,<br>ಅಗ್ನಿಶಾಮಕ ದಳದ<br>ಹಿಂಬಾಗ ೩೪ನೇ ವಾರ್ಡ್<br>ಬಳ್ಳಾರಿ. |
| ೩೯. | ಹೆಚ್.ಎಲ್. ನಾರಾಯಣ | ೫೨ | ಅಂಚೆ ವಿಳಾಸ<br>ರಾಮಮೂರ್ತಿ ನಗರ<br>ಮೈತ್ರಿ ವಿಧ್ಯೆನಿಕೇತನ<br>ತ್ಕುಲು ಹತ್ತಿರ ಕಾಲೋನಿ,<br>ಮುಖ್ಯರಸ್ತೆ, ಬೃಹ್ಮತ್<br>ಬೆಂಗಳೂರು ನಗರ ಜಿಲ್ಲೆ. |
| ೪೦. | ಆರ್. ಗಂಗಾಧರ | ೫೨ | ,, |
| ೪೧. | ಹೆಚ್.ಎಮ್. ಗೋವಿಂದಯ್ಯ | ೪೯ | ,, |
| ೪೨. | ಎಸ್.ಸಿ. ಬೋರಯ್ಯ | ೪೨ | ಶಿವರಾಮಪುರ ಕುನಿಗಲ್<br>ತಾ. ತುಮಕೂರು ಜಿಲ್ಲೆ. |
| ೪೩. | ಹೆಚ್.ಕೆ. ಲಕ್ಕಪ್ಪ | ೪೨ | ಮೈಸೂರು ಕುವೆಂಪು ನಗರ. |
| ೪೪. | ಹೆಚ್.ಆರ್.ಮೂರ್ತಿ | ೪೨ | ಹೊಸದೊಡ್ಡಿ ರಾಮನಗರ ತಾ-ಜಿ. |
| ೪೫. | ಎಸ್. ನಾಗರಾಜ | ೪೮ | ಶಿವಪುರ ಚೆನ್ನರಾಯ ಪಟ್ಟಣ<br>ಹಾಸನ ಜಿಲ್ಲೆ. |

| ಸಂ. | ಹೆಸರು | ವಯಸ್ಸು | ವಿಳಾಸ |
|---|---|---|---|
| ೪೬. | ಸಿ. ಮುನಿರಾಜು | ೪೨ | ರಾಮಮೂರ್ತಿ ನಗರ ಬೆಂಗಳೂರು ಮಹಾನಗರ ಪಾಲಿಕೆ. |
| ೪೭. | ವಿ. ವೆಂಕಟರಮಣ | ೪೮ | ಯಲಹಂಕ ಬೆಂಗಳೂರು. |
| ೪೮. | ಎನ್. ಪ್ರಭಾಕರ | ೪೪ | ಪೀಣ್ಯ, ಬೆಂಗಳೂರು. |
| ೪೯. | ಅನಂತಕುಮಾರ | ೫೨ | ಸಿಂಗರಹಳ್ಳಿ, ಬೆಂಗಳೂರು ಗ್ರಾ.ಜಿ. |
| ೫೦. | ಹನುಮಂತರಾಯಪ್ಪ | ೪೬ | ಯಲಹಂಕ, ಬೆಂಗಳೂರು ಮಹಾನಗರ ಪಾಲಿಕೆ. |
| ೫೧. | ಕೆ. ಗಂಗಾಧರ | ೪೯ | ಪೋಳಿದೊಡ್ಡಿ, ಚೆನ್ನಪಟ್ಟಣ ತಾ. ರಾಮನಗರ ಜಿಲ್ಲೆ. |
| ೫೨. | ಯಮನಪ್ಪ ರೇವಲ್ಲಿ | ೨೮ | ಶಹಾಪುರು ಗಡ್ಡ |
| ೫೩. | ಮಾರುತಿ. ವೈ | ೨೬ | ಯಾಧಗಿರಿ, ಗುಲ್ಬರ್ಗಾ |
| ೫೪. | ಈರಣ್ಣಾ ರುದ್ರಾಕ್ಷೀ | ೪೯ | ದೇವದುರ್ಗ |
| ೫೫. | ಶಿವಣ್ಣಾ ಎ | ೬೪ | ದೇವದುರ್ಗ |
| ೫೬. | ಅಮರೇಶ | ೬೦ | ಶಿರವಾರ |
| ೫೭. | ಮಾರುತಿ | ೨೬ | ಚಿತ್ತಾಪುರು |
| ೫೮. | ನಾಗರಾಜ ಕಲ್ಕಣಿಂ | ೪೯ | ಕೊಪ್ಪಳ |
| ೫೯. | ಲಾಲಪ್ಪ ಮೋತೆ | ೫೯ | ಹರಪನಹಳ್ಳಿ |
| ೬೦. | ಅಮರೇಶ | ೨೯ | ಮಾನವಿ |
| ೬೧. | ಬಸವರಾಜ ವಿಬೂತಿ | ೩೯ | ರಾಯಚೂರು |
| ೬೨. | ಶಿವರಾಜ | ೨೨ | ದೇವದುರ್ಗ |
| ೬೩. | ಜಂಬಣ್ಣಾ ಬಳ್ಳಾರಿ | ೩೦ | ಗುಡಾರ ನಗರ, ಬಳ್ಳಾರಿ |
| ೬೪. | ಶಂಕರ ಅಂಬಣ್ಣಾಯಡವಲಿ | ೨೫ | ಹಳೆಕೋಟೆ, ಶಿರಗುಪ್ಪ |
| ೬೫. | ರಾಮಚಂದ್ರಶಂಕರಬಹುರೂಪಿ | ೪೯ | ಕಣಬುರ್ಗಿ, ಆಶ್ರಯ ಕಾಲೋನಿ, ಬೆಳಗಾವಿ |
| ೬೬. | ಮಾರುತಿ ಕೊಂಡೂರು | ೩೦ | ಇಂದಿರಾ ನಗರ, ಬೈಲಹೊಂಗಲ್, ಬೆಳಗಾವಿ |
| ೬೭. | ರಮೇಶ್ ಸಂಕುಲ | ೩೦ | ಇಂದಿರಾ ನಗರ, ಬೈಲಹೊಂಗಲ್, ಬೆಳಗಾವಿ |
| ೬೮. | ಚಂದ್ರಶೇಖರ ಮಹಂತ | ೩೫ | ನೂಲ್ವಿ, ಹುಬ್ಬಳ್ಳಿ |
| ೬೯. | ಚಂದ್ರಶೇಖರ ಜಿ.ಮಹಂತ | ೪೦ | ಭದ್ರಾವತಿ, ಶಿವಮೊಗ್ಗ |

## ಪರಾಮರ್ಶನ ಸೂಚಿ


### ಕನ್ನಡ

ಕಂಬಾರ, ಚಂದ್ರಶೇಖರ., *ಕನ್ನಡ ಜಾನಪದ ವಿಶ್ವಕೋಶ* (ಬೆಂಗಳೂರು: ಕನ್ನಡ ಸಾಹಿತ್ಯ ಪರಿಷತ್ತು, ೧೯೮೫) ಸಂಪುಟ ೧, ೨

ಕಟ್ಟೀ, ವೆಂಕಟರಂಗೋ(ಅನು)., *ಗ್ಯಾಝೆಟೀಯರು ಮುಂಬಯೀ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು: ಧಾರವಾಡ ಬೆಳಗಾವಿ ವಿಜಾಪುರ ಕಾನಡಾ ಈ ನಾಲ್ಕು ಜಿಲ್ಲೆಗಳದ್ದು* (ಮುಂಬಯಿ: ಗವರ್ನಮೆಂತ ಸೆಂತ್ರಲ್ ಬುಕ್ ಡಿಪೋ, ೧೮೯೩; ಪುನರ್ ಮುದ್ರಣ. ೧೯೮೪, ಹೊಸ ದೆಹಲಿ: ಏಷಿಯನ್ ಎಜುಕೇಷನಲ್ ಸರ್ವೀಸೆಸ್).

ಕಾಳಗಿ, ಸಾರಿಕಾದೇವಿ ಎಲ್., ಬುರ್ರಕಥಾ ಈರಮ್ಮ: ಒಂದು ಅಧ್ಯಯನ (ಅಪ್ರಕಟಿತ ಪಿಎಚ್ ಡಿ ಮಹಾಪ್ರಬಂಧ), ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫

ಚಿದಾನಂದಮೂರ್ತಿ, ಎಂ., *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ* (ಮೈಸೂರು: ಮೈಸೂರು ವಿಶ್ವವಿದ್ಯಾಲಯ, ೧೯೬೬)

......., *ಸಂಶೋಧನ ತರಂಗ* (ಬೆಂಗಳೂರು: ವಿಶ್ವವಿದ್ಯಾಲಯ, ಬೆಂಗಳೂರು, ೧೯೬೦)

......., *ಗ್ರಾಮೀಣ* (ಬೆಂಗಳೂರು: ಬೆಂಗಳೂರು ವಿಶ್ವವಿದ್ಯಾಲಯ, ೧೯೬೬)

ನಾಗರಾಜಯ್ಯ, ಹಂ ಪ (ಸಂ)., *ಜನಪದ ಕಲಾವಿದರ ಸೂಚಿ* (ಬೆಂಗಳೂರು: ಕನ್ನಡ ಸಾಹಿತ್ಯ ಪರಿಷತ್ತು, ೧೯೮೨).

ನಾಯಕ, ಹಾ ಮಾ (ಪ್ರಸಂ)., *ಕನ್ನಡ ವಿಶ್ವಕೋಶ* (ಮೈಸೂರು:ಮೈಸೂರು ವಿಶ್ವವಿದ್ಯಾಲಯ, ೧೯೭೨) ಸಂಪುಟ ೪, ಸಂಪುಟ ೧೧, ೧೯೮೩

ಪರಮಶಿವಯ್ಯ, ಜೀ ಶಂ., *ದಕ್ಷಿಣ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು* (ಮೈಸೂರು: ಮೈಸೂರು ವಿಶ್ವವಿದ್ಯಾಲಯ, ೧೯೭೯)

ಪ್ರಶಾಂತ, ಎಚ್ ಡಿ (ಸಂ)., *ಜನಸಮುದಾಯ ಸಂಪುಟ* (ಹಂಪಿ: ಕನ್ನಡ ವಿಶ್ವವಿದ್ಯಾಲಯ, ೨೦೦೦).

ಬೋರಲಿಂಗಯ್ಯ, ಹಿ ಚಿ (ಸಂ)., *ಕರ್ನಾಟಕ ಜನಪದ ಕಲೆಗಳ ಕೋಶ* (ಹಂಪಿ: ಕನ್ನಡ ವಿಶ್ವವಿದ್ಯಾಲಯ, ೧೯೯೬).

ಮೇತ್ರಿ, ಕೆ ಎಂ., *ಬುಡಕಟ್ಟು ಕುಲಕಸುಬುಗಳು* (ಹಂಪಿ: ಕನ್ನಡ ವಿಶ್ವವಿದ್ಯಾಲಯ, ೨೦೦೨).

ಮೇತ್ರಿ ,ಕೆ ಎಂ, ಪ್ರತಾಪ ಬಹುರೂಪಿ (ಸಂ) *ಬುಡ್ಗ ಜಂಗಮರು* (ಹೊಸಪೇಟೆ: ಕರ್ನಾಟಕ ಬುಡ್ಗ ಜಂಗಮ ಸಂಘ, ೨೦೦೫)

ರಾಜೂರ, ವೀರಣ್ಣ (ಸಂ)., *ಸಮಗ್ರ ವಚನ* (ಬೆಂಗಳೂರು: ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೧೯೯೩), *ಸಂಪುಟ* ೧೦, ೧೪

ರೈ, ಎ ಸುಬ್ಬಣ್ಣ...(ಸಂ)., *ದ್ರಾವಿಡ ನಿಘಂಟು* (ಹಂಪಿ: ಕನ್ನಡ ವಿಶ್ವವಿದ್ಯಾಲಯ, ೨೦೦೧).

ಹಂಪ, ನಾಗರಾಜಯ್ಯ., *ದ್ರಾವಿಡಭಾಷಾವಿಜ್ಞಾನ* (ಬೆಂಗಳೂರು: ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೧೯೯೧).

ಯಳನಾಡು, ಅಂಜನಪ್ಪ., *ಹಗಲು ವೇಷದವರ ಸಂಸ್ಕೃತಿ* (ಬೆಂಗಳೂರು: ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೯೩).

ಲಕ್ಕಪ್ಪಗೌಡ, ಎಚ್ ಜೆ (ಪ್ರಸಂ)., *ಕರ್ನಾಟಕ ಬುಡಕಟ್ಟುಗಳು* (ಬೆಂಗಳೂರು: ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ೧೯೯೮) *ಸಂ.೧* ಸಂಪುಟ ೨, ೨೦೦೦

ವೆಂಕನಗೌಡ, ಎಂ., ಬಳ್ಳಾರಿ ಮತ್ತು ಆಂಧ್ರ ಗಡಿಭಾಗದ ಹಗಲು ವೇಷಗಾರರು: ಒಂದು ಅಧ್ಯಯನ (ಅಪ್ರಕಟಿತ ಪಿಎಚ್ ಡಿ ಮಹಾಪ್ರಬಂಧ), ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

ಶ್ರೀಕಂಠ ಕೂಡಿಗೆ., *ಕೊಂಡಮಾಮ* (ಬೆಂಗಳೂರು: ಐಬಿಎಚ್ ಪ್ರಕಾಶನ, ೧೯೮೮)

ಹೊಸಮನಿ, ಬಿ ಎಂ., ಕರ್ನಾಟಕದ ವೇಷಗಾರರು: ಒಂದು ಸಾಂಸ್ಕೃತಿಕ ಅಧ್ಯಯನ (ಅಪ್ರಕಟಿತ ಪಿಎಚ್ ಡಿ ಮಹಾಪ್ರಬಂಧ), ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೩

ತೆಲುಗು

ವೆಂಕಟೇಶಂ, ಎನ್ ಆರ್., *ಬುಡ್ಗ ಜಂಗಮ್ ದರ್ಶಿನಿ* (ಹೈದರಾಬಾದ : ಬುಡ್ಗ ಜಂಗಮ್ ಕುಲ ವಿಜ್ಞಾನ  ಪರಿಶೋಧನ ವೇದಿಕೆ, ೨೦೦೨)

## English

Ananthakrishna Iyer, L K., *The Mysore Tribes and Castes* (Mysore: The Mysore University, 1930; rpt. 1998, New Delhi: Mittal Publications), 5 Vols.

Bose, Nirmal Kuma ., *Tribal life in India* (New Delhi: National book Trust, 1970).

*Brochure on Reservation for Scheduled Castes, Scheduled Tribes and other Categories of Backward Classes in Services and Posts* (Bangalore: Government Press, 1987).

*Brochure on Reservation and Concessions for Scheduled Castes, Scheduled Tribes and other Backward Classes...*(New Delhi: A Nabhi Publications, 2004).

Devy, G N (Chairman)., Technical Advisory Group on Denotified Nomadic and Semi-nomadic Tribes Report, 2006 (New Delhi: Ministry of Social Justice and Empowerment, Government of India).

Enthoven, R E., *The Tribes and Castes of Bombay* (Bombay: Government Central Press,1922; rpt. 1975, Delhi: Cosmo Publications) 3 Vols.

Eustace J Kitts, *A Compendium of the Castes and Tribes found in India: Census of India 1881* (Byculla: Education Sociey Press,1885; rpt.1982, Gurgaon: The Academic Press, Gurgaon).

Hassan, S S., *The Castes and Tribes of H E H Nizam's Dominions* (Bombay: Government Central Press, 1920; rpt. 1989, New Delhi: Asian Educational Services).

Havanur, L G (Chairman)., *Karnataka Backward Classes Commission Report* (Bangalore: Government Press, 1975 ), 5 Vols.

Kittel, F Rev., *Kannada- English Dictionary* Basel Mission book and Tract Depository, 1894

Majumdar, Dhirenderanath ., *The Affairs of a Tribe: A Study in Tribal Dynamics* (Lucknow: University Publications, 1950).

Misra, P K, Rajalakshmi, C R, Verghese, I., *Nomads in the Mysore City* (Calcutta: Anthropological Survey of India, 1971).

Nagan Gowda, R (Chairman)., *Mysore Backward Classes Committee Report* (Bangalore: Government Press, 1979).

Nanjundayya, H V., *The Ethnographic Survey of Mysore* (Bangalore: Government Press, 1906).

Ravivarma Kumar (Chairman)., *The Karnataka State Commission for Backward Classes Special Report -2000* (Bangalore: Government Press, 2000).

Reddy, O Chinnappa (Chairman).,Report of the Karnataka Third Backward Classes Commission (Bangalore: Government Press, 1990), 2 Vols.

Risley, H H.,*The Caste and Tribes of Bengal* (Calcutta: Bengal Secretariat Press, 1891; rpt.1981, Calcutta: Firma Mukhopadhyay), vols

Russell, R V and Hiralal, *The Tribes and Castes of the Central Provinces of India* (London: Macmillan and Co., 1916; rpt. 1975, New Delhi:Cosmo Publications), vols

Shashi, S S., *The World of Nomads*(New Delhi: Lotus Press, 2006).

Sherring, M A., *Hindu Tribes and Castes* (New Delhi: Cosmo Publications, 1987).

Simha, R N., *Scheduled Castes and Scheduled Tribes Prohibition of Transfer of Certain lands) Act & Rules in Karnataka* (Bangalore : Sree Ambika Book House, Vijayanagara, 1999).

Singh, K S., *The Scheduled Castes* (Delhi: Oxford University, Press,1993) People of Inida National Series, vol. 2

........., *The Scheduled Tribes* (Delhi: Oxford University, Press,1994) People of Inida National Series, vol. 3

........., *India's Communities* (Delhi: Oxford University, Press,1998) People of Inida National Series, vol.4-6.

........ (General Editor)., *People of India : Karnataka* (New Delhi: Anthropological Survey of India, 2003) Volume XXVI.

*The Annual Administration Report on the Working of the Criminal Tribes Act in the Bombay Presidency Part - I* (Bombay: Govt. Central Press, 1936)

*The New Encyclopaedia Britannica* (The University of Chicago, 1992)

Thurrston, E., *Ethnographic Notes on Southern India* (Madrss: Government Press, 1906).

..........., *Castes and Tribes of Southern India* (Madrss: Government Press, 1909; rpt. 1975, Delhi: Cosmo Publications) 7 vols.

Venkataswamy, T (Chairman).,Report of the Karnataka Second Backward Classes Commission (Bangalore: Government Press, 1986), 3 Vols.



ಬುಡ್ಗ ಜಂಗಮರ ಡೇರೆಗಳು



ಗುರು ಪರಂಪರೆಯ ರುದ್ರಾಕ್ಷಿ ಶಂಖು ಜಂಗಮ



ಬುಡ್ಗ ಜಂಗಮರ ಬಾಲಕ



ಭಿಕ್ಷಾಟನೆಯಲ್ಲಿ ತೊಡಗಿದ ಬುಡ್ಗಜಂಗಮ ವಯೋವೃದ್ಧೆ



ಬುಡ್ಗ ಜಂಗಮರ ಬುಡ್ಗ ವಾದ್ಯ



ಬುಡ್ಗ ಜಂಗಮರ ಜಂಬಲಮ್ಮ ಸುಂಕಲಮ್ಮ ದೈವ



ಬುಡ್ಗ ಜಂಗಮರ ಮದುವೆ ಹಸೆ ಚಿತ್ರ



ಬುಡ್ಗ ಜಂಗಮರ ಮದುವೆಯಲ್ಲಿ ಅರಿಶಿಣ ಹಚ್ಚಿಕೊಂಡ ಮಧುಮಕ್ಕಳು



ಬುಡ್ಗ ಜಂಗಮರ ಮದುವೆಯಲ್ಲಿ ಮಧುಮಕ್ಕಳಿಗೆ ಅರಿಶಿಣ ಹಚ್ಚುವುದು



ಬುಡ್ಗ ಜಂಗಮರ ಮದುವೆಯಲ್ಲಿ ಕಲಿಕುಂಡದ ಸನ್ನಿವೇಶ



ಬೇಟೆಯ ಸಿದ್ಧತೆಯಲ್ಲಿ ಬುಡ್ಗ ಜಂಗಮರು



ಬುಡ್ಗ ಜಂಗಮ ವಯೋವೃದ್ಧ



ಶ್ರೀಮತಿ ಬಿ ಟಿ ಲಲಿತಾನಾಯ್ಕ ಅವರೊಂದಿಗೆ ಬುಡ್ಗ ಜಂಗಮರು



ಶಿವ ವೇಷಧರಿ ಬುಡ್ಗ ಜಂಗಮ



ರಾಜ್ಯ ಮಟ್ಟದ ಸಂಚಾಲಕರ ಬುಡ್ಗ ಜಂಗಮರ ಸಭೆ, ಬೆಂಗಳೂರು



ಬುಡ್ಗ ಜಂಗಮರ ರಾಜ್ಯ ಮಟ್ಟದ ಸಮೀಕ್ಷಾವರದಿ ಸಭೆ, ಗುಂಡ್ಲಕೆರೆ




ರಾಜ್ಯ ಮಟ್ಟದ ಬುಡ್ಗ ಜಂಗಮಜರ ಕಲಾಮೇಳ ಹಾಗೂ ದಶಮಾನೋತ್ಸವದಲ್ಲಿ
'ಬುಡ್ಗ ಜಂಗಮರು' ಪುಸ್ತಕ ಬಿಡುಗಡೆ ಸಮಾರಂಭ, ಬೆಂಗಳೂರು



ಹಂಪಿ ಉತ್ಸವದಲ್ಲಿ ವಿಶೇಷ ವೇದಿಕೆ ವಹಿಸಿಕೊಟ್ಟ ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ನಿರ್ದೇಶಕ ಮನು ಬಳಿಗಾರ, ಜಿಲ್ಲಾಧಿಕಾರಿ ಅರವಿಂದ ಶ್ರೀವಾತ್ಸವ ಮತ್ತು
ಡಾ. ಕೆ.ಎಂ. ಮೇತ್ರಿ ಬುಡ್ಗ ಜಂಗಮರು ಕಲಾ ಪ್ರದರ್ಶನ ಪೋಷಕುದೊಂದಿಗೆ,ಹಂಪಿ



ರಾಷ್ಟ್ರಪತಿ ಶ್ರೀಮತಿ ಪ್ರತಿಭಾ ಪಾಟಿಲ ಅವರೊಂದಿಗೆ ರಾಷ್ಟ್ರಪತಿ ಭವನ ದೆಹಲಿಯಲ್ಲಿ
ಬುಡ್ಗ ಜಂಗಮ ಕಲಾವಿದೆ ನಾಡೋಜ ಬುರ‍್ರಕಥ ಈರಮ್ಮ



ಡುಮ್ಮಿ (ಡಕ್ಕೆ) ಕಲಾವಿದೆಯರು



ಬುಡ್ಗ ಜಂಗಮರ ಮನೆ ಮುಂದೆ ಚಾಪೆ ಹಾಕಿ ಹೆಣ್ಣು ಕೇಳುವ ಶಾಸ್ತ್ರ



ಶಾಸ್ತ್ರ ಹೇಳುತ್ತಿರುವ ಬುಡ್ಗ ಜಂಗಮ ಕಲಾವಿದ ಹೊಸದೊಡಿ, ರಾಮನಗರ